# ಮನೆತನದ ಗೌರವ

ಬೀchi

ಪ್ರಕಾಶಕರು :

ರಾಜಲಕ್ಷ್ಮಿ ಪ್ರಕಾಶನ

ಬಳೇಪೇಟೆ ಚೌಕ, ಬೆಂಗಳೂರು ೫೩.

# ಒಂದು ಮಾತು

ಸಾಹಿತಿ ಆದವನು ಸಮಾಜದ ತಾಯಿಯೂ ಹೌದು, ಅಂತೆಯೇ ಅದರ ನಾಯಿಯೂ ಹೌದು. ಅವನಿರುವ ಸಮಾಜದ ಒಂದು ಬಹು ಚಿಕ್ಕ ಭಾಗ ಅವನು ಎಂಬುದು ನಿಜ ಹೌದು, ಆದರೆ ತನ್ನ ಸಮಾಜವನ್ನು ಶುಚಿಯಾಗಿಡುವುದು ಅವನ ನೈತಿಕ ಹೊಣೆ. ಈ ಕರ್ತವ್ಯಪಾಲನೆಯ ಕ್ರಮವಾಗಿ ಅವನದಕ್ಕೆ ತಾಯಿಯಾಗಬೇಕು ಮತ್ತು ನಾಯಿಯಾಗಬೇಕು.

ಸಮಾಜ ಎಂಬುದು ಒಂದು ಉತ್ತು, ಬಿತ್ತಿದ ಬತ್ತದ ಗದ್ದೆಯಂತೆ. ಬಯಸಿದ ಬತ್ತವೂ ಬೆಳೆಯುತ್ತದೆ, ಅದರೊಡನೆ ಬೇಡಾದ ಹುಲ್ಲು ಕಡ್ಡಿ, ಕಸ ಮುಂತಾದುವೂ ಬೆಳೆಯುತ್ತವೆ. ಫಲ ಕೊಡುವ ಬತ್ತದ ಪೈರನ್ನು ಕಾಯುವುದು ಎಷ್ಟು ಅವಶ್ಯವೋ, ಪೈರಿನ ಸಮೃದ್ಧಿಗೆ ಮಾರಕವಾಗುವಂತಹ ಕಸ ಕಡ್ಡಿಗಳು ಬೆಳೆಯದಂತೆ ನೋಡಿಕೊಳ್ಳುವುದೂ ಅಷ್ಟೇ ಅವಶ್ಯ. ಸದ್ಗುಣಿಗಳು ಸಮಾಜದಲ್ಲಿ ಇದ್ದರು, ಇದ್ದಾರೆ, ಇರುತ್ತಾರೆ ಕೂಡ; ಅಂತೆಯೇ ದುರ್ಮತಿಗಳೂ. ಅವರನ್ನು ಪೋಷಿಸಬೇಕು, ಇವರನ್ನು ಓಡಿಸಬೇಕು. ಈ ಎರಡೂ ಕೆಲಸಗಳನ್ನು ಸಾಹಿತಿ ಮಾಡಬೇಕು, ಮಾಡುತ್ತಾನೆ.

ಕಳ್ಳ ಸ್ವಾಮಿ ಖೋಟಾ ನಾಣ್ಯವಿದ್ದಂತೆ. ಕೆಟ್ಟ ನಾಣ್ಯ ಒಳ್ಳೆಯ ನಾಣ್ಯವನ್ನು ಚಲಾವಣೆಯಿಂದ ಓಡಿಸುತ್ತದೆ ಎಂಬುದನ್ನು ನಾವು ಅರ್ಥಶಾಸ್ತ್ರದಿಂದ ಕಲಿಯುತ್ತೇವೆ. ಮಂತ್ರ, ತಂತ್ರ ಮಾಡುವ ಬಾಬಾಗಳಿಗೆ ಮತ್ತು ಖೋಟಾ ಸ್ವಾಮಿ, ಸಂನ್ಯಾಸಿಗಳಿಗೆ ಜನತೆಯ ಬುದ್ಧಿಯ ದೌರ್ಬಲ್ಯವೇ ಆಹಾರ. ಅಂತೆಯೆ ಪ್ರಜೆಯ ಮಂದಮತಿಯೇ ಅಯೋಗ್ಯ ರಾಜಕಾರಿಣಿಗೆ ಅನ್ನ. ಸಾಮಾನ್ಯ ಜನ ಎಂದೆನಿಸಿಕೊಳ್ಳುವವರು ಮಾತ್ರ ಇವರಿಗೆ ಬಲಿಯಾಗುತ್ತಾರೆ ಎಂಬುದು ಅಷ್ಟು ಸರಿಯಲ್ಲ. ವಿದ್ಯಾವಂತರು—ಡಿಗ್ರಿವಂತರೇ ವಿದ್ಯಾವಂತರು ಎಂಬುದಾದರೆ—ಇನ್ನೂ ಹೆಚ್ಚು ಬೇಗ, ಮತ್ತು ಹೆಚ್ಚಿನ ಸಂಖ್ಯೆಯಲ್ಲಿ ಬಲಿಯಾಗುತ್ತಾರೆ. ಏಕೆ ? ಇವರು ಓದಿದ ಪಠ್ಯ ಪುಸ್ತಕಗಳು ಇವರ ಮೇಲೆ ಯಾವ ಪ್ರಭಾವವನ್ನೂ ಬೀರಿಲ್ಲ, ಇವರು ಕಲಿತ ವಿಜ್ಞಾನ ಇವರ ಕಂಣಿನ ಅಜ್ಞಾನದ ಪೊರೆಯನ್ನು ಹರೆಯಲಿಲ್ಲ. ಸಮಾಜಕ್ಕೆ ವಿದ್ಯಾವಂತನಾದ ಹಳೆಯ ಕಂದಾಚಾರಗಳ ಮನುಷ್ಯನಿಂದ ಅವಿದ್ಯಾವಂತನಕಿಂತಲೂ ಹೆಚ್ಚು ಅಪಾಯವಿದೆ. ಇಂದು ಇದನ್ನು ನಮ್ಮ ಸಮಾಜದಲ್ಲಿ ನಾವು ಹೇರಳವಾಗಿ ಕಾಣುತ್ತಿದ್ದೇವೆ. ಇದನ್ನೆಲ್ಲ ತಿದ್ದುವುದು ಸಾಹಿತಿಯ ತಲೆಯ ಮೇಲೆ ಬಿದ್ದ ಜವಾಬ್ದಾರಿ. ಸದ್ಗುಣಗಳನ್ನು ಎತ್ತಿ ತೋರಿಸಿ ಅವರ ಪೋಷಣೆಯನ್ನು ಮಾಡುವುದು ತಾಯಿಯ ಕರ್ತವ್ಯ. ಅಂತೆಯೆ ಕಳ್ಳರನ್ನು

ಬೆರಳುಮಾಡಿ ತೋರಿಸಿ ಸಮಾಜವನ್ನು ಎಚ್ಚರಿಸುವುದು ನಾಯಿಯ ಹೊಣೆ. ಈ ಎರಡನ್ನೂ ಮಾಡುತ್ತಾನೆ ಸಾಹಿತಿ, ಅದವನ ಗುರಿ.

ಪ್ರಾಯಶಃ ಈ ಎರಡನೆ ಕೆಲಸವೇ ಹೆಚ್ಚಾಗಿ ಆಗಿದೆ ಈ ಪುಸ್ತಕದಲ್ಲಿ ಎಂದು ಯಾರಾದರೂ ಅಂದರೆ, ಇರಬಹುದು ಎಂದನ್ನುತ್ತೇನೆ. ಈ ಸಂಗ್ರಹದಲ್ಲಿ ಸೇರ್ಪಡೆ ಆಗಿರುವ ಹೆಚ್ಚು ಲೇಖನಗಳು 'ಪ್ರಜಾಮತ' ವಾರಪತ್ರಿಕೆಯಲ್ಲಿ ಆಗಾಗ ಪ್ರಕಟವಾಗಿವೆ. ಉಳಿದುವು ಬೇರಿತರ ಪತ್ರಿಕೆಗಳಲ್ಲಿ ಬಂದಿವೆ. ಇವು ಕೇವಲ 'ನಗದವರನ್ನು ನಗಿಸುವ ಕತೆ'ಗಳಲ್ಲ—ನಗುವಾಗ ಥಟ್ಟನೆ ನಿಂತು ಒಂದರೆಕ್ಷಣ ಯೋಚಿಸುವಂತೆಯೂ ಮಾಡುತ್ತವೆ ಎಂದು ಭಾವಿಸುತ್ತೇನೆ. ಇವುಗಳ ಉದ್ದಿಶ್ಯ ಇಷ್ಟೇ, ಇಷ್ಟನ್ನು ಮಾಡಿದರೆ ನಾನು ಬಯಸಿದ ಪ್ರತಿಫಲ ನನಗೆ ದೊರೆಯಿತು.

ಈ ಸಂಗ್ರಹವನ್ನು ಪ್ರಕಟಿಸಿದ ರಾಜಲಕ್ಷ್ಮಿ ಪ್ರಕಾಶನದ ಮಾಲೀಕರಿಗೂ ಮತ್ತು ಇವನ್ನು ಆಗಾಗ ಪ್ರಕಟಿಸಿದ ಪತ್ರಿಕೆಗಳ ಸಂಪಾದಕರಿಗೂ ನನ್ನ ನೆನೆಕೆಗಳು ಸಲ್ಲುತ್ತವೆ.

'ತಿಂಮನ ಮನೆ'
ನಂಜಪ್ಪ ರಸ್ತೆ, ಶಾಂತಿನಗರ
ಬೆಂಗಳೂರು-೨೭

ಬೀchi
೧೫-೨-೭೪.

# ಪರಿವಿಡಿ

# ಮನೆತನದ ಗೌರವ

ಆನಂದ್ ಬಸ್ ಸ್ಟಾಪ್‌ನಲ್ಲಿ ನಿಂತೇ ಇದ್ದ. ಹದಿನಾರನೇ ನಂಬರ್ ಬಸ್ಸುಗಳು ಬಂದುವು, ಅಲ್ಲಿ ಕಾದಿದ್ದ ಒಬ್ಬಿಬ್ಬರನ್ನು ಏರಿಸಿಕೊಂಡು ಓಡಿದುವು. ಒಂದು, ಎರಡು, ಮೂರು—ಆನಂದ್ ಮಾತ್ರ ಕಲ್ಲುಕಂಬದಂತೆ ಹಾಗೆಯೇ ನಿಂತಿದ್ದ. ಅದೆತ್ತಲೋ ದೃಷ್ಟಿ, ಅದೇನೋ ಯೋಚನೆ. ಮುಖದಲ್ಲಿ ಮೂಡಿದ್ದ ಗೆರೆಗಳು ಅವನ ಮನದ ದುಗುಡವನ್ನು ಹೇಳುತ್ತಿದ್ದುವು.

ಕೆಲ ಹೊತ್ತಿನಿಂದ ಅಲ್ಲಿಯೇ ನಿಂತು ಇದನ್ನು ಗಮನಿಸಿದ ಪೋಲೀಸ್ ಯಂಕ್ಟಯ್ಯ ಹಾಗೆಯೇ ಅತ್ತ ಇತ್ತ ತಲಾಯಿಸಿದಂತೆ ಮಾಡಿ, ಒಂದು ಬಾರಿ ಪಿಚಕ್ ಎಂದು ಉಗಿದು ಇತ್ತ ಬಂದ.

"ಯಾಕಯ್ಯಾ ಬಸ್ ಏರಲಿಲ್ಲ ? ಎರಡು ಹೋದುವು ಹದಿನಾರು. ಎಲ್ಲಿಗೆ ಹೋಗಬೇಕು ನೀನು ?"

ಪೋಲೀಸ್ ದನಿಯಲ್ಲಿ ಕೇಳಿ ದುರುಗುಟ್ಟಿ ಮುಖ ನೋಡಿದ.

ಪೋಲೀಸ್ ಪೇದೆ ನೀನು ತಾನು ಎಂದು ಏಕವಚನದಲ್ಲಿ ಮಾತನಾಡಿಸುವಂತಿತ್ತು ಆನಂದ್‌ನ ವೇಷ. ಎಂಣೆ ಕಾಣದ ಕ್ರಾಪು, ಗಡ್ಡ ಪ್ರಾಯಶಃ ಒಂದು ವಾರದ ಫಸಲಿರಬೇಕು. ಟೈಟ್ ಪ್ಯಾಂಟ್ ಒಳ್ಳೆ ದುಬಾರಿ ಬೆಲೆಯ ಟೆರಿಲಿನ್ ನಿಜ. ಆದರೆ ಅದು ಲಾಂಡ್ರಿಯನ್ನು ಕಂಡುದುದು ಯಾವ ಶತಮಾನದಲ್ಲಿ ? ಧರಿಸಿದ್ದ ಬುಶ್‌ಕೋಟು ಅಲ್ಲಲ್ಲಿ ಸಾಕಷ್ಟು ಮೆತ್ತಗಾಗಿ ಒಳಗಡೆ ಬನಿಯನ್ ಇಲ್ಲ

ಎಂದು ಚಾಡಿ ಹೇಳುತ್ತಿತ್ತು. ಸಾಲದುದಕ್ಕೆ ಬರಿಗಾಲು. ಈ ವೇಷ ಭೂಷಣ ಗಳ ಮನುಷ್ಯನನ್ನು ಪೋಲೀಸು 'ಮಹಾಸ್ವಾಮೀ!' ಎಂದು ಗೌರವಯುತವಾಗಿ ಸಂಬೋಧಿಸಲು ಸಾಧ್ಯವೆ? ಬರೀ ಇಷ್ಟೇ ಅಲ್ಲ, ಯಂಕ್ಟಯ್ಯ ಆನಂದ್‌ನನ್ನು ಅದೊಂದು ಬಗೆಯ ಸಂಶಯ ದೃಷ್ಟಿಯಿಂದಲೂ ನೋಡಿದ.

ಆನಂದನಿಗೆ ಇದು ಅರ್ಥವಾಗದೆ? ಈರ್ವರೂ ಅವರವರ ಕಸುಬಿನಲ್ಲಿ ಚೆನ್ನಾಗಿ ನುರಿತ ಅನುಭವಿಗಳು, ಸಿದ್ಧಹಸ್ತರು.

"ನಮ್ಮೂವ ಬರಬೇಕಿತ್ತೂ....ಅದಕ್ಕೇ...."

ಥಟ್ಟನೆ ಉತ್ತರವನ್ನು ಆರಂಭಿಸಿ ಆನಂದ್ ಸಾವಕಾಶವಾಗಿ ಎಳೆಯುತ್ತ ಅರ್ಧದಲ್ಲಿಯೆ ಮುಗಿಸಿದ. ಆ ಕೂಡಲೆ ಹೊರಟ, ದೊಡ್ಡದೊಡ್ಡ ಹೆಜ್ಜೆಹಾಕುತ್ತ. ಅಲ್ಲಿಗೆ ಅವನ ತಲೆ ಇನ್ನೂ ದೊಡ್ಡ ದೊಡ್ಡ ಹೆಜ್ಜೆ ಹಾಕುತ್ತ ಸಾಗಿತ್ತು, ಎಲ್ಲಿಗೆ ಹೋಗುವುದು?

ಬೆಂಗಳೂರಿಗೆ ಆನಂದ್ ಹೊಸಬನೇ? ಹೌದು, ಮತ್ತೂ ಅಲ್ಲ. ಕೇವಲ ಹತ್ತು ವರ್ಷದ ಹುಡುಗನಾಗಿದ್ದಾಗ ಬೆಂಗಳೂರಿಗೆ ಬಂದಿದ್ದ. ಎಂಟೊಂಭತ್ತು ವರ್ಷಗಳು ಇಲ್ಲಿಯೇ ಇದ್ದ. ಅನಂತರ ಬೆಂಗಳೂರನ್ನು ಬಿಟ್ಟವನು ಹನ್ನೆರಡು ವರ್ಷಗಳಾದ ಮೇಲೆ ಈಗ ಮತ್ತೆ ಬೆಂಗಳೂರಿಗೆ ಬಂದಿದ್ದಾನೆ. ಎಲ್ಲವೂ ಹೊಸ ಹೊಸದಾಗಿ ಕಾಣುತ್ತಿದೆ. ಆ ಬೆಂಗಳೂರೇ ಈ ಬೆಂಗಳೂರೇ ಅನಿಸುವಂತಾಗಿದೆ ಅವನಿಗೀಗ. ಏನಾಶ್ಚರ್ಯ? ಕತ್ತರಿಯನ್ನು ಕಾಣದ ಕಲಾವಿದನ ಕ್ರಾಪಿನಂತೆ ಎಲ್ಲಿ ಬೇಕಲ್ಲಿ, ಎಷ್ಟು ಬೇಕಷ್ಟು, ಹೇಗೆ ಬೇಕೋ ಹಾಗೆ ಹುಚ್ಚಾಬಟ್ಟೆ ಬೆಳೆದಿದೆ, ಕೆಂಪೇಗೌಡನ ಈ ಬೆಂದಕಾಳೂರು.

ಕೊಂಚ ದೂರದಿಂದಲೇ ಲಾಲ್‌ಬಾಗ್ ಕಂಣಿಗೆ ಬಿತ್ತು. ಲಾಲ್‌ಬಾಗ್ ಆಗಲೂ ಇತ್ತು, ಈಗಲೂ ಇದೆ. ಕಬ್ಬಿಣ ಸಲಾಕೆಯ ಕಾಂಪೌಂಡ್ ಹೋಗುತ್ತ ಬಂದಿದೆ, ಅದರ ಸ್ಥಳದಲ್ಲಿ ಗಾರೆಗೋಡೆ ಏಳುತ್ತಲಿದೆ. ಹೌದು ಮತ್ತೆ, ಕಂಟ್ರಾಕ್ಟರ್‌ಗಳು ಬದುಕುವುದು ಬೇಡವೆ? ಏಕೆಂದರೆ ಸಂಬಂಧಪಟ್ಟ ಪುಡಿ ಅಧಿಕಾರಿ ದೇವರುಗಳು ಬದುಕಲೇ ಬೇಕು. ದೇಶ ಸ್ವತಂತ್ರವಾಗಿದೆಯೋ ಇಲ್ಲವೋ, ಇವರಂತೂ ಸರ್ವಸ್ವತಂತ್ರರಾಗಿದ್ದಾರೆ—ಮನದಲ್ಲಿಯೇ ಹೀಗೇನೇ ನನ್ನೋ ಅಂದುಕೊಳ್ಳುತ್ತ ಆನಂದ್ ಲಾಲ್‌ಬಾಗ್ ಪಶ್ಚಿಮಗೇಟಿನಿಂದ ಒಳಬಂದ.

'ಕಳ್ಳೇಕಾಯ್ ! ಕಳ್ಳೇಕಾಯ್'

ಚಿಕ್ಕ ಹುಡುಗನ ಕೂಗೊಂದು ಕಿವಿಗೆ ಬಿತ್ತು. ಕೂಡಲೆ ಆನಂದನ ಹೊಟ್ಟೆ ಹಸಿವು ಅಂದಿತು. ತಲೆಯಲ್ಲೊಂದು ಪ್ರಶ್ನೆ ಎದ್ದಿತು.

'ನಾನು ಉಂಡದ್ದು ಯಾವಾಗ ?....ಅಲ್ಲ....ಎಂದು ?'

ತಲೆ ಕೆರೆದ. ನೆನಪಾಗಲಿಲ್ಲ. ಹಾಂ ! ಬೇರೊಂದು ನೆನಪಾಯಿತು. ಹಿಂದಿನ ದಿನ ಬೆಳಿಗ್ಗೆ ತನ್ನ ಬಳಿ ಇದ್ದ ಪುಡಿಕಾಸನ್ನೆಲ್ಲ ಕೊಟ್ಟು ಒಂದು ಬನ್ನು, ಎರಡು ಅರೆ ಕೊಳೆತ ಬಾಳೆಹಣ್ಣು ತಿಂದಿದ್ದ. ಅದೇ ಅವನ ಕಟ್ಟಕಡೆಯ ಊಟ. ಅನಂತರ ? ಇದೇನು ಹಳ್ಳಿಕೊಂಪೆಯೇ—ಇದು ಬೆಂಗಳೂರು—ಜೇಬು ಬರಿದಾದರೆ ಹೊಟ್ಟೆಯೂ ಬರಿದು. ಬರಿಗೈಯಿಂದ ಮನೆಗೆ ಬಂದರೆ ಅವನ ಮನೆಯಲ್ಲಿಯೇ ಅವನು ಅಪರಿಚಿತ.

ಇದನ್ನೆಲ್ಲ ಹೊಟ್ಟೆ ಕೇಳುತ್ತದೆಯೇ ? ಹಟಮಾರಿ ಮಗುವಿನಂತೆ ಹಸಿವೂ ಎಂದು ಅಳಲು ಸುರುಮಾಡಿತು.

ಗ್ಲಾಸ್‌ಹೌಸ್ ಬಳಿ ಸುತ್ತಾಡಿದ. ಪ್ಲಿಮತ್ ಕಾರೊಂದು ಆ ಉದ್ದಕ್ಕೂ ನಿಂತಿತ್ತು. ಹಿಂದಿನ ಸೀಟಿನಲ್ಲಿ–ಅಲ್ಲ, ಕ್ಷಮಿಸಿ–ಸೀಟಿನ ತುಂಬ ಒಬ್ಬ ಸೇಠಮ್ಮ ಕುಳಿತ್ತಿದ್ದಳು. ಸಿಂಧಿ ಹೆಣ್ಣು ಎಂದು ಆಕೆಯ 'ಸೈಜೇ' ಹೇಳಿತು. ಆ ಸಿಂಧಿ ಹಸು ಏನನ್ನೋ ತಿನ್ನುತ್ತಿದ್ದಿತು. ಆನಂದನ ಬಾಯಿ ನೀರೊಡೆಯಿತು.

"ಮೂರು ದಿನ ಆತೆಮ್ಮಾ ಊಟ ಮಾಡಿ. ಹೆಂಡತಿ ಸತ್ತಳು. ನಾಲ್ಕು ಮಕ್ಕಳು ಉಪಾಸ. ಏನಾದರೂ...."

ಕೈ ಚಾಚುತ್ತ ಬಾಯಿ ತೆರೆದ ಆನಂದ್. ಅದೆಲ್ಲಿಯೋ ನಿಂತಿದ್ದ ಡ್ರೈವರ್ ಹುಲಿಯಂತೆ ಮೈಮೇಲೆಯೇ ಏರಿ ಬಂದ.

"ಜಾವ್ ಮಾದರ್...."

ಬಾಯಲ್ಲಿದ್ದುದನ್ನು ಒಂದೇ ಬಾರಿಗೆ ಮುಗಿಸಿ ದುರುಗುಟ್ಟಿ ನೋಡುತ್ತ ದಯಾಮಯಿ ಸೇಠಮ್ಮ ನುಡಿದಳು.

"ಸೋಮಾರಿ ಆದ್ಮಿ ಹೈ"

ಈ ಮಾತು ಸಿಂಧಿ ಹೆಣ್ಣಿನ ಬಾಯಿಂದ ? ಅತಿಯಾಗಿ ತಿಂದು, ತಿಂದುದನ್ನು ಜೀರ್ಣಿಸಲು ಡಾಕ್ಟರನನ್ನು ಮನೆಗೆ ಕರೆಯಿಸಿ ಔಷಧಿ ತೆಗೆದುಕೊಳ್ಳುವ

ಸೀತಮ್ಮನ ಕಂಣಲ್ಲಿ ಆನಂದ ಸೋನೂರಿ! ಚಿಕ್ಕದಾಗಿ ನಗೆ ಮೂಡಿತು ಅವನ ಮುಖದಲ್ಲಿ. ಬಿಕ್ಷೆಗೆ ಹೊರಟವನಿಗೆ ಭವಿಷ್ಯ ಇಲ್ಲವೇ? ಅವನ ಭವಿಷ್ಯ ಅಪಾರ. ಮಹಾ ಆಶಾವಾದಿ ಅವನು.

ನೀನಲ್ಲದಿದ್ದರೆ ನಿನ್ನಪ್ಪನಂತಹನು ಸಿಕ್ಕುತ್ತಾನೆ ಎಂದಂದುಕೊಳ್ಳುತ್ತ ಆನಂದ್ ಮುಂದು ಸಾಗಿದ. ಅವನಂದುಕೊಂಡುದು ಸುಳ್ಳಾಗಲಿಲ್ಲ, ಸೀತಮ್ಮನ ಅಪ್ಪ ಮತ್ತು ಅಜ್ಜನಂತಹರೇ ಸಿಕ್ಕರು ಕಲ್ಲುಗುಡ್ಡದಡಿಯಲ್ಲಿ. ಮೂವರು ಕುಳಿತಿದ್ದರು ವೃದ್ಧರು. ಪಿಂಚಿನಿಯಾದವರು ಎಂದವರ ಉಡುಪು ಹೇಳಿತು, ಸಂಬಳದಕಿಂತಲೂ ಪಿಂಚಿನಿಯನ್ನೇ ಹೆಚ್ಚು ತಿಂದಿದ್ದಾರೆ ಎಂದವರ ಮುಖ ಹೇಳಿತು. ಕೊಂಚ ದೂರದಲ್ಲಿ ಕುಳಿತ ಆನಂದ್. ಒಂದು ಬಾರಿ ಕಂಣು ಹೊರಳಿಸಿದ. ಬಹು ಪುರಾತನ ಕಾಲದ ಎತ್ತುಗಳು. ಮಿತಸಂತಾನದ ಮಾತೂ ಬಾರದು. ಆ ವಯಸ್ಸಿನ ಜನ, ಪಾಪ!

ಒಬ್ಬ ಮುದುಕರು ಮಾತನಾಡಲು ಆರಂಭಿಸಿದರು, ಹಿಂದೆಯೇ ಇನ್ನೊಬ್ಬರ ಕೆಮ್ಮು ಸುರುವಾಯಿತು. ಇಬ್ಬರ ಮಾತು ಆಗಿಷ್ಟು, ಈಗಿಷ್ಟು– ಇವರ ಕೆಮ್ಮು ಮಾತ್ರ ಸದಾ, ಸರ್ವದಾ. ಪಾಪ! ಅಸ್ತಮ ರೋಗವಿರಬೇಕು ಎಂದು ಮನದಲ್ಲಿಯೆ ಅಂದುಕೊಂಡ ಹೆಚ್ಚು ಇಂಗ್ಲೀಷ್ ಬಾರದ ಆನಂದ್. ಆ ಅವಿಚ್ಛಿನ್ನವಾದ, ಅವಿಭಕ್ತವಾದ, ಅವಿರತವಾದ, ಅವ್ಯವಚ್ಛಿನ್ನವಾದ, ನಾನ್ ಸ್ಟಾಪ್ ಕೆಮ್ಮಿನ ಹಿಮ್ಮೇಳದಲ್ಲಿಯೇ ಇನ್ನಿಬ್ಬರಾಡುತ್ತಿದ್ದ ಮಾತು ಹರಕು ಮುರುಕಾಗಿ ಆನಂದನ ಕಿವಿಗೆ ಬಿತ್ತು.

"ಸರಕಾರಕ್ಕೆ ಗೊತ್ತು ಕಣಯ್ಯಾ, ನಾವು ಹೇಳಿ ಕೇಳಿ ಪಿಂಚಿನಿದಾರರು, ಹೇಗೂ ಸ್ಟ್ರೈಕ್ ಮಾಡುವಂತಿಲ್ಲ. ಡಿ. ಎ. ಹೆಚ್ಚಿಸಿ, ಹೆಚ್ಚಿಸಿ ಎಂದು ಬರೀ ಪೇಪರ್‌ಗಳಲ್ಲಿ ನಾವು ಬರೆದರೆ ಯಾರಯ್ಯಾ ಕೇಳುತ್ತಾರೆ? ಇದಕ್ಕೆಲ್ಲ ಒಂದೇ ಔಷಧಿ. ಒಬ್ಬ ಇಂಡಿಕೇಟ್ ಎಂ. ಎಲ್ ಏ. ನನ್ನೇ ಹಿಡಿಯಬೇಕು...."

ಇಲ್ಲಿ ಕುಳಿತರೆ ತನ್ನ ಸಮಯವೇ ವ್ಯರ್ಥ ಎಂಬದನ್ನು ಯಾರಾದರೂ ಹೇಳಬೇಕೇ ಆನಂದನಿಗೆ? ಹೆಚ್ಚು ಕಾಲ ಕುಳಿತರೆ ನಾನೇ ಇವರಿಗೆ ಏನಾದರೂ ಕೊಡಬೇಕಾಗುತ್ತದೆ ಎಂದು ಬಾಯಲ್ಲಿಯೆ ಅಂದುಕೊಳ್ಳುತ್ತ ಅಲ್ಲಿಂದ ಕಂಬಿ ಕಿತ್ತಿದ, ಕಲ್ಲುಗುಡ್ಡದ ನೆತ್ತಿಯನ್ನೇರಿದ.

ಐದಾರು ಯೌವನದ ಗಂಡು, ಹೆಣ್ಣುಗಳು ಕಿಲಕಿಲನೆ ನಗುತ್ತಿದ್ದುವು. ಒಂದರೆಕ್ಷಣ ನಿಂತು ನೋಡಿದ. ಇವುಗಳಲ್ಲಿ ಗಂಡು ಯಾವು, ಹೆಣ್ಣು ಯಾವು ? ಪೋಷಾಕಿನಿಂದ ತಿಳಿಯುವುದಂತೂ ಆಗದ ಮಾತು. ಅದನ್ನು ತಿಳಿದು ನಾನು ಮಾಡುವುದೇನಿದೆ ? ಅವುಗಳಿಗೆ ಗೊತ್ತಿದೆ, ಸಾಕು.

ಪರವಾ ಇಲ್ಲ, ಬೆಂಗಳೂರೂ ಮುಂದುವರಿದಿದೆ, ಮುಂಬಯಿ ಆಗಿದೆ.

ಮನದಲ್ಲಿಯೇ ಅಂದುಕೊಂಡ, ಕೊಂಚ ಸಸಿಯ ಬಂದು ಸಪ್ಪೆ ಮುಖ ಮಾಡಿ ಕೈಯೊಡ್ಡಿ ಕೇಳಿದ.

"ಹೆಂಡತಿ ಆಸ್ಪತ್ರೆಯಲ್ಲಿದ್ದಾಳೆ....ಐದು ದಿನದಿಂದ ಉಪವಾಸ ಇದ್ದೇನಿ. ಏನಾದರೂ ಚಾರಿಟಿ...."

ಒಂದು ಹೆಣ್ಣು 'ಚಾರಿಟಿ' ಕೊಟ್ಟಿತು—ಆನಂದನ ಕೈಯಲ್ಲಿ ಒಂದು ಸಿಗರೇಟು ಬಿತ್ತು.

ಹಸಿವಿನಿಂದ ನರಳುವವನಿಗೆ ಸಿಗರೇಟು ಕೊಡುತ್ತದೆ—ಇದು ಜಗತ್ತು. ಇದೇ ಜಗತ್ತು. ಇದಕ್ಕೆ ನಾನೇ ಬುದ್ಧಿ ಕಲಿಸುತ್ತೇನೆ ಎಂದು ಬಾಯಲ್ಲಿ ಅಂದು ಕೊಳ್ಳುತ್ತ ಈಚೆಗೆ ಬಂದ. ದುಡುದುಡು ನಡೆದ ತಲೆಬಾಗಿ.

ಅದೆಷ್ಟು ದೂರ ಸಾಗಿದನೋ ಅವನಿಗೇನು ಗೊತ್ತು ? ದೂರವೂ ತಿಳಿಯದು, ದಾರಿಯೂ ತಿಳಿಯದು. 'ವಿಜಯಲಕ್ಷ್ಮಿ ಟಾಕೀಸ್' ಎಂಬ ಬಣ್ಣದ ದೀಪದ ಅಕ್ಷರಗಳು ಅಷ್ಟು ದೂರದಿಂದಲೆ ಕಣ್ಣಿಗೆ ಬಿದ್ದುವು. ಇತ್ತ ಧಾವಿಸಿದ, ಹನುಮನ ಬಾಲದಂತೆ ಆ ಉದ್ದಕ್ಯೂ ಕ್ಯೂ ನಿಂತಿತ್ತು. ತುಟ್ಟ ತುದಿಯಲ್ಲಿ ನಿಂತಿದ್ದ ವ್ಯಕ್ತಿಯನ್ನು ಗಮನಿಸಿದ. ಸೀರೆಯ ಉದ್ದದ ಪಂಚೆ, ಹಿಂದೂ ಮುಂದೂ ಪಂಚೆ ಕಚ್ಚೆ. ಕಾಲಲ್ಲಿ ಚರ್‌ಚರ್ ಅನ್ನುವ ಮೆಟ್ಟು, ಅದಕ್ಕೆ ಕೆಂಪು ಹರಳಿನ ಸಿಂಗಾರ. ಕತ್ತಿನವರೆಗೂ ಮುಚ್ಚಿದ ಕೋಟು. ತಲೆಯ ಮೇಲೆ ಬಣ್ಣದ ರುಮಾಲು. ಹಲ್ಲು ಶುದ್ಧ ಕೆಂಪು. ಆಗಾಗ್ಗೆ ಎಡಗೈಯಿಂದ ಕೋಟಿನ ಒಳಜೇಬನ್ನು ಮೇಲಿಂದ ಮುಟ್ಟಿಕೊಳ್ಳುತ್ತಿದ್ದ. ಕೂಡಲೆ ನಿರ್ಧರಿಸಿದ ಆನಂದ್. ಇವನು ಬೆಂಗಳೂರಿನವನಂತೂ ಅಲ್ಲ—ಉತ್ತರ ಭೂಪ, ಉತ್ತರ ಕರ್ನಾಟಕದವನೇ ಇರಬೇಕು.

"ಮಗು ಸತ್ತಿದೆ ಸ್ವಾಮಿ! ಮಣ್ಣುಮಾಡಲಿಕ್ಕೆ ಕಾಸಿಲ್ಲ, ಏನಾದರೂಕೊಡಿ"

ಅಂಗಲಾಚಿ ಕೇಳಿದ. ಹಿಂದೆಯೇ ಬಂತು ದಯಾಪೂರಿತವಾದ ಉತ್ತರ:

"ಹೋಗೋ ಮಗನೆ ! ಕತ್ತಿ ಆಗೇದಿ, ದುಡಿದು ತಿನ್ನು. ನಾಚಿಕಿಲ್ಲೇನು ಬಿಕ್ಷೆ ಬೇಡಲಿಕ್ಕೆ ?"

ಮುಂದಿನ ಮಾರ್ಗ ? ಆನಂದ್ ಯೋಚಿಸುತ್ತ ಕ್ಷಣಕಾಲ ಅಲ್ಲಿಯೇ ನಿಂತ. ದೇವರು ಯಾವಾವ ರೂಪದಲ್ಲಿ ಬಂದು, ಯಾರಾರ ಕಷ್ಟವನ್ನು, ಹೇಗ್ಹೇಗೆ ಪರಿಹಾರ ಮಾಡುತ್ತಾನೆಂಬುದನ್ನು ಹೇಳಲು ಯಾರಿಗೆ ತಾನೆ ಸಾಧ್ಯ ? ಇದ್ದಕಿದ್ದಂತೆ 'ಭರ್' ಎಂದು ಕಲ್ಲುಗಳು ಬೀಸಿಬಂದವು. 'ಡೌನ್ ವಿತ್ ಟ್ಯಾಮಿಲ್' ಎಂಬ ಕೂಗು ಮುಗಿಲವರೆಗೂ. ಚಳವಳಿಕಾರರು ದಪ್ ದಪ್ ಓಡುತ್ತ ಬಂದರು. ಹಿಂದೆಯೇ ಪೋಲೀಸ್. ಲಾಠಿ ಚಾರ್ಜ್, ಟಿಯರ್ ಗ್ಯಾಸ್ ಪ್ರಯೋಗವಾಯಿತು. ಥಿಯೇಟರ್ ಮುಂದು ನಿಂತಿದ್ದ 'ಕ್ಯೂ' ಇದ್ದ ಕಿದ್ದಂತೆ 'ಎಕ್ಸ್' ಆಯಿತು. ಯಾರಾರೋ ಎಲ್ಲೆಲ್ಲೋ ಆದರು, ಉತ್ತರ-ಭೂಪನ ಕೋಟಿನ ಒಳ ಜೇಬಿನಲ್ಲಿದ್ದ ಮನಿಪರ್ಸ್ ಮಾಯವಾಯಿತು. 'ಕಳ್ಳ ! ಹಿಡಿ ಹಿಡಿರಿ' ಎಂದು ಕೂಗುತ್ತ ಉತ್ತರಭೂಪ ಬೆನ್ನು ಹತ್ತಿದ, ಆನಂದ್ ಜಿಂಕೆಯ ಓಟ ಬಿಟ್ಟ. ಸನಿಯದಲ್ಲಿ ನಿಂತಿದ್ದ ಆಟೋರಿಕ್ಷಾದಲ್ಲಿ ಹಾರಿ ಕುಳಿತು 'ಹೂಂ, ಕಂಟ್ರೋಲ್‌ಮೆಂಟ್' ಎಂದಪ್ಪಣೆ ಇತ್ತ. ಹಿಂದೆಯೇ ಇನ್ನೊಂದು ರಿಕ್ಷಾ, ಅದರಲ್ಲಿ ಉತ್ತರ ಭೂಪ.

"ಏ ಸಾಯ್ಬಾ ! ಆ ರಿಕ್ಷಾ ಹಿಡಿ ನೀನು, ಮೀಟರ್ ಮ್ಯಾಲೆ ಒಂದು ರೂಪಾಯಿ ಬಕ್‌ಷೀಸ್"

ದಾರಿಯಲ್ಲಿ ಪೋಲೀಸರ ಕಾಟವಿಲ್ಲ, ರಿಕ್ಷಾಗಳು ಹೊಚ್ಚ ಹೊಸ ಕಾರು ಗಳಂತೆ ಓಡಿದುವು ಒಂದರ ಹಿಂದೊಂದು.

ಆನಂದನ ರಿಕ್ಷಾ ಕಂಟೋನ್‌ಮೆಂಟಿನ ರಿಕ್ಷಾ ಸ್ಟ್ಯಾಂಡಿನಲ್ಲಿ ಬಂದು ನಿಂತಿತು, ಅದರ ಹಿಂದು ಉತ್ತರಭೂಪನ ರಿಕ್ಷಾ ನಿಂತಿತು.

"ಎಲ್ಲಿ ಇಳಿದ ಆ ಮಗ ? ಆ ಬದ್ಮಾಷ್ ಎಲ್ಲಿ ?"

"ಆಫೀಸರ್ಸ್ ವೇರ್ ಹೌಸ್"

ಎಂದಂದ ರಿಕ್ಷಾ ಡ್ರೈವರ್, ಇತ್ತ ತಿರಿಗಿ ಸಹ ನೋಡದೆ.

ಆವೇಶದಲ್ಲಿದ್ದ ಉತ್ತರಭೂಪ ಅರೆಕ್ಷಣವೂ ಅಲ್ಲಿ ನಿಲ್ಲಲಿಲ್ಲ. ತಾನು

ಬಂದಿದ್ದ ರಿಕ್ಷಾದವನ ಕೈಯಲ್ಲಿ ಕಾಸು ಎಸೆದು ದುಡುದುಡು ನಡೆದ. ಆಫೀಸರ್ಸ್ ವೇರ್ ಹೌಸ್ ಆತನಿಗೆ ಹೊಸತೆ ? ಕಳೆದ ವರ್ಷ ಒಂದೆರಡು ಬಾರಿ ತಾನೂ ಅದೇ ಅಂಗಡಿಯಲ್ಲಿ ಬಟ್ಟೆಗಳನ್ನು ಕೊಂಡಿದ್ದ. ಅದನ್ನು ಹುಡುಕುತ್ತ ಇತ್ತ ಬಂದ. ಎಡಕ್ಕೆ ತಿರುಗುವ ಬದಲು ಬಲಕ್ಕೆ ತಿರುಗಿದ. ದುಡು ದುಡು ನಡೆದ ಉದ್ದಕ್ಕೂ ಬೋರ್ಡುಗಳನ್ನು ಓದುತ್ತ. ರಸ್ತೆಯ ಈ ತುದಿಯವರೆಗೂ ಬಂದ, ಆಫೀಸರ್ಸ್ ವೇರ್ ಹೌಸ್ ಎಂಬ ಬೋರ್ಡೇ ಕಾಣಲಿಲ್ಲ. ಗರಕ್ಕನೆ ಹಿಂತಿರುಗಿದ, ಅವರಿವರನ್ನು ಕೇಳುತ್ತ. ತನ್ನ ಪರಿಚಿತ ಅಂಗಡಿಗಾಗಿ ಹುಡುಕಾಡಿದ. ಕಡೆಗೂ ಸಿಕ್ಕಿತು ಆಫೀಸರ್ಸ್ ವೇರ್ ಹೌಸ್, ಒಳಬಂದು ನೋಡಿದಾಗ ಅಂಗಡಿಯ ಮಾಲೀಕನೊಬ್ಬನೇ ಪೈಪ್ ಸೇದುತ್ತ ಕುಳಿತಿದ್ದ.

"ಯಾರಾದರೂ ಬಂದಿದ್ದರೇನು ?"

ಇಂಗ್ಲೀಷಿನಲ್ಲಿ ಕೇಳಿದ ಉತ್ತರಭೂಪ. ಮಾಲೀಕ ಹಲ್ಲಲ್ಲಿ ಕಚ್ಚಿದ್ದ ಪೈಪನ್ನೂ ಹೊರತೆಗೆಯದೆ

"ಒಂದು ನೂರು ಜನ ಬಂದಿದ್ದರು ಬೆಳಗಿನಿಂದ"

ಎಂದಂದ. ಕೊಂಚ ಸಂಯಮದಿಂದ ಮತ್ತೆ ಪ್ರಶ್ನಿಸಿದ.

"ಅರೆಗಡ್ಡ ಬೆಳೆದ ಒಬ್ಬ ಯುವಕ....ಸುಮಾರು ಮೂವತ್ತು ಮೂವತ್ತೆರಡು ವಯಸ್ಸಿರಬಹುದು. ಬಿಕ್ಷುಕನಂತಿದ್ದಾ...."

ಮಾಲೀಕನ ಕಣ್ಣಲ್ಲಿ ಹೊಸ ಬೆಳಕು ಮಿಂಚಿತು. ಪೈಪನ್ನು ಈಚೆ ತೆಗೆದು ಉತ್ತರಿಸಿದ.

"ಹೌದು ಹೌದು, ಒಂದು ಕರೀ ಉಲನ್ ಸೂಟ್ ಮತ್ತು ಟೆರಿಲಿನ್ ಷರ್ಟ್ ತೆಗೆದ."

ತನ್ನ ಮುಂದಿದ್ದ ಬಿಲ್ ಬುಕ್‌ನಲ್ಲೊಂದು ಬಾರಿ ಹುಡುಕಿ ನೋಡಿ

"ಮುನ್ನೂರಾ ಅರವತ್ತು ರೂಪಾಯಿ. ಕರ್‌ಚೀಫ್ ಸೇರಿ"

ಎಂದಂದ. ಉತ್ತರಭೂಪ ದೊಡ್ಡದಾಗಿ ಉಸಿರುಹಾಕಿ ಹೊರಬಂದ. ಹಕ್ಕಿ ಹಾರಿಹೋಯಿತು. ಇನ್ನು ಸಿಕ್ಕುವುದಿಲ್ಲ ಅವನು ಎಂದು ಮನಸ್ಸು ಹೇಳಿತು. ಆದರೂ ಒಳದನಿ ಏನಂದಿತು ? ಆ ಬದ್ಮಾಷ್‌ನನ್ನು ಬಿಡಕೂಡದು, ನನಗೇ ಪಿಕ್‌ಪಾಕೆಟ್ ಮಾಡಿದ್ದಾನೆ !

ಆನಂದದಲ್ಲಿರುವವನಿಗೆ ಏನು ಬೇಕು? ರೋಷಕಷಾಯಿತನಾದವನಿಗೆ ಏನು ಬೇಕು? ಇಬ್ಬರಿಗೂ ಒಂದೇ ದೇವಾಲಯ—ಬಾರ್!

ಅವಸರವಸರದಲ್ಲಿ ಬಾರ್ ಹೊಕ್ಕ ಉತ್ತರಭೂಪ. ಮೂಲೆಯಲ್ಲೊಂದು ಕುರ್ಚಿ ಹಿಡಿದು ಕುಳಿತ. ಬ್ಬಾಯ್ ಬಂದು ನಿಂತ ಅಪ್ಪಣೆಗಾಗಿ.

"ಲಾರ್ಜ್ ರಮ್"

ಕೊಂಚ ಕೊಂಚವಾಗಿ ಗುಟುಕರಿಸುತ್ತ ಸಿಗರೇಟ್ ಹೊತ್ತಿಸಿದ. ರಮ್ ಒಳಹೊಕ್ಕಂತೆಲ್ಲ ತಲೆ ಚುರುಕಾಗಿ ಕೆಲಸ ಮಾಡಲಾರಂಭಿಸಿತು. ಸುತ್ತಲೂ ಕಣ್ಣೋಡಿಸಿದ. ಕರೀ ಉಲನ್ ಸೂಟ್ ಧರಿಸಿದವರಾರೂ ಕಾಣಲಿಲ್ಲ. ಒಬ್ಬ ಕಂಡ, ಪ್ಯಾಂಟ್ ಮಾತ್ರ ಕರಿ, ಕೋಟು ಇಲ್ಲ, ಟೈ ಧರಿಸಿದ್ದ. ಅವನೂ ದಿಟ್ಟಿಸಿ ಮುಖ ನೋಡಿದ, ಊಹುಂ, ಇವನಲ್ಲ. ಇನ್ನೊಬ್ಬ ಕಂಡ, ಕಪ್ಪು ಕೋಟು, ಬಿಳಿ ಕಾಟನ್ ಪ್ಯಾಂಟ್. ಅಲ್ಲ, ಇವನೂ ಅಲ್ಲ. ಕಳ್ಳ ಸಿಕ್ಕಲಿಲ್ಲ. ಎರಡನೆ ಲಾರ್ಜ್ ರಮ್ ಕೂಡ ಬಂದು ಮಾಯವಾಯಿತು. ಮೂರನೆಯದು ಮೇಜಿನ ಮೇಲಿತ್ತು.

ರಾತ್ರಿಯಾದಂತೆಲ್ಲ ಬಾರ್‌ನಲ್ಲಿ ಗಿರಾಕಿಗಳ ಸಂಖ್ಯೆ ಕ್ರಮೇಣ ಬೆಳೆಯ ಹತ್ತಿತು. ಮೂವರ ಗುಂಪೊಂದು, ಅವರಲ್ಲಿ ಒಂದು ಹೆಣ್ಣು. ಮಹದ್ವಾರಕ್ಕೆ ಇದಿರಾಗಿಯೆ ಕುಳಿತಿದ್ದ ಉತ್ತರಭೂಪ ಒಳಬಂದ ಪ್ರತಿಯೊಬ್ಬರನ್ನೂ ದಿಟ್ಟಿಸಿ ಹುಡುಕುವ ದೃಷ್ಟಿಯಿಂದ ನೋಡುತ್ತಿದ್ದ. ಮತ್ತಿಬ್ಬರು ಬಂದರು—ಊಹುಂ, ಇವರಲ್ಲ.

ಇನ್ನೊಬ್ಬ ಬಂದ. ಉತ್ತರಭೂಪ ಕುಳಿತಿದ್ದ ಪಕ್ಕದ ಟೇಬಲ್ ಮಾತ್ರ ಖಾಲಿ ಇದ್ದಿತು, ಅಲ್ಲಿಯೆ ಬಂದು ಕುಳಿತ. ಅವಸರದಲ್ಲಿ ಬ್ಬಾಯ್‌ನಿಗೆ ಆರ್ಡರ್ ಕೊಟ್ಟ.

"ಮೂರು ಸಿಲೋನ್ ಪರೋಟಾ, ಚಿಕನ್ ಮಸಾಲಾ"

"ಡ್ರಿಂಕ್ಸ್ ಸಾರ್?"

"ಏನೂ ಬೇಕಿಲ್ಲ"

ಆರ್ಡರ್ ಮಾಡಿದ್ದ ಊಟ ಬಂತು, ಹಸಿದ ತೋಳದಂತೆ ತಿಂದು ಮುಗಿಸಿದ.

ಇನ್ನೆರಡು ಪರೋಟಾ, ಮತ್ತೊಂದು ಚಿಕನ್ ಬೇಕೆಂದು ಹೇಳಿದ. ಕಾಯ್ದು ಕುಳಿತ.

ಹೊಚ್ಚ ಹೊಸ ಉಲನ್ ಪ್ಯಾಂಟು, ಕೋಟು, ಬಣ್ಣ ಅಚ್ಚ ಕಪ್ಪು. ಒಳಗಡೆಯಿಂದ ಟೆರಿಲಿನ್ ಷರ್ಟ್ ಎದ್ದು ಕಾಣುತ್ತಿದೆ. ಕೋಟಿನ ಹೊರ ಜೇಬಿನಿಂದ ಹೊಸ ಕರ್‌ಚೀಫ್ ಒಂದು ಹೊರಗಿಣುಕುತ್ತಿದೆ. ಕ್ರಾಫ್ ಕಟ್ ಈಗ ತಾನೆ ಆದಂತಿದೆ, ಮುಖಕ್ಷೌರ ಮುಗಿದು ಪೌಡರ್ ಪೂಸಿಗೊಂಡಿದೆ. ಎಡ ಕೈಯಲ್ಲಿ ರೋಲೆಕ್ಸ್ ವಾಚ್, ಅದಕ್ಕೆ ಬಂಗಾರದ ಚೈನು. ಪಕ್ಕದ ಕುರ್ಚಿಯಲ್ಲೊಂದು ಪಾರ್ಸಲ್ ಕುಳಿತಿದೆ.

ಹತ್ತು, ಹದಿನೈದು ನಿಮಿಷಗಳಿಂದ ಉತ್ತರಭೂಪ ಅವನ ಮುಖವನ್ನು ನೋಡುತ್ತಲೇ ಇದ್ದಾನೆ.

'ಹೌದೇ, ಇವನೇ ಆ ಕಳ್ಳ ?'

ಮನಸ್ಸು ಒಮ್ಮೆ ಹೌದು ಅನ್ನುತ್ತದೆ, ಇನ್ನೊಮ್ಮೆ ಅಲ್ಲ ಅನ್ನುತ್ತದೆ. ಎದ್ದು ಹೋಗಿ ಹಿಡಿದುಬಿಡಲೆ ? ಅವನಲ್ಲದಿದ್ದರೆ ? ನನ್ನಂತೆ ಅವನೂ ಯಾವನೋ ದೊಡ್ಡ ಆಫೀಸರ್ ಆಗಿದ್ದರೆ ?

ಪಕ್ಕದ ಮೇಜಿನಲ್ಲಿದ್ದವನ ಊಟ ಮುಗಿಯಿತು, ಒಂದು ಬಾರಿ ತೇಗಿದ. ಟೇಬಲ್‌ಗೆ ಬಿಲ್ ಬಂತು, ಒಳಜೇಬಿನಿಂದ ಪರ್ಸ್ ಹೊರಬಂತು.

ಉತ್ತರಭೂಪ ಅರ್ಧ ಎದ್ದು ನಿಂತ. ನೋಟುಗಳನ್ನು ಹೊರತೆಗೆದಾಗ ಅದರೊಂದಿಗೆ ಒಂದು ಲಾಟರಿ ಟಿಕೆಟ್ ಕಣ್ಣಿಗೆ ಬಿತ್ತು. ಖಾತ್ರಿಯಾಗಿ ಹೋಯಿತು. ತಕ್ಷಣ ಓಡಿ ಅವನ ಮುಂಗೈ ಹಿಡಿದ. ಉತ್ತರಭೂಪನ ಹಿಡಿತವೆಂದರೆ ಸಾಮಾನ್ಯವೇ ? ಮಂಕಿ ಸ್ಪಾನರ್‌ನಲ್ಲಿ ಕೈ ಸಿಕ್ಕಂತಾಯಿತು.

ಆನಂದ್ ಪಿಟ್ ಅನ್ನಲಿಲ್ಲ. ಇಬ್ಬರೂ ಬಾರ್‌ನಿಂದ ಹೊರಬಂದರು. ಫುಟ್‌ಪಾತ್ ಮೇಲೆ ನಿಂತರು. ಅತ್ತ ಬಂದ ಟ್ಯಾಕ್ಸಿಯೊಂದನ್ನು ನಿಲ್ಲಿಸಿದ ಉತ್ತರಭೂಪ, ಇಬ್ಬರೂ ಏರಿ ಕುಳಿತರು. ಟ್ಯಾಕ್ಸಿ ಓಡಿತು.

"ಸಾರ್ ! ನನ್ನ ಈಗಲೇ ಪೋಲೀಸಿಗೆ ಕೊಡ್ತೀರಾ ?"

ಕಾತುರವಿತ್ತು ಆನಂದನ ದನಿಯಲ್ಲಿ.

"ನನ್ನ ಯಾರು ಅಂತ ತಿಳಿದಿ? ನಾನು ಪೋಲೀಸ್ ಡೆಪ್ಯುಟಿ ಸೂಪರೆಂಟ್! ತಿಳಿತೇನು?"

"ನಮಸ್ಕಾರ ಸಾರ್"

ಸೂಪರೆಂಟ್ ಸಾಹೇಬರ ಮುಖ ಕೋಪದಿಂದ ಉರಿಯುತ್ತಿತ್ತು. ಹೊಟ್ಟೆ ಒಳಗಡೆ ರಮ್‌ನಿಂದ ಉರಿಯುತ್ತಿತ್ತು.

"ಹೋಟೆಲ್ ಸತ್ಕಾರ್‌ಗೆ ಹೋಗಯ್ಯಾ"

ಟ್ಯಾಕ್ಸಿ ಡ್ರೈವರ್‌ನಿಗೆ ಅಪ್ಪಣೆ ಇತ್ತರು. ಟ್ಯಾಕ್ಸಿ ಪಶ್ಚಿಮಕ್ಕೆ ತಿರಿಗಿ ಕೊಂಚ ದೂರ ಸಾಗಿ ಸತ್ಕಾರ್ ತಲುಪಿತು. ಹತ್ತನೆ ನಂಬರ್ ರೂಮಿನೆ ಈರ್ವರೂ ಬಂದರು. ಬಾಗಿಲು ತೆರೆದಿತ್ತು. ಹೊರಗಡೆ ಕುಳಿತಿದ್ದ ಮಫ್ತಿ ಡ್ರೆಸ್ಸಿನ ಕಾನ್ಸ್‌ಟೆಬಲ್ ಎದ್ದು ನಿಂತು ಸಾಹೇಬರಿಗೊಂದು ಪೋಲಿಸ್ ಸಲಾಮು ಹಾಕಿದ.

"ಜಾಫಿರ್!"

"ಜೀ ಸಾಬ್!"

"ಈ ಬದ್ಮಾಷನ್ನ ತಗೋ, ಬಿಡಬ್ಯಾಡ"

ಸಾಹೇಬರು ಕೈದಿಯನ್ನು ಜಾಫಿರ್‌ನಿಗೆ ಒಪ್ಪಿಸಿದರು. ಆನಂದನ ಕೈ ಜಾಫಿರ್‌ನ ಕಂಕುಳಲ್ಲಿ ಸೇರಿತು.

ಡೆಪ್ಯುಟಿ ಸೂಪರೆಂಟ್ ದೇಸಾಯಿ ಸಾಹೇಬರು ನೇರವಾಗಿ ಒಳಬಂದು ಸೂಟ್‌ಕೇಸ್‌ನಿಂದ ಚಿಕ್ಕೊಂದು ಡೈರಿಯನ್ನು ಈಚೆಗೆ ತೆಗೆದರು.

"ಆ ಲಾಟರಿ ಟಿಕೆಟ್ ತಾರೋ ಇಲ್ಲಿ"

ಆನಂದ್ ಒಂದೇ ಕೈಯಿಂದ ಪರ್ಸ್ ಹೊರ ತೆಗೆದು ಅದರಲ್ಲಿದ್ದ ಲಾಟರಿ ಟಿಕೆಟ್ಟನ್ನು ತೆಗೆದು ಕೊಟ್ಟ. ಸಾಹೇಬರು ಡೈರಿಯಲ್ಲಿ ಬರೆದುಕೊಂಡಿದ್ದ ನಂಬರನ್ನು ಟಿಕೆಟ್‌ನಲ್ಲಿದ್ದ ನಂಬರ್‌ಯೊಂದಿಗೆ ಹೋಲಿಸಿ ನೋಡಿದರು. ಎರಡೂ ಒಂದೇ. ಬೇರಾವ ಪುರಾವೆ ಬೇಕು? ಸಾಹೇಬರ ಮುಖದಲ್ಲಿ ಕಿರುನಗೆ ಮೂಡಿ ಮಾಯವಾಯಿತು.

"ಜಾಫಿರ್!"

"ಜೀ ಸಾಬ್"

"ಅವನ್ನ ಒಳಗೆ ತಾ"

ಕೈದಿ ಒಳಬಂದ. ಕೈ ಮುಗಿದು ದೈನ್ಯದಿಂದ ಮಾತನಾಡಲು ಆರಂಭಿಸಿದ.

"ನನ್ನದೊಂದೇ ಒಂದು ವಿನಂತಿ ಇದೆ ಸಾರ್. ಅದನ್ನು ಮಾತ್ರ ತಾವು ಪರಿಪಾಲಿಸಿ ಕೊಟ್ಟರೆ ನಾನು ಸಾಯುವವರೆಗೂ ನಿಮ್ಮ ಉಪಕಾರವನ್ನು ಸ್ಮರಿಸುತ್ತೇನೆ."

"ಏನದು, ಬೊಗಳು"

"ಈಗಾಗಲೇ ಗಂಟೆ ಎಂಟಾಗುತ್ತ ಬಂತು. ಒಂಭತ್ತು ಗಂಟೆಯವರೆಗೂ ದಯವಿಟ್ಟು ನನಗೆ ಟೈಂ ಕೊಡಿ. ಒಂಭತ್ತೂ ಐದು ನಿಮಿಷದ ನಂತರ ನೀವು ನನ್ನನ್ನು ಜೇಲಿಗಾದರೂ ಕಳಿಸಿ, ಗಲ್ಲಾದರೂ ಮಾಡಿಸಿ. ನಾನು ಸಿದ್ಧ."

"ಆ ಒಂದು ಘಂಟೇ ಒಳಗೆ ಪರಾರಿ ಆಗ್ತೀಯಾ?"

"ನನ್ನಾಣೆಯಾಗಿಯೂ ಇಲ್ಲ ಸ್ವಾಮೀ! ನೀವೂ ನನ್ನೊಟ್ಟಿಗೇ ಇರಿ. ಆಯಿತೇ?"

"ಇನ್ನೊಂದು ಘಂಟೇದೊಳಗೆ ನೀ ಏನು ಕಡಿಯೋದದೋ? ಅದನ್ನಾರೆ ಬೊಗಳಲಾ"

"ಒಂಭತ್ತಕ್ಕೆ ಸರಿಯಾಗಿ ಹೋಗಿ ನಾನು ನನ್ನ ಮಗನ್ನ ನೋಡುವುದಿದೆ. ಐದೇ ನಿಮಿಷ, ಆಮೇಲೆ ನಾನು ಮತ್ತೆ ನಿಮ್ಮ ಕೈದಿ."

ನಗೆ ಮೂಡಿತು ಡೆಪ್ಯುಟಿ ಸೂಪರೆಂಟರ ಮುಖದಲ್ಲಿ. ಕೈಗೆ ಸಿಕ್ಕ ಕಳ್ಳ ಹೇಳುವುದೆಲ್ಲವೂ ಸುಳ್ಳೇ ಅಲ್ಲವೆ?

"ಜಾಫರ್!"

"ಜೀ ಸಾಬ್!"

"ಬಾಗಿಲು ಹಾಕು, ನೀನು ಹೊರಗಿರು. ಹುಷಾರ್"

ಬಾಗಿಲನ್ನು ಒಳಗಡೆಯಿಂದ ಬಂದ್ ಮಾಡಿದರು ದೇಸಾಯಿ ಸಾಹೇಬರು. ಸೂಟ್‌ಕೇಸ್‌ನಲ್ಲಿದ್ದ ರಮ್ ಬಾಟಲ್ ಹೊರ ತೆಗೆದು ಗ್ಲಾಸಿಗೆ ಸುರುವಿಕೊಂಡರು, ಶಾಸ್ತ್ರಕ್ಕೆ ಕೊಂಚ ನೀರು ಬೆರೆಯಿಸಿ ಗುಟುಕರಿಸುತ್ತ ಆರಾಮವಾಗಿ ಹಾಸಿಗೆಯಲ್ಲಿ ಅಡ್ಡಾದರು. ಹಣ ಹೋದುದಕ್ಕೆ ಅವರಿಗೆ ವ್ಯಥೆ ಇಲ್ಲ—ರೇಸಿ

ನಲ್ಲಿ ಬಂತು, ಹಿಪ್ ಪಾಕೆಟ್‌ನಲ್ಲಿ ಹೋಯಿತು. ಕೇಸ್ ಪತ್ತೆ ಆದುದಕ್ಕೆ ಪರಮಾನಂದವಾಗಿತ್ತು. ಮನಸ್ಸಿನ ಲಹರಿ ಹರಿದಂತೆಲ್ಲ ಪ್ರಶ್ನೆ ಕೇಳಲು ಆರಂಭಿಸಿದರು. ನೆಲದ ಮೇಲೆ ಕುಳಿತಿದ್ದ ಆನಂದ್ ಉತ್ತರಿಸುತ್ತಿದ್ದ.

"ನಿನ್ನ ಹೆಸರೇನಪಾ ?"

"ಆನಂದ್ ಅಂತ ಸಾಮಿ !"

"ನಿನಗೆ ಮಗ ಬ್ಯಾರೆ ಇದ್ದಾನೇನೋ ?"

"ಇದ್ದಾನೆ ಸ್ವಾಮಿ. ಸುಮಾರು ಹನ್ನೊಂದು ಹನ್ನೆರಡು ವರ್ಷದವನಿರ ಬೇಕೀಗ"

"ಏನು ನಿನ್ನ ತಲಿ ಹಾಗಂದ್ರೆ ? ನೀ ನೋಡಿಲ್ಲೇನು ನಿನ್ನ ಮಗನ್ನ ?"

"ಇಲ್ಲ ಸ್ವಾಮಿ ! ಅವನು ಹುಟ್ಟಿದ ಮೇಲೆ ಅವನನ್ನು ನಾನು ನೋಡಲೇ ಇಲ್ಲ."

ಗಹಗಹಿಸಿ ನಕ್ಕರು ದೇಸಾಯಿ ಸಾಹೇಬರು. ಅವರ ಮೂವತ್ತು ವರ್ಷಗಳ ಪೋಲೀಸ್ ಸರ್ವೀಸಿನಲ್ಲಿ ಇಂತಹ ಹಸೀ ಸುಳ್ಳುಗಳನ್ನು ಅವರೆಷ್ಟು ಕೇಳಿದ್ದರೋ !

"ಯಾವ ಊರು ನಿಂದು ?"

"ನನಗಾವ ಊರು ಇದೆ ಸಾರ್ ? ಈಗಂತೂ ಮುಂಬಯಿಯಿಂದ ಬಂದೆ. ಇಂದೇ ಬೆಳಿಗ್ಗೆ ಬಂದೆ."

ಇದು ಇನ್ನೊಂದು ಸುಳ್ಳು ಎಂದನಿಸಿತು ಸಾಹೇಬರ ಮನಕ್ಕೆ. ಸಾಕಷ್ಟು ರಮ್ ಒಳಹೊಕ್ಕಿತ್ತು. ಮನಸ್ಸು ಲಘು ಲಹರಿಯಲ್ಲಿ ಹರಿಯಿತು.

"ಆನಂದ್ !"

"ಸ್ವಾಮೀ !"

"ಆ ಕುರ್ಚಿ ಮ್ಯಾಲೆ ಕೂಡು. ನಿನ್ನ ಹೊಸ ಸೂಟ್ ಕೆಡ್ತದೆ. ಬಾಳಾ ಕಷ್ಟಪಟ್ಟು ಸಂಪಾದಿಸೀದಿ ಪಾಪ !"

ಸಾಹೇಬರ ದನಿಯಲ್ಲಿದ್ದ ವ್ಯಂಗ್ಯವನ್ನು ಗುರುತಿಸಿದ ಆನಂದ್. ಕುರ್ಚಿಯನ್ನೇರಿ ಕುಳಿತ.

"ನಿನ್ನದೇನಪಾ ಕಥೆ ? ಅದನ್ನಾರೆ ಹೇಳಲಾ, ಕೇಳ್ತೀನಿ, ಒಂಭತ್ತು ಆಗೋವರೆಗೂ."

ಆನಂದ ಆರಂಭಿಸಿದ. ಎಂದೂ ಯಾರ ಮುಂದೂ ಉಸಿರದ ಸತ್ಯವನ್ನೆಲ್ಲಾ ಆಮೂಲಾಗ್ರವಾಗಿ ವಿವರಿಸತೊಡಗಿದ.

ಹತ್ತು ವರ್ಷದ ಹುಡುಗ ಆನಂದ ಆಗಿನ್ನೂ. ಧರ್ಮರಾಯರು ಮನೆ ಕೆಲಸಕ್ಕೆಂದು ಇವನನ್ನು ತಮ್ಮ ಹಳ್ಳಿಯಿಂದ ಬೆಂಗಳೂರಿಗೆ ತಂದಿದ್ದರು. ರಾಯರಿಗೆ ಹೆಂಡತಿ ಇಲ್ಲ, ಎಂದೋ ಸತ್ತಿದ್ದರು, ಒಂದು ಹೆಣ್ಣು ಮಗುವನ್ನು ಹೆತ್ತು. ಕಮಲ ಅವಳ ಹೆಸರು. ಆನಂದನಕಿಂತಲೂ ಒಂದೈದಾರು ವರ್ಷ ದೊಡ್ಡವಳು. ಆನಂದ ಆಕೆಯನ್ನು ಅಕ್ಕ ಎಂದು ಸಂಬೋಧಿಸುತ್ತಿದ್ದ. ಮನೆ ಕೆಲಸವನ್ನೆಲ್ಲಾ ಅಚ್ಚುಕಟ್ಟಾಗಿ ಮಾಡುತ್ತಿದ್ದ. ತಂದೆ ಮಗಳು ಇವನನ್ನು ಬಹು ಪ್ರೀತಿಯಿಂದ ಕಾಣುತ್ತಿದ್ದರು. ಎಂಟೊಂಭತ್ತು ವರ್ಷಗಳು ಆನಂದ ಇಲ್ಲಿಯೇ ಇದ್ದ, ಇದೇ ತನ್ನ ಮನೆಯೆಂದೂ ಭಾವಿಸಿದ್ದ.

ಧರ್ಮರಾಯರಿಗೆ ಬೇರೆ ಸಂತಾನವಿಲ್ಲ. ಇದ್ದೊಬ್ಬ ಮಗಳನ್ನು ತಮ್ಮ ಮನೆತನದ ಗೌರವಕ್ಕೆ ತಕ್ಕುದಾದ ವರನಿಗೆ ಕೊಟ್ಟು ಮದುವೆ ಮಾಡಬೇಕೆಂಬಾಶೆ. ಅಲ್ಲಲ್ಲಿ ವರಗಳಿಗಾಗಿ ವಿಚಾರಿಸುತ್ತಿದ್ದರು ಕೂಡ

ಒಂದು ದಿನ ರಾಯರು ಅರ್ಜೆಂಟಾಗಿ ಮದ್ರಾಸಿಗೆ ಹೊರಡಬೇಕಾಗಿ ಬಂತು, ಹೊರಟರು.

"ಹುಷಾರು ಆನಂದಾ ! ನಾಳೆ ಸಂಜೆಗೆ ಬರುತ್ತೇನೆ"

ಎಂದು ಹೇಳಿ ನಡೆದರು. ರಾತ್ರಿ ಆಯಿತು, ಊಟ ಮುಗಿಸಿ ಕಮಲ ಮತ್ತು ಆನಂದ ತಂತಮ್ಮ ಕೋಣೆಯಲ್ಲಿ ಮಲಗಿದರು.

ಕೆಲಸಮಯದ ನಂತರ ಕಮಲ ಕೂಗಿದಳು.

"ಆನಂದಾ !"

"ಏನಕ್ಕಾ ?"

"ನಿದ್ರೆ ಬಂತೇ ?"

"ಬರತಾ ಇದೆ. ಯಾಕಕ್ಕಾ ?"

"ಒಬ್ಬಳೇ ಮಲಗಲು ಭಯ ಆಗುತ್ತೆ, ನೀನೂ ಇಲ್ಲಿಯೇ ಮಲಗು ಬಾ."

ತನ್ನ ಹಾಸಿಗೆ ಹೊತ್ತು ತಂದು ಆನಂದ್ ಅಕ್ಕನ ಕೋಣೆಯಲ್ಲಿ ನೆಲದ ಮೇಲೆ ಹಾಕಿ ಮಲಗಿದ. ಕೊಂಚ ಸಮಯ ಕಳೆಯಿತು.

"ಆನಂದಾ !"

"ಏನಕ್ಕಾ ?"

"ಕಾಲು ನೋಯುತ್ತಿವೆ. ಕೊಂಚ ಒತ್ತುತ್ತೀಯಾ ?"

"ಆಗಲಕ್ಕ"

ಆಮೇಲೇನಾಯಿತು ? ಸಹಜವಾಗಿ ಆಗುವುದೇ ಆಯಿತು. ಅನಂತರವೂ ಧರ್ಮರಾಯರು ಮನೆಯಲ್ಲಿಲ್ಲದಾಗ ಆಗಾಗ ಆಗುತ್ತಲೆ ಇತ್ತು, ಬಾಯಿಂದ ಅಕ್ಕ ಎಂದು.

ಕಮ್ಮ, ವ್ಯಭಿಚಾರ ಇವುಗಳನ್ನು ಬಚ್ಚಿಡಲು ಯಾವ ದೇವರಿಂದ ಸಾಧ್ಯ ?

ಒಂದು ಬೆಳಗ್ಗೆ ಕಮಲನಿಗೆ ವಾಂತಿ. ಮರುದಿನವೂ ಅದೇ, ಅದರ ಮರುದಿನವೂ ಮತ್ತೆ ವಾಂತಿ. ಧರ್ಮರಾಯರು ಮಗಳ ಮುಖವನ್ನು ದಿಟ್ಟಿಸಿ ನೋಡಿದರು. ಅನುಮಾನ ಖಾತ್ರಿ ಆಯಿತು.

ತನ್ನ ಕೋಣೆಯೊಳಕ್ಕೆ ಬಂದು ಕುಳಿತರು. ಟೂತ್‌ಬ್ರಷ್‌ನಂತಹ ಮೀಸೆಯಲ್ಲೊಂದು ಕೂದಲೂ ಎದ್ದು ನಿಮಿರಿ ನಿಂತು ಮತ್ತೆ ಕೆಳಕ್ಕಿಳಿಯಿತು. ತಿಜೋರಿಯಿಂದ ರಿವಾಲ್ವರನ್ನು ಹೊರತೆಗೆದು ಮೇಜಿನ ಮೇಲಿಟ್ಟರು.

"ಕಮಲಾ !"

"ಬಂದೆ ಅಪ್ಪಾಜೀ"

ಅಂಜಂಜುತ್ತ ಒಳಬಂದಳು. ಮೇಜಿನ ಮೇಲಿದ್ದ ರಿವಾಲ್ವರನ್ನು ನೋಡಿದಳು.

"ಸತ್ಯವನ್ನು ಬೊಗಳು" ಘರ್ಜಿಸಿದರು ಧರ್ಮರಾಯರು.

ತಪ್ಪೊಪ್ಪಿಕೊಂಡಳು. ರಾಯರ ಕಂಣಿಲ್ಲಿ ಕಿಡಿ ಹಾರಿತು. ಸಿಡಿಲಿನಂತೆ ನುಡಿದರು.

"ಯಾವನವನು ?"

"ಆನಂದ"



ಸತ್ಯವನ್ನು ಬೊಗಳು

"ನೀನು ಹೋಗು, ಅವನನ್ನು ಕಳಿಸು."

ಅಂಗಡಿಗೆ ಹೋಗಿದ್ದ ಆನಂದ ಬಂದ. ಪಿಸು ದನಿಯಲ್ಲಿ ಕಮಲ ವಿಷಯವನ್ನು ಬಾಗಿಲಲ್ಲಿಯೇ ಹೇಳಿದಳು. ಆನಂದನ ಎದೆಯ ಢಬಢಬ ಅವನ ಕಿವಿಗೇ ಕೇಳುತ್ತಿತ್ತು. ಅವನು ರಾಯರ ಕೋಣೆಯಲ್ಲಿ ಕಾಲಿಟ್ಟಾಗ ಮೇಜಿನಮೇಲೆ ಒಂದು ನೋಟುಗಳ ಕಂತೆ, ಪಕ್ಕದಲ್ಲಿ ರಿವಾಲ್ವರ್.

"ಬಾಗಿಲು ಹಾಕು"

ಧರ್ಮರಾಯರು ಯಮಧರ್ಮರಾಯರಾಗಿದ್ದರು.

"ಐದು ಸಾವಿರ ಇದೆ, ತೆಗೆದುಕೋ. ಈ ತಕ್ಷಣ ಊರು ಬಿಡು, ಇಲ್ಲವಾದರೆ ಇಕ್ಕೊ"

ರಿವಾಲ್ವರ್ ಅತ್ತ ಬೆರಳು ತೋರಿಸಿದರು.

"ನೀನು ಮತ್ತೆ ಎಂದೂ ಬೆಂಗಳೂರಿಗೆ ಬರಕೂಡದು. ಈ ವಿಷಯವನ್ನು ಯಾರ ಮುಂದೂ ಬಾಯಿಬಿಡಕೂಡದು. ನನ್ನ ಮಗಳೊಡನೆ ಪತ್ರವ್ಯವಹಾರ ಮಾಡಕೂಡದು. ತಿಳಿಯಿತೇ ? ಹೂಂ, ತೆಗೆದುಕೊ ಆ ಹಣ."

ಆನಂದ್ ಹಣವನ್ನು ಕೈಗೆ ತೆಗೆದುಕೊಂಡ.

"ಯಾವ ಊರಿಗೆ ಹೋಗುತ್ತಿ ?"

"ನೀವು ಹೋಗು ಅಂದ ಊರಿಗೆ"

"ಮುಂಬಯಿಗೆ ಹೋಗು"

"ಆಯಿತು, ಅಪ್ಪಣೆ"

ಎಂದಂದ್ದೆ, ಮನೆಯಿಂದ ಹೊರಬಿದ್ದೆ ಸ್ವಾಮೀ ಎಂದಂದು ದೊಡ್ಡದಾಗಿ ಉಸಿರೆಳೆದ ಆನಂದ್.

ಸೂಪರೆಂಟ್ ಸಾಹೇಬರ ಮುಖದಲ್ಲಿ ತುಂಟ ನಗೆಯೊಂದು ಸುಳಿಯಿತು.

"ಮಗ ಆಗಿ ಮನಾಗಿರೋ ಕತ್ತೇಮಗನೆ ಅಂದರೆ, ಅಳಿಯ ಆಗಿ ಓಡಿ ಹೋಗ್ತೀನಿ ಅಂದಿ ಅನ್ನು"

ದೇಸಾಯಿ ಸಾಹೇಬರ ಚುಚ್ಚು ಮಾತು ಆನಂದನ ಕಿವಿಗೂ ಬೀಳಲಿಲ್ಲ.

ಆ ರಾತ್ರಿ ಮುಂಬಯಿ ರೈಲನ್ನೇರಿದ ಆನಂದ್. ಹತ್ತೊಂಭತ್ತು ವರ್ಷದ ಎಳೆ ಯುವಕ. ಇಡೀ ಮುಂಬಯಿ ಇದೆ, ಕೈ ತುಂಬ ಹಣವೂ ಇದೆ, ಸುಖ

ವಾಗಿರಬಹುದಲ್ಲವೆ ? ಹಣವೇ ಸುಖವನ್ನು ಕೊಡಬಹುದಾದರೆ ಜಗತ್ತಿನಲ್ಲಿರುವ ಸುಖವೆಲ್ಲವೂ ಎಂದೋ ಹಣವಂತರ ಗುತ್ತಿಗೆ ಆಗಿಬಿಡುತ್ತಿತ್ತು. ಆನಂದನ ದೇಹವಷ್ಟೆ ಮುಂಬಯಿಯಲ್ಲಿ, ಮನಸ್ಸೆಲ್ಲವೂ ಬೆಂಗಳೂರಲ್ಲಿಯೇ. ಸದಾ ಕಮಲಾ ತಪಸ್ಸು. ಬೇಕೆಂದು 'ಮೈಸೂರು ಲಾಡ್ಜ್'ನಲ್ಲಿ ರೂಮ್ ತೆಗೆದು ಕೊಂಡ. ಬೆಂಗಳೂರಿನ ಸುದ್ದಿ ಆಗಿಷ್ಟು ಈಗಿಷ್ಟಾದರೂ ಕಿವಿಗೆ ಬೀಳಲಿ ಎಂಬಾಶೆ.

ಕಿವಿಗೆ ಬಿತ್ತು ಕೂಡ, ಬೆಂಗಳೂರಿನಿಂದ ಬಂದೊಬ್ಬರು ಹೇಳಿದರು ಆನಂದ ನಿಗೆ. ಎಲ್ಲ ಸಮಾಚಾರವೂ ತಿಳಿಯಿತು

ಐವತ್ತು ಸಾವಿರ ವರದಕ್ಷಿಣೆ—ಅದೂ ನೌಕರಿ ಇಲ್ಲದ ಬಡ, ಇಂಜಿನೀ ರಿಂಗ್ ಗ್ರ್ಯಾಜುಯೇಟ್‌ಗೆ—ಕೊಟ್ಟು ಧರ್ಮರಾಯರು ಮಗಳಿಗೆ ಅರ್ಜೆಂಟ್ ಮದುವೆ ಮಾಡಿದರು. ಮೇಲೈವತ್ತು ಸಾವಿರ ಮದುವೆ ಕರ್ಚು. ಮೂರು ದಿನ ಗಳ ಮದುವೆ ಅದ್ದೂರಿಯಿಂದ ಜರುಗಿಹೋಯಿತು. ಧರ್ಮರಾಯರ ಮನೆತನ ಎಂತಹುದು ? ಗೌರವ ? ಎಲ್ಲವೂ ತಕ್ಕಂತೆಯೇ ಆಯಿತು ಜನ ರಾಯ ರನ್ನು ಬಾಯ್ತುಂಬ ಕೊಂಡಾಡಿತು.

ಕಮಲಮ್ಮನವರ ವಗತನವೆಲ್ಲ ಎಷ್ಟು ದಿನ? ಮದುವೆಯಾದ ಮೂರೇ ತಿಂಗಳಲ್ಲಿ ಗಂಡು ಮಗನ ತಾಯಿ ಆದಳು. ಅತ್ತೆ ಮನೆಯವರು ಒಳಹೊಸ್ತಿಲಲ್ಲಿ ಕಾಲಿಡಲು ಕೊಡಲಿಲ್ಲ. ತವರಮನೆ ಸೇರಿದಳು ಖಾಯಂ ಆಗಿ.

ಧರ್ಮರಾಯರೇ ಮಗಳನ್ನು ಹೊಡೆದು ಕೊಂದರು ಎಂದೂ ಜನ ಆಡಿ ಕೊಂಡಿತು. ಜನ ಆಡಿಕೊಳ್ಳುವುದರಲ್ಲಿ ಸತ್ಯ ಎಷ್ಟೋ, ಅಲ್ಲವಾದುದು ಎಷ್ಟೋ ? ಮೊಮ್ಮಗನಂತೂ ಮುದ್ದಾಗಿದೆ. ಆ ದೊಡ್ಡ ಬಂಗಲೆಯಲ್ಲಿ ರಾಯರು, ಮೊಮ್ಮಗ, ಒಬ್ಬ ದಾದಿ, ಬೇರಿನ್ನೊಂದು ಪ್ರಾಣಿ ಇಲ್ಲ.

"ನೋಡಿ ಸಾರ್ !"

ಎಂದು ಆನಂದ ತಲೆ ಎತ್ತಿ ಸೂಪರೆಂಟ್ ಸಾಹೇಬರ ಮುಖವನ್ನು ನೋಡಿದ. ಆನಂದನ ಕಂಣು ತೇವವಾಗಿತ್ತು.

"ಪ್ರತಿ ವರ್ಷ ದೀಪಾವಳಿಯ ಮುಂದು ಧರ್ಮರಾಯರಿಗೆ ಪತ್ರ ಬರೆ

ಯುತ್ತಲೇ ಇದ್ದೇನೆ. ಒಂದು ಸಾಲು ಉತ್ತರವಿಲ್ಲ. ಅದಾವ ದೇವರ ಕರುಣೆಯೋ! ಈಗ ತಾರು ಕಳಿಸಿದ್ದಾರೆ, ತಕ್ಷಣ ಬಂದು ನೋಡಿ ಹೋಗು ಎಂದು."

ಆನಂದ ಜೇಬಿನಿಂದ ತಾರನ್ನು ಹೊರತೆಗೆದು ತೋರಿಸಿದ. ನಂಬಲಾರದೆ ನಂಬಿದರು ಪೋಲೀಸ್ ದೇಸಾಯಿಗಳು.

"ನನ್ನ ಮಗನನ್ನು ಮೊಟ್ಟಮೊದಲಬಾರಿ ನೋಡುತ್ತಿದ್ದೇನೆ. ಬರಿಗೈ ಯಿಂದ ಹೋಗಲಿ? ಆದಕ್ಕಾಗಿ ಅವನಿಗೆ ನಿಕ್ಕರ್, ಬುಷ್‌ಕೋಟು, ಪಿ ಕ್ಯಾಪ್, ಚಾಕೋಲೆಟ್ ಎಲ್ಲವನ್ನೂ ಕೊಂಡಿದ್ದೇನೆ. ಭಿಕ್ಷುಕನಂತೆ ಹೋಗಲಿ ಮಗನ ಮುಂದು? ಆದಕ್ಕಾಗಿಯೇ ಈ ಎಲ್ಲ ವೇಷ, ಪೋಷಾಕು."

"ನನ್ನ ದುಡ್ಡಿನಾಗೆ, ಆದೂ ಕದ್ದ ದುಡ್ಡಿನಾಗೆ?"

"ಹೌದು ಸ್ವಾಮೀ! ಆ ಮನೆಯಿಂದ ಹೊರಬಂದ ತಕ್ಷಣ ಇದೆಲ್ಲವನ್ನೂ ನೀವೇ ತೆಗೆದುಕೊಳ್ಳಿ. ನನಗೊಂದು ಟವೆಲ್ ಸುತ್ತಿ ಪೋಲೀಸ್ ಸ್ಟೇಷನ್‌ನಲ್ಲಿ ಕೂಡಿಸಿ ಸಾಕು. ನಿಮ್ಮನ್ನೆ ತಂದೆ ಎಂದು ತಿಳಿಯುತ್ತೇನೆ."

ಕೈಲಿದ್ದ ಗಡಿಯಾರವನ್ನು ನೋಡಿಕೊಂಡ ಆನಂದ. ಧಿಡೀರನೆ ಎದ್ದು ನಿಂತ.

"ಸಾರ್! ಒಂಭತ್ತಕ್ಕೆ ಸರಿಯಾಗಿ ನಾನಲ್ಲಿರಬೇಕು. ಇನ್ನು ಹದಿನೈದೇ ನಿಮಿಷ ಇದೆ."

ಜಾಫರ್ ಟ್ಯಾಕ್ಸಿ ತಂದು ನಿಲ್ಲಿಸಿದ್ದ, ಆನಂದ ಏರಿದ.

"ಆದರೂ ನೀನು ನನ್ನ ಕೈದಿ, ನಾನೂ ಬರುತ್ತೇನೆ."

ಎಂದಂದರು ದೇಸಾಯಿ ಸಾಹೇಬರು. ಮರು ಮಾತಾಡಲಿಲ್ಲ ಆನಂದ್, ಪಕ್ಕದಲ್ಲಿ ಕುಳಿತರು ಸೂಪರೆಂಟರು.

"ಗಾಂಧಿನಗರ, ಎಂಟನೆ ಮೇನ್"

ಎಂದಂದು, ಕೈಲಿ ಪಾರ್ಸೆಲ್ ಹಿಡಿದು ಕುಳಿತಿದ್ದ ಆನಂದ ಸ್ವರ್ಗದಲ್ಲಿದ್ದ ಏನೇನೋ ಕನಸುಗಳು! ಹತ್ತು ಹನ್ನೊಂದು ವರ್ಷದ ಮಗ! ಅಪ್ಪಾ ಎಂದು ಓಡಿಬರುತ್ತಾನೆ, ತಬ್ಬಿಕೊಳ್ಳುತ್ತಾನೆ. ನಾನೂ ಮುಂಬಯಿಗೆ ಬರುತ್ತೇನೆ ಎಂದು ಹಠ ಮಾಡುತ್ತಾನೆ. ಆಗ ರಾಯರು!

ತಟ್ಟನೆ ಟ್ಯಾಕ್ಸಿ ನಿಂತಿತು. ಆನಂದ ಕೈಗಡಿಯಾರವನ್ನು ನೋಡಿಕೊಂಡ. ಗಂಟೆ ಒಂಭತ್ತು ಅಂದರೆ ಒಂಭತ್ತು !

ಟ್ಯಾಕ್ಸಿಯಿಂದ ಕೆಳಕ್ಕಿಳಿದ, ಭದ್ರವಾಗಿ ಕೈಹಿಡಿದು ಹಿಂದೆಯೇ ಇಳಿದರು ಪೋಲೀಸ್ ಸಾಹೇಬರು. ಆನಂದ ಬಾಗಿಲಿಗೆ ಬಂದು ಕಾಲಿಂಗ್ ಬೆಲ್ ಒತ್ತಿದ. ಕದ ತೆರೆಯಿತು. ಕೂದಲು ಅರೆನೆರೆತ ಒಂದು ನಡುವಯಸ್ಸಿನ ಅಪರಿಚಿತ ಹೆಂಣು ಹೊರಕ್ಕಿಣಿಕಿ ಯಾರು ಅಂದಿತು.

"ಆನಂದ್, ಮುಂಬಯಿಯಿಂದ"

"ಬನ್ನಿ, ರಾಯರು ನಿಮಗಾಗಿಯೇ ಕಾದಿದ್ದಾರೆ."

ನೇರವಾಗಿ ಡ್ರಾಯಿಂಗ್ ರೂಮಿಗೆ ಬಂದ ಆನಂದ್, ಆ ಮನೆ ಅವನಿಗೆ ಹೊಸತೇ ?

ಕಡೆದ ವಿಗ್ರಹದಂತೆ ಕುಳಿತಿದ್ದರು ಧರ್ಮರಾಯರು. ಮುಖದಲ್ಲಿ ಯಾವ ಭಾವಾವೇಶವೂ ಇಲ್ಲ. ಅದೊಂದು ಉಸಿರಾಡುವ ಶಿಲಾಪ್ರತಿಮೆ !

ಆನಂದ ಕೈಮುಗಿದು ನಮಸ್ಕಾರ ಅಂದ. ಅದಕ್ಕುತ್ತರ ? ತಲೆ ಎತ್ತಿ ನೋಡಿದರು. ಜೊತೆಯಲ್ಲಿದ್ದ ಇನ್ನೊಬ್ಬ ವ್ಯಕ್ತಿಯತ್ತ ನೋಡುತ್ತ ಇವರಾರು ಎಂದರು.

"ನನ್ನ ಸ್ನೇಹಿತರು, ದೇಸಾಯಿಗಳು"

ರಾಯರ ಮುಖದಿಂದ ಮುಂದು ಒಂದು ಮಾತೂ ಇಲ್ಲ. ಕೂಡು ಅನ್ನಲಿಲ್ಲ, ಬೇಡ ಅನ್ನಲಿಲ್ಲ. ಆನಂದ ನಿಂತಲ್ಲಿಯೇ ಸುತ್ತಲೂ ಕಣ್ಣೋಡಿಸಿದ. ಎಲ್ಲೂ ಮಗನ ಸುಳಿವೇ ಇಲ್ಲ. ಧ್ವನಿಯೂ ಇಲ್ಲ. ಎಲ್ಲವೂ ನಿಶ್ಶಬ್ದ, ನೀರವ. ಸೋಫಾದಲ್ಲಿ ಕುಳಿತಿದ್ದ ರಾಯರು ಇದ್ದಕ್ಕಿದ್ದಂತೆ ಛಟ್ಟನೆ ಎದ್ದರು.

"ನಿನ್ನ ಮಗನನ್ನು ನೋಡುತ್ತೀಯಾ ? ಬಾ"

ನಡೆದರು, ಹಿಂದು ಆನಂದ. ಕೈದಿಯ ಹಿಂದು ಸೂಪರೆಂಟ್ ಸಾಹೇಬರು.

ಕೋಣೆಯ ಕದವನ್ನು ತೆರೆದು ಹೊರಗಡೆಯೆ ನಿಂತರು ರಾಯರು. ನುಡಿದರು.

"ಹೋಗು ಒಳಗೆ. ಮಗನನ್ನು ನೋಡು"

ಆನಂದ ನೋಡಿದ. ಏನನ್ನು ? ಮಗನನ್ನಲ್ಲ, ಮಗನ ಹೆಣವನ್ನು ! ಹನ್ನೊಂದು ವರ್ಷದ ಮಗ ಸತ್ತು ಬಿದ್ದಿದ್ದಾನೆ ಹಾಸಿಗೆಯಲ್ಲಿ.

"ಹೂಂ, ಐದು ನಿಮಿಷ ಆಯಿತು"

ಧರ್ಮರಾಯನ ದನಿ ಸಿಡಿಲಿನಂತೆ ಕೇಳಿಬಂತು.

ಥಟ್ಟನೆ ಹೊರಬಂದ ಆನಂದ. ದೇಸಾಯರು ಹಿಂಬಾಲಿಸಿದರು. ಗೇಟು ದಾಟಿ ಈಚೆಗೆ ಬಂದರು.

ಪೋಲೀಸ್ ಸಾಹೇಬರು ಆನಂದನ ಜೇಬಿನಲ್ಲಿ ಒಂದು ನೂರರ ನೋಟನ್ನು ಇಟ್ಟು ಟ್ಯಾಕ್ಸಿಯಲ್ಲಿ ಕುಳಿತರು.

"ನೀನು ಎಲ್ಲಿಗಾದರೂ ಹೋಗು ಆನಂದ್. ಈ ಕ್ರೂರ ಜಗತ್ತಿನಿಂದ ಆದಷ್ಟು ದೂರ ಹೋಗು"

ಟ್ಯಾಕ್ಸಿ ಓಡಿತು. ಆನಂದ ನಡುರಸ್ತೆಯಲ್ಲಿಯೇ ನಿಂತ ಮುಗಿಲು ನೋಡುತ್ತ.

ಧರ್ಮರಾಯರ ಮನೆತನದ ಗೌರವ ? ಧರ್ಮ ಎಂದೋ ಹೋಗಿತ್ತು. ಮಗಳಿಂದ ಗೌರವ ಹೋಯಿತು, ಮೊಮ್ಮಗ ಸತ್ತು ಮನೆತನ ನಿರ್ಮೂಲ ವಾಯಿತು ಆದರೆ ಮನೆ ಇದೆ—ರಾಯರಿದ್ದಾರೆ. ಸಾಲದೇ ?

# ದೇವರ ಮದುವೆ ?

"ನಮ್ಮ ತಂದೆ ಮಹಾಮೂರ್ಖನಿದ್ದ ಸ್ವಾಮೀ ! ಇಸ್ಪೀಟು ಆಟದಲ್ಲಿಯೇ ಷುಮಾರು ಒಂದು ಲಕ್ಷದವರೆಗೂ ಹಾಳುಮಾಡಿ ಹೋದ"

ಎಂದೊಬ್ಬರ ದೂರು.

"ನಿಮ್ಮ ತಂದೆ ಲಕ್ಷಪಾಲು ಮೇಲು. ನಮ್ಮ ತಂದೆ ಕುಡಿತಕ್ಕೇ ಆಸ್ತಿಯನ್ನೆಲ್ಲ ಕಳೆದುಬಿಟ್ಟ"

ಎಂದೊಬ್ಬ ಮಗನ ಟೀಕೆ.

"ಬರೀ ದಾನ, ಧರ್ಮ ಮಾಡಿಯೇ ನಮ್ಮನ್ನು ಬಡವರನ್ನಾಗಿಟ್ಟು ಹೋದರು ನಮ್ಮ ತಂದೆ. ಇಲ್ಲದಿದ್ದರೆ ನಾನೂ ಕುಡಿದು ಮಜಾ ಮಾಡಿಬಿಡುತ್ತಿದ್ದೆ. ನಮ್ಮಪ್ಪ ಎಲ್ಲವನ್ನೂ ಹಾಳು ಮಾಡಿದ"

ಎಂದು ಮತ್ತೊಬ್ಬರ ಗೋಳು. ಇನ್ನೊಬ್ಬರ ದೂರು ಇನ್ನೂ ಹೆಚ್ಚು ಸ್ವಾರಸ್ಯವಾಗಿದೆ.

"ನಮ್ಮ ತಂದೆಗೆ ಬುದ್ಧಿಯೇ ಇರಲಿಲ್ಲ ಕಣ್ರೀ ! ಯಾರು ಹೇಗೆ ಹೇಳಿದರೆ ಹಾಗೆ ಕುಣಿಯುತ್ತಿದ್ದ. ನಮ್ಮೂರಲ್ಲಿ ಶಾಲೆ ಇರಲಿಲ್ಲ. ಮಕ್ಕಳಿಗಾಗಿ ಶಾಲೆಯನ್ನು ಕಟ್ಟಿಸಿ ಎಂದು ಊರ ಮುಂದಿನ ಒಳ್ಳೆಯ ಜಮೀನನ್ನು ಯಾರೋ ಅಯೋಗ್ಯರ ಮಾತು ಕೇಳಿ ಬರದೇ ಕೊಟ್ಟುಬಿಟ್ಟ. ಅಂಥಾ ಆಸ್ತಿಯನ್ನು ಹಾಳುಮಾಡಿ ಹೋದ".

ಇಂತಹ ದೂರುಗಳನ್ನು ಕೇಳುವಾಗ ತಿಂಮ ನಗುತ್ತಾನೆ, ಆಳುವುದು

ಅವನಿಗೆ ಬಾರದುದರಿಂದ. ಹಣವನ್ನು ಏನುಮಾಡಿದರೆ ಹಾಳಲ್ಲ ಎಂಬುದು ಬಹು ದೊಡ್ಡ ಪ್ರಶ್ನೆ. ಲೋಕ ಕಲ್ಯಾಣಾರ್ಥವಾಗಿ ನಮ್ಮ ವಾನಪ್ರಸ್ಥಾಶ್ರಮಿಗಳಾದ ಸತ್ಪುರುಷರೋರ್ವರು "ಲಕ್ಷ್ಮೀ ವೆಂಕಟೇಶ್ವರ ಅಷ್ಟೋತ್ತರ ಶತಹೋಮ ಕುಂಡ ಮಹಾಕ್ರತುವು" ಎಂಬ ಯಾಗವನ್ನು ಮಾಡಲಿದ್ದಾರೆ. ಅದರ ವೆಚ್ಚ ಹೀನಪಕ್ಷವೆಂದರೆ ಐದು ಲಕ್ಷಗಳಾದರೂ ಆಗುತ್ತದೆ. ಜನತೆ ಹಸಿವಿನಿಂದ ತತ್ತರಿಸುತ್ತಿರುವಾಗ ಹಣವನ್ನು ಹೀಗೆಲ್ಲ ಹಾಳುಮಾಡುವುದೇ ಎಂದೊಬ್ಬ ಜನತಾ ಹಿತೈಷಿ ಕೇಳುತ್ತಿದ್ದಾರೆ. ಈ ಪ್ರಶ್ನೆಗಳಿಗೆಲ್ಲ ತೀರ್ಮಾನ ಉತ್ತರ ಏನು? ಚರಿತ್ರೆಯನ್ನಿಷ್ಟು ಗಮನಿಸುವುದು ಈ ಸಂದರ್ಭದಲ್ಲಿ ಹಿತ.

ನಮ್ಮ ದೇಶವನ್ನು ಭಪ್ಪನ್ನಾರು ಲಫಂಗರು ಆಳುತ್ತಿದ್ದ ಕಾಲ ಒಂದಿತ್ತು–ಈಗ ಕಾಲ ಬದಲಾಗಿರುವುದರಿಂದ ಅದೇ ಲಫಂಗರು ಆಳುತ್ತಿಲ್ಲ, ಆಳುವವರ ಸಂಖ್ಯೆಯೂ ಭಪ್ಪನ್ನಾರನ್ನೂ ಮೀರಿದೆ. ಸಂತೋಷ ! ಆ ರಾಜರುಗಳು ಹಣವನ್ನು ಹೇಗೆ ಹಾಳು (ನಾವು ಹಾಳು ಎನ್ನುವುದು ಬೇಡ—ಖರ್ಚು ಅನ್ನೋಣ) ಮಾಡಿದರು ಎಂಬುದನ್ನ ಇಲ್ಲಿ ಪ್ರಸ್ತಾಪಿಸುವುದು ಸೂಕ್ತವಾದೀತಲ್ಲವೆ ? ಲೋಕೋಭಿನ್ನರುಚಿಃ ಎಂಬ ಆರ್ಯೋಕ್ತಿ ಇದೆ. ಪಾರಿವಾಳಗಳಿಗೆ ಮದುವೆ ಮಾಡುವುದು ಬಡೋದೆಯ ರಾಜ ಖಂಡೇರಾವ್ ಗಾಯಕವಾಡರಿಗೆ ಒಂದು ಹವ್ಯಾಸ. ಹವ್ಯಾಸ ಅಂದಮೇಲೆ ಮುಗಿಯಿತು—ಒಂದೇ ಬಾರಿ ಮಾಡಿದರೆ ಅವರಿಗೆ ತೃಪ್ತಿಯಾಗಲು ಸಾಧ್ಯವೆ ? ಒಂದು ವರ್ಷದಲ್ಲಿ ಮೂರು ಸಲವಾದರೂ ಪಾರಿವಾಳಗಳ ಮದುವೆಯನ್ನು ರಾಜ ಮರ್ಯಾದೆ, ವಿಜೃಂಭಣೆ, ವೈಭವಗಳಿಂದ ಮಾಡಬೇಕವರು. ಆ ಪಾರಿವಾಳಗಳಿಗೆ ಮದುವೆ ಅಂದರೇನು ಎಂಬುದು ತಿಳಿಯಲಿ ಬಿಡಲಿ, ಆ ಮಾತು ಬೇರೆ. ಮೊದಲೆಲ್ಲ ನಮ್ಮ ಅಜ್ಜ, ಮುತ್ತಜ್ಜರು ಐದು ವರ್ಷದ ವಧುವಿಗೂ ಎಂಟು ವರ್ಷದ ವರನಿಗೂ ಮದುವೆಗಳನ್ನು ಮಾಡಿ ಕಣ್ತುಂಬ ನೋಡಿ ಸುಖಿಸುತ್ತಿರಲಿಲ್ಲವೇ ? ಆ ಚಿಕ್ಕಮಕ್ಕಳಿಗೆ ಮಾತ್ರ ಏನು ತಿಳಿಯುತ್ತಿತ್ತು ಎಂದು ಆ ಪಾರಿವಾಳಗಳು ಪ್ರಶ್ನೆ ಕೇಳಿದರೆ ನಮ್ಮ ಉತ್ತರವೇನು ? ಉತ್ತರ ಕರ್ನಾಟಕದ ಕೆಲ ಹಳ್ಳಿಗಳಲ್ಲಿ ಹಸುಗೂಸುಗಳಿಗೆ ಪಾರಿವಾಳ ಅನ್ನುವ ವಾಡಿಕೆಯೂ ಇದೆ—ಇಂದಿಗೂ ಇದೆ. ಅದಿರಲಿ ಬಿಡಿ, ಬುದ್ಧಿಯಲ್ಲಿ ಎರಡೂ ಒಂದೇ ಎಂಬ ಮಾತನ್ನು ಹೇಳುವುದಕ್ಕಾಗಿ ಈ ಉದಾಹರಣೆಯನ್ನು

ಹೇಳಿದುದಾಯಿತು. ಈ ರಾಜಪಾರಿವಾಳ ಮತ್ತು ರಾಣಿಪಾರಿವಾಳಗಳ ಮದುವೆ ಗಾಗುತ್ತಿದ್ದ ಹಾಳು—ಅಲ್ಲ, ಕ್ಷಮಿಸಿ. ಕರ್ಚು ಎಷ್ಟು ? ಒಂದು ಲಕ್ಷಕ್ಕಿಂತ ಕಡಮೆ ಆಗಲು ಸಾಧ್ಯವೇ ? ಇಲ್ಲಿ ಮದುವೆ ಪಾರಿವಾಳಗಳದೋ ಅಥವಾ ರಾಜಪುತ್ರಿಯದೋ ಎಂಬುದು ಮುಖ್ಯವಲ್ಲ. ಕಪ್ಪೆಯ ಮದುವೆ ಆಗಲಿ, ಕತ್ತೆಯ ಮದುವೆ ಆಗಲಿ, ಮದುವೆ ಮಾಡುವವರಾರು ಎಂಬುದು ಮುಖ್ಯ. ಬಡೋದೆಯ ರಾಜರು ಮಾಡುವ ಮದುವೆ ಎಂದಮೇಲೆ ಬರೀ ಸಬ್‌ರಿಜಿಸ್ಟ್ರಾರ್ ಆಫೀಸಿನಲ್ಲಿ ಮಾಡಿದರೆ ಸಾಕೇ ? ಅಥವಾ ಯಾವುದೋ ಗುಡಿ, ಮಠಗಳಲ್ಲಿ ಮಾಡಿ ಆಯಿತು ಎಂದನಿಸಿದರೆ ಮುಗಿಯಿತೇ ? ಇಂದಿನ ಕಾಲದಲ್ಲಿ—ಬರ ಗಾಲದಲ್ಲಿ—ಸಮಾಜವಾದ ನಮ್ಮ ಮಂತ್ರವಾದ ಕಾಲದಲ್ಲಿ ಒಬ್ಬ ಮಾಮೂಲಿ ಯಃಕಶ್ಚಿತ್ ಮಂತ್ರಿಯೇ ಅಷ್ಟಷ್ಟು ಕರ್ಚುಮಾಡಿ ಸಕಲ ಮಂತ್ರಿ ವೈಭವಗಳಿಂದ ಮಗಳ ಮದುವೆ ಮಾಡುತ್ತಿರುವಾಗ ರಾಜಮಹಾರಾಜರು ಪಾರಿವಾಳಗಳ ಮದುವೆಗೆ ಒಂದು ಲಕ್ಷ ಕರ್ಚು ಮಾಡಿದರೆ ತಪ್ಪಾಯಿತೇ ? ರಾಜಗೃಹದಲ್ಲಿ ಮದುವೆ. ಪಾರಿವಾಳಗಳನ್ನು ಅಲಂಕರಿಸಬೇಡವೇ ? ನವನೂತನ ವಧೂವರರ ಮೆರವಣಿಗೆ ? ಆನೆಯ ಮೇಲೆ ಅಂಬಾರಿ ಕಟ್ಟಿ ಅದರಲ್ಲಿ ಪಾರಿವಾಳಗಳನ್ನು ಕೂಡಿಸಿ ವೈಭವದ ಮೆರವಣಿಗೆ ಮಾಡುತ್ತಿದ್ದರು. ರಾಜರ ಮನೆಯಲ್ಲಿ ಮದುವೆ ಎಂದಾಗ ಪ್ರಜೆಗಳ ಕರ್ತವ್ಯವೇನು ? ಪಿ ಡಬ್ಲ್ಯು. ಡಿ. ಮಂತ್ರಿಗಳ ಮನೆಯಲ್ಲಿ ಮದುವೆಯಾದಾಗ, ಎಂಜಿನಿಯರ್‌ಗಳು, ಕಂಟ್ರಾಕ್ಟರ್‌ಗಳು ಏನು ಮಾಡು ತ್ತಾರೆ ? ಅದನ್ನೇ ಪ್ರಜಾ ಮುಖಂಡರು ರಾಜರ ಪಾರಿವಾಳಗಳ ಮದುವೆಯಲ್ಲಿ ಮಾಡಿದರು. ಏನಾದರೂ ಕೊಡಲು ಮದುವೆ ಎಂಬುದೊಂದು ನೆಪಮಾತ್ರ. ಪ್ರಜೆಗಳು ಯಥೋಚಿತವಾಗಿ ವಧುಪಾರಿವಾಳಕ್ಕೂ, ವರಪಾರಿವಾಳಕ್ಕೂ ಕಾಣಿಕೆ, ಉಡುಗೊರೆಗಳನ್ನು ಅರ್ಪಿಸಿ ಮಹಾರಾಜರ ಕೃಪೆಗೆ ಪಾತ್ರರಾಗುತ್ತಿದ್ದರು. ಮಾಮೂಲಿ ಮದುವೆಯಂತೆ ಈ ಪಾರಿವಾಳಗಳ ಮದುವೆಯಲ್ಲೂ ಎಲ್ಲ ರೀತಿ ರಿವಾಜುಗಳೂ ಸಾಂಗೋಪಾಂಗವಾಗಿ ಇರುತ್ತಿತ್ತು. ಈ ಬಡೋದೆಯ ರಾಜರ ಘನ ಪ್ರಜಾಪರಿಪಾಲನೆಯ ಹದಿನಾಲ್ಕು ವರ್ಷಗಳಲ್ಲಿ ಇವರು ನಲವತ್ತೈದು ಲಕ್ಷ ರೂಪಾಯಿ ವೆಚ್ಚಮಾಡಿ ನಲವತ್ತೆರಡು ಜೊತೆ ರಾಜ ಪಾರಿವಾಳಗಳ ಅದ್ದೂರಿ ವಿವಾಹ ನಡೆಸಿದ್ದಾರೆ. ಏನಾದರೂ ಮಾಡಿದರೆ ಶತ್ರುಗಳೂ ಹೌದು

ಹೌದೆನ್ನಬೇಕು. ಶತ್ರುಗಳಲ್ಲದ ನಾವು ಹೌದು, ಹೌದು ಅನ್ನದಿರಲಾದೀತೇ ?

ಥೂ ! ಪಕ್ಷಿಗಳ ಮದುವೆಗೆ ಹಣ ವ್ಯಯ ಮಾಡುವುದು ಶುದ್ಧ ಮುರ್ಖ ತನ ಅಂತೀರಾ ? ಹಾಗೇ ಮಾಡಿ, ನಿಮ್ಮ ಮಾತಿಗೂ ಹೌದು–ಹೌದು ಅನ್ನದಿರ ಲಾದೀತೇ ?

ಇನ್ನೊಂದು ಮಾದರಿ—ಮಧ್ಯಪ್ರದೇಶದ ಮಹಾರಾಜರೊಬ್ಬರು ತುಲಸಿ ಮತ್ತು ಸಾಲಿಗ್ರಾಮಗಳಿಗೆ ಪ್ರತಿ ವಸಂತಋತುವಿನಲ್ಲೂ ಲಕ್ಷಾಂತರ ರೂಪಾಯಿ ಗಳ ವ್ಯಯದಿಂದ ಅದ್ಭುತ ರೀತಿ ವಿವಾಹ ಮಹೋತ್ಸವವನ್ನು ನೇತ್ರಾನಂದಕರ ವಾಗಿ ಏರ್ಪಡಿಸುತ್ತಿದ್ದರಂತೆ. ಅಮೋಘ ಮೆರವಣಿಗೆ, ಉಡುಗೊರೆಗಳ ರೂಪ ದಲ್ಲಿ ವಜ್ರ, ವೈಢೂರ್ಯಗಳ ಸುರಿಮಳೆ, ಮದುಮಗನಿಗೆ ವರದಕ್ಷಿಣೆ ಇತ್ಯಾದಿ ಎಲ್ಲವೂ ಸಾಂಗೋಪಾಂಗ. ಇದನ್ನು ಕೆಲವರು ತಪ್ಪು ಅನ್ನಲಿಕ್ಕಿಲ್ಲ ಅಲ್ಲವೇ ? ತುಲಸಿ ಸಾಲಿಗ್ರಾಮಗಳೆಂದೊಡನೆ ನಮ್ಮ ಮನದ ಕಂಣಿನ ಮುಂದು ದೇವರುಗಳು ಬಂದು ಸಾಲಾಗಿ ನಿಂತು ಡ್ರಿಲ್ ಮಾಡುತ್ತಾರೆ. ದೇವರು ಎಂದರೆ ಅಲ್ಲಿಗೆ ಮುಗಿಯಿತು, ಅದು ಬುದ್ಧಿಗೆ ಅಫೀಮು !

ಅಷ್ಟೇಕೆ, ಅನೇಕ ಕಡೆಗಳಲ್ಲಿ ವರ್ಷ ವರ್ಷವೂ ದೇವರುಗಳ ಮದುವೆ ಜರುಗುತ್ತಿಲ್ಲವೇ ? ಅದೇ ಗಂಡು ದೇವರು, ಅದೇ ಹೆಂಣು ದೇವತೆ ! ಮದುವೆ ಮಾತ್ರ ಪ್ರತಿವರ್ಷ....ಮನುಷ್ಯರೂ ಇದೇ ಪದ್ಧತಿಯನ್ನೇಕೆ ಅನುಸರಿಸ ಬಾರದು ? ಇದಕ್ಕೆ ತಿಂಮನದೊಂದು ಆಕ್ಷೇಪಣೆ ಇದೆ. ಒಂದು ವರ್ಷ ಇದ್ದ ಕ್ಕಿದ್ದಂತೆ ಹೆಂಣು ತಕರಾರು ಮಾಡಿ ನನಗೀ ಗಂಡ ಬೇಡ ಅಂದುಬಿಟ್ಟರೆ ಆ ಗಂಡನ ಗತಿ ಏನು ?

ದೇವರು ಅಂದರೇನು ? ಚಿಕ್ಕಮಕ್ಕಳ ಆಟಕ್ಕೆ ದೊಡ್ಡವರ ಬೊಂಬೆಗಳು ಬೇಕು, ದೊಡ್ಡವರ ಆಟಕ್ಕೆ ದೇವರುಗಳ ಬೊಂಬೆಗಳು ಬೇಕು. ಈ ದೇವರು ಗಳಿಗೆ ಮದುವೆ, ಊಟ, ಶಯನೋತ್ಸವ. ಬೆಳಗಿನಲ್ಲಿ ಎದ್ದು ಉದಯರಾಗ ವನ್ನು ಹಾಡಿ ನಿದ್ರೆಯಿಂದೆಬ್ಬಿಸುವುದು, ಮತ್ತೆ ಸ್ನಾನ–ಸೋಪು ಇಲ್ಲವೇನೋ ?– ಊಟ ! ಚಿಕ್ಕಮಕ್ಕಳು ಬೆಳೆದ ಮೇಲೆ ತಮ್ಮ ಬೊಂಬೆಯಾಟವನ್ನು ಬಿಡುತ್ತವೆ. ಆದರೆ ದೊಡ್ಡವರು ? ಇದಕ್ಕೆ ಉತ್ತರವನ್ನು ಅವರ ದೇವರೇ ಹೇಳಬೇಕು.

ಈ ದೇವರುಗಳಿಗೆ ನಾವು ಮದುವೆ ಮಾಡುತ್ತಿದ್ದೇವೆಂಬುದು ದೇವರು

ಗಳಿಗೆ ತಿಳಿಯುತ್ತದೆಯೇ ? ಇಲ್ಲ, ಹಾಗಾದರೆ ಪಾರಿವಾಳಗಳ ಮದುವೆ ಮಾತ್ರ ಅದು ಹೇಗೆ ಸ್ವಾಮೀ ತಪ್ಪು ಎಂದು ಕೇಳುತ್ತಾನೆ ತಿಂಮ ? ದೇವರಿಗೆ ತಲೆನೋವು ಆಗಿದೆಯೆಂದು ಹಣೆಗೆ ಶುಂಠಿಪಟ್ಟು ಹಾಕುವ ಸತ್ಸಂಪ್ರದಾಯ ಒಂದು ಎತ್ತರದ ಕ್ಷೇತ್ರದಲ್ಲಿದೆಯಂತೆ. ಆ ದೇವರ ತಲೆನೋವಿಗೆ ಕಾರಣ ಮಲಬದ್ಧತೆ ಇರಬಹುದೇ ? ಹಾಗಿದ್ದಲ್ಲಿ ದೇವರಿಗೊಂದು "ಎನಿಮಾ" ಏಕೆ ಕೊಡಬಾರದು ? ಎನಿಮಾ ಕ್ಯಾನ್ ಮಾತ್ರ ಚಿನ್ನದ್ದು ಇರಲಿ ಎಂದು ತಿಂಮನ ಸೂಚನೆ.

ಹೀಗೆಂದ ಮಾತ್ರಕ್ಕೆ ತಿಂಮನೂ ನಮ್ಮೊಬ್ಬ ಮಂತ್ರಿಮಾನ್ಯರಂತೆ ನಿರೀಶ್ವರವಾದಿ ಎಂದು ಬೈದು ಬಿಡಬೇಡಿ. ನಿರೀಶ್ವರವಾದಿ ಎಂಬುದು ಬೈ ಹೌದೆ ?

ಜನತೆ ಹಣವನ್ನು ಹಲವಾರು ರೀತಿಯಲ್ಲಿ ಹಲವಾರು ಕಾರಣಗಳಿಂದಾಗಿ ಖರ್ಚು ಮಾಡುತ್ತದೆ. ಇವುಗಳಲ್ಲಿ ಹಾಳು ಯಾವುದು, ಅಲ್ಲ ಯಾವುದು ? ಇದೊಂದು ಬಹು ತೊಡಕಿನ ಪ್ರಶ್ನೆ ಅನ್ನುತ್ತೀರಾ ? ಹಾಗೇನಿಲ್ಲ, ಕೊಂಚ ತಾರ್ಕಿಕ ದೃಷ್ಟಿಯಿಂದ ವಿಮರ್ಶಾತ್ಮಕವಾಗಿ ನೋಡಿದರೆ ಇದನ್ನು ಸುಲಭವಾಗಿ ಉತ್ತರಿಸಬಹುದು.

ಹಣ ಇರುವುದೇತಕ್ಕೆ ? ಹರಿದಾಡಲಿಕ್ಕೆ, ಹರಿದಾಡುವುದೇ ಹಣದ ಪ್ರಪ್ರಥಮ ಕರ್ತವ್ಯ. ಇದನ್ನು ನಿಲ್ಲಿಸಿ ಹಣವನ್ನು ಮನೆಯಲ್ಲಿಟ್ಟು ಕೊಳೆಸುವುದು ರಾಷ್ಟ್ರಕ್ಕೆ ಅವನು ಮಾಡುವ ಅಪಚಾರ. ಇದು ನಿಜವಾದ ಹಣದ ಹಾಳು. ಹೀಗೆ ಮಾಡುವವನಿಗೆ ಸರ್ಕಾರ ಶಿಕ್ಷೆ ವಿಧಿಸಬೇಕು. ಹಣವನ್ನು ಚಲಾವಣೆಯಲ್ಲಿ ತರುವುದೇ ಪುಣ್ಯದ ಕೆಲಸ ಅನ್ನುತ್ತಾನೆ ತಿಂಮ.

ಹಾಗಾದರೆ ಹೆಂಡ ಕುಡಿಯುವುದು ? ಇದು ರಾಷ್ಟ್ರದ ದೃಷ್ಟಿಯಿಂದ ಹಣದ ಹಾಳಲ್ಲ. ಹೆಂಡದಂಗಡಿಯನ್ನು ಹರಾಜಿನಲ್ಲಿ ಪಡೆಯುವವನು ಸರ್ಕಾರಕ್ಕೆ ಹಣವನ್ನು ತುಂಬುತ್ತಾನೆ. ಅಲ್ಲದೆ ನೀವು (ನೀವು ಅಂದರೆ ನೀವೇ ಅಲ್ಲ–ನಾವು) ಹೆಂಡ ಕುಡಿಯುವುದರಿಂದ ಕೆಲಜನಕ್ಕೆ—ಹೆಂಡ ಇಳಿಸುವವರು, ಹೆಂಡದ ಗಾಡಿ ಹೊಡೆಯುವವರು, ಮುಂತಾದವರಿಗೆ—ಉದ್ಯೋಗವನ್ನು ಒದಗಿಸಿಕೊಟ್ಟಂತಾಗುತ್ತದೆ. ಎಲ್ಲವೂ ಅಷ್ಟೇ ಸ್ವಾಮೀ ! ಇಸ್ಪೀಟು ಆಡುವುದರಿಂದ ಹಣ ಹರಿದಾಡುತ್ತದೆ. ರಾಷ್ಟ್ರೀಯವಾಗಿ ಇದೂ ದೇಶದ ಕೆಲಸವೇ ? ಹಾಗಾದರೆ

ಎಲ್ಲವೂ ಹಣದ ಸದುಪಯೋಗವೇ ! ಹಾಳು ಹೇಗಾಯಿತು ? ಹಣ ಇರುವವರನ್ನು ಹೇರಳವಾಗಿ ಹಾಳು ಮಾಡಲು ಪ್ರೇರೇಪಿಸಬೇಕು. ಇದೇ ನಿಜವಾದ ಸಮಾಜ ಸೇವೆ.

ಕೇವಲ ಎರಡೇ ಸಂದರ್ಭಗಳಲ್ಲಿ ಹಣದ ಹಾಳು ಕಂಡು ಬರುತ್ತದೆ. ಮೊದಲನೆಯದು–ಸದಾ ಪ್ರಚಾರದಲ್ಲಿರಬೇಕಾದ ಹಣವನ್ನು ನೆಲದಲ್ಲಿಯೋ, ಪೆಟ್ಟಿಗೆಯಲ್ಲಿಯೋ, ದೇವರಿಗಾಗಿ ಮುಡಿಪೆಂದೇ ಆಗಲಿ ಬಂಧಿಸಿಡುವುದು. ಇಂತಹವರನ್ನು ಗಲ್ಲಿಗೇರಿಸಬೇಕು. ಇನ್ನು ಎರಡನೆಯದು–ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ ಆಹಾರಧಾನ್ಯ, ತುಪ್ಪ, ಬಟ್ಟೆಬರೆಗಳನ್ನು ಬೆಂಕಿಯಲ್ಲಿ ಹಾಕುವುದು ಪ್ರಜಾದ್ರೋಹ. ದೇವರ ಮದುವೆಯನ್ನು ಮಾಡುವುದು ?

ಇಂದು ದೇವರ ಮದುವೆ ಹಂದರದಿ ಮಾಡಿದರು ।
ಬಂದು ಉಂಡರು ಕೈಮುಗಿದು ನಡೆದರು ॥
ತಂದೆ ಎನ್ನಪ್ಪಾ ! ಬೊಂಬೆ ಆದೆಯ ನೀನು ? ಮ ।
ತ್ತೆಂದು ನಿನ ಶ್ರಾದ್ಧ ? ಕೇಳೊ ತಿಂಮ ॥

# ಮುತ್ತಣ್ಣ ಮೂರ್ಛೆ ಹೋದ

"ಈ ಡಾಕ್ಟರುಗಳ ಹಣೇಬರಹವೇ ಇಷ್ಟು. ಆಗ ಹಾಗೆ ಬೊಗಳಿದ, ಈಗ ಹೀಗೆ ಬೊಗಳುತ್ತಾನೆ. ಇವರುಗಳ ಬಳಿ ಬರುವ ನಮಗೇ ಬುದ್ಧಿ ಇಲ್ಲ."

ಬಾಯಲ್ಲಿಯೇ ವಟಗುಟ್ಟಿಕೊಳ್ಳುತ್ತ ಮೆತ್ತಗೆ ಒಂದೊಂದಾಗಿ ಮೆಟ್ಟಿಲುಗಳನ್ನಿಳಿದರು ಮೊಳಕಾಲ ಮೇಲೆ ಕೈ ಊರುತ್ತ. ಇಳಿವಯಸ್ಸಿನಲ್ಲಿ ಮೆಟ್ಟಿಲು ಏರುವಾಗಿನಕಿಂತಲೂ ಇಳಿಯುವಾಗಲೇ ಶ್ರಮ ಹೆಚ್ಚಲ್ಲವೇ, ಪಾಪ! ಅದು ಅನುಭವಿಸಿದವರಿಗಷ್ಟೇ ಗೊತ್ತು.

ಇಡೀ ಡಾಕ್ಟರ್ ಜಾತಿಯ ಮೇಲೆಯೇ ಕೋಪ ಬಂದಿತ್ತು ರಾಯರಿಗೆ. ಈ ಕೋಪಕ್ಕೆ ಕಾರಣ ಇಲ್ಲದಿಲ್ಲ. ಐದು ವರ್ಷಗಳ ಹಿಂದೆ ರಾಯರಿಗೆ ಒಂದು ಹೊಸ ನಮೂನೆಯ ತೊಂದರೆ ಆಗಿತ್ತು. ತೊಂದರೆ ಅಂದರೆ ಅದೇನೂ ಅಂತಹ ದೊಡ್ಡ ಕಾಯಿಲೆ ಅಲ್ಲ, ಹಾಸಿಗೆಗೆ ಕೆಡವಲಿಲ್ಲ. ಇದಕ್ಕಿದ್ದಂತೆ ಅಸಂದರ್ಭವಾಗಿ ಜಲಭಾಧೆ ಅವಸರ. ತಡೆಯಲು ಅಸಾಧ್ಯ.

ಮುಪ್ಪನ್ನು ಆದಷ್ಟು ದೂರವಿಡಬೇಕೆಂಬ ಆಸೆ ಎಲ್ಲ ಮುದುಕರಿಗೂ. ಏಕೆ ಎಂದು ಕೇಳಿರಿ, ಒಬ್ಬರ ಬಳಿಯೂ ಉತ್ತರವಿಲ್ಲ. ಸಾವಿಗೆ ಅಂಜದವರೂ ಮುಪ್ಪಿಗೆ ಅಂಜುತ್ತಾರೆ. ಅಂತೂ ಮುಪ್ಪನ್ನು ಮುಂದೂಡಬೇಕೆಂಬ ಪ್ರಯತ್ನ, ಮುಪ್ಪು ಅಡರಿದ ನಂತರ. ಅದಕ್ಕಾಗಿ ಬೆಳಗಿನ ಜಾವ ಎದ್ದೊಡನೆ, ಮತ್ತೆ ಸಂಜೆ ಸೂರ್ಯ ಮುಳುಗಿದ ನಂತರ–ಹೀಗೆ ದಿನಕ್ಕೆರಡು ಬಾರಿ ಹವೆ ಸೇವಿಸಲು

ಊರ ಹೊರಗಡೆ ಉದ್ದಕ್ಕೂ ವಾಕಿಂಗ್ ಹೋಗುವ ಅಭ್ಯಾಸವನ್ನಿಟ್ಟುಕೊಂಡಿದ್ದರು. ಐವತ್ತರ ಗಡಿಯಲ್ಲಿ ಇರುವವರಿಗೆ ಬೇರಾವ ದೈಹಿಕ ವ್ಯಾಯಾಮ ಹೊಸದಾಗಿ ಸಾಧ್ಯ ? ನಸುಕಿನಲ್ಲಿಯೇ ಎದ್ದು ಆಷ್ಟಿಷ್ಟು-ಕೈಲಾದಷ್ಟು-ಸೂರ್ಯ ನಮಸ್ಕಾರ ಹಾಕುತ್ತಿದ್ದರು. ಎಂದೂ ಯಾವ ಕಾಹಿಲೆಯನ್ನೂ ಅನುಭವಿಸಿದ ಘಟ ಅಲ್ಲ ಅದು. ಪಿಂಚಿನಿ ಆಗುವ ದಿನ ದೂರವಿರಲಿಲ್ಲ, ಐವತ್ತೈದು ಬಂದೇನೆಂದು ಅಂಜಿಸುತ್ತಿತ್ತು. ಆದರೂ ಒಂದು ಬಾರಿಯೂ ತಲೆನೋವು ಎಂದ ಅಸಾಮಿಯಲ್ಲ. ಅಂತಹ ರಾಯರಿಗೆ ಇದ್ದಕ್ಕಿದ್ದಂತೆ ಈ ತೊಂದರೆ ಸುರು. ಮನೆಯಲ್ಲಿದ್ದಾಗ, ಆಫೀಸಿನಲ್ಲಿದ್ದಾಗ ಇದು ಅವರಿಗೆ ಅಷ್ಟು ಹಿಂಸೆ ಅನಿಸಿರಲಿಲ್ಲ. ಅನುಕೂಲವಿತ್ತು, ಅವಸರವೆನಿಸಿದಾಗ ಹೋಗಿ ಬಂದುಬಿಡುತ್ತಿದ್ದರು ಆದರೂ ಒಮ್ಮೊಮ್ಮೆ 'ಥೂ ! ಅದೆಷ್ಟು ಸಲವಪ್ಪಾ ಈ ನರಕದರ್ಶನ' ಎಂದು ಕೆಲಬಾರಿ ತಮ್ಮಲ್ಲಿಯೇ ಅಂದುಕೊಂಡುದೂ ಉಂಟು. ಆದರೆ ಹೆದ್ದಾರಿಯಲ್ಲಿ ನಡೆಯುತ್ತಿರುವಾಗ ಈ ತೊಂದರೆ ಸುರು ಆದರೆ ? ಅಂತಹ ಸುಶಿಕ್ಷಿತ ಮನುಷ್ಯ. ಸಮಾಜದಲ್ಲಿ ಗಣ್ಯವ್ಯಕ್ತಿ, ಅವರಿವರಿಂದ ದಾರಿಯುದ್ದಕ್ಕೂ 'ನಮಸ್ಕಾರ ಸಾರ್' ಎಂದೆನಿಸಿಕೊಳ್ಳುವ ವಯಸ್ಸು ಮತ್ತು ಬಾಳಿನ ಅಂತಸ್ತು ಇರುವ ವ್ಯಕ್ತಿ. ಸ್ತ್ರೀಯರು, ಮಕ್ಕಳು ಓಡಾಡುವ ಬೀದಿಯ ಅಂಚಿನಲ್ಲಿ ಮೂತ್ರ ವಿಸರ್ಜನೆ ಮಾಡುತ್ತ ಕುಳಿತುಕೊಳ್ಳುವುದೇ ? ಒಂದು ಸಲವಂತೂ ರಾಯರಿಗೆ ಪ್ರಾಣ ಹೋದಂತಾಗಿತ್ತು-ಹುಡಿಗಿಯರ ಶಾಲೆಯ ಸನಿಯದಲ್ಲಿಯೇ ಕೂಡ ಬೇಕಾಯಿತು. ಕೆಲ ಕಿಡಿಗೇಡಿ ಹುಡಿಗಿಯರು ಇವರಿಗೆ ಕೇಳುವಂತೆ ನಕ್ಕು ಬಿಟ್ಟರು. ಏನನ್ನೋ ಅಂದರೂ ಕೂಡ. ಇದಕ್ಕೂ ಹೆಚ್ಚಿನ ಅಪಮಾನ ಬೇಕೇ ? ಆ ವಯಸ್ಸಿನ ಮೊಮ್ಮಕ್ಕಳಿದ್ದರು ರಾಯರಿಗೆ-ಇಲ್ಲಿ ಅಲ್ಲ, ಸ್ಟೇಟ್ಸ್‌ನಲ್ಲಿ. ಅವರ ಮಗ ಮತ್ತು ಅಮೆರಿಕನ್ ಸೊಸೆ ಅಲ್ಲಿಯೇ ನೆಲಸಿದ್ದರು.

ಮರುದಿವ ಅಷ್ಟುಹೊತ್ತಿಗೇ ತಮ್ಮ ಡಾಕ್ಟರ್‌ರಿಗೆ ಫೋನು ಮಾಡಿದರು. ಈಗಲೇ ಬನ್ನಿ ಎಂದುತ್ತರ ಬಂತು. ರಾಯರಿಗೆ ಅಂತಿಂತಹ ಡಾಕ್ಟರ್‌ಗಳಲ್ಲಿ ಲವಲೇಶವೂ ನಂಬಿಕೆ ಇಲ್ಲ ; ಫಾರಿನ್‌ಗೆ ಹೋಗದ ಡಾಕ್ಟರು ಡಾಕ್ಟರೇ ? ಎಂದಂದು ನಕ್ಕುಬಿಡುತ್ತಿದ್ದರು. ಡಾಕ್ಟರ್ ಆಗುವವನು ಸ್ಟೇಟ್ಸ್‌ಗೆ ಹೋಗುವುದು ಬೇಡ, ಇಂಗ್ಲೆಂಡಿಗಾದರೂ ಹೋಗಬೇಡವೆ ? ಮಾಮೂಲಿ

ಎಂ ಬಿ.ಜಿ.ಎಸ್‌ಗಳಿಂದ, ದಿಲ್ಲಿಯ ಎಂ.ಎಸ್‌ಗಳಿಂದ ಔಷಧಿ ತೆಗೆದುಕೊಳ್ಳುವುದ ಕ್ಕಿಂತಲೂ ಫಾರಿನ್‌ಗೆ ಹೋಗಿ ಬಂದ ಡಾಕ್ಟರನ ಕೈಯಲ್ಲಿ ಸಾಯುವುದು ಶ್ರೇಯಸ್ಕರ ಎಂಬುದು ಅವರ ಖಚಿತ ಅಭಿಪ್ರಾಯ. ಆದಕಾರಣ ಅವರ ಡಾಕ್ಟರು ಎಂ.ಆರ್.ಸಿ.ಪಿ (ಲಂಡನ್). ರಾಯರು ತಮ್ಮ ಮನೆಯಲ್ಲಿ ಈ ದಿನ ಗಳಲ್ಲೂ ರಾಷ್ಟ್ರಪಿತನಾದ ಗಾಂಧಿಜಿಯ ಫೋಟೋ ಹಾಕಿದವರಲ್ಲ—ವಿಕ್ಟೋರಿಯಾ ಮಹಾರಾಣಿಯವರ ಭಾವಚಿತ್ರ ಮಾತ್ರ ಅವರ ಡ್ರಾಯಿಂಗ್ ರೂಮಿನಲ್ಲಿ ರಾಜಾಜಿಸುತ್ತಿತ್ತು.

ರಾಯರಿಗಾಗಿ ಡಾ|| ಚಂದ್ರನ್ ಕಾದು ಕುಳಿತಿದ್ದರು. ಡಾಕ್ಟರರ ತಂದೆ ಮತ್ತು ರಾಯರು ಕಾಲೇಜ್ ಗೆಳೆಯರಲ್ಲವೆ? ಬಾಗಿಲಲ್ಲಿಯೇ ಕೈಕುಲುಕಿ ಸ್ವಾಗತಿಸಿ ಒಳಕ್ಕೆ ಕರೆದೊಯ್ದು ಕೂಡಿಸಿದರು. ಕೂಡಲೆ ಎರಡು ಕಾಫಿ ತರಲು ಡಾಕ್ಟರು ಕೆಲಸದ ಹುಡುಗನಿಗೆ ಅಪ್ಪಣೆ ಮಾಡಿದರು.

"ಒಂದಕ್ಕೆ ಸಕ್ಕರೆ ಬೇಡ" ಎಂದಂದರು ರಾಯರು ಹಿಂದೆಯೆ.

"ಯಾಕೆ ಬೇಡ?" ಡಾ|| ಚಂದ್ರನ್ ಪ್ರಶ್ನೆಚಿಹ್ನೆಯಂತೆ ಮುಖ ಮಾಡಿದರು.

"ಸಿಹಿ ಮೂತ್ರವೆಂದು ಅನುಮಾನ."

"ಅದನ್ನು ನಾನು ಹೇಳಬೇಕು, ನೀವಲ್ಲ. ಸಕ್ಕರೆ ಹಾಕಿದ ಕಾಫಿ ತೆಗೆದು ಕೊಳ್ಳಿ ಈಗ, ಅನಂತರ ಪರೀಕ್ಷೆ ಮಾಡುತ್ತೇನೆ."

ಬಿಟ್ಟಿ ರೋಗಿಗೆ ಆತ್ಮವಿಶ್ವಾಸವನ್ನು ಕೊಡುವುದು ಜಾಣ ಡಾಕ್ಟರನ ಮೊದಲ ಕೆಲಸ. ಔಷಧಿ ಕೇವಲ ಹಣ ಕೊಡುವ ರೋಗಿಗಳಿಗೆ ಮಾತ್ರ. ರಾಯರಿಂದ ಡಾ|| ಚಂದ್ರನ್ ಹಣ ತೆಗೆದುಕೊಳ್ಳಲು ಸಾಧ್ಯವೇ? ತಮ್ಮ ಗತಿಸಿದ ತಂದೆಯವರ ಆಪ್ತ ಮಿತ್ರರಲ್ಲವೇ?

ಹಾಗೆಯೇ ಮಾಡಪ್ಪಾ ಎಂದಂದು ರಾಯರು ಕಾಫಿಯನ್ನು ಗುಟುಕರಿಸುತ್ತ ತಮ್ಮ ಅರ್ಜೆಂಟ್ ಮೂತ್ರದ ಕತೆ ವಿವರಿಸಿದರು

"ಹೆಚ್ಚಾಗಿ ಬಾಯಾರಿಕೆ ಆಗುತ್ತೆಯೆ?"

"ಇಲ್ಲ"

"ಬೇಗ ನಿಶ್ಶಕ್ತರಾಗಿ ಉಶ್ ಎನ್ನುವಷ್ಟು ದಣುವಾಗುತ್ತೆಯೆ?"

"ಛೆಛೆ! ಅಂತಹದೇನೂ ಇಲ್ಲ."

"ನಿಮ್ಮ ವಂಶದಲ್ಲಿ ಯಾರಿಗಾದರೂ ತಂದೆಯ ಕಡೆ, ತಾಯಿಯ ಕಡೆ— ಈ ಕಾಯಿಲೆ ಇತ್ತೆ ?"

"ಯಾರಿಗೂ ಇಲ್ಲ ಮಹರಾಯಾ! ನನ್ನೆಲ್ಲ ಸ್ಥಿರ ಚರಾಸ್ತಿಗಳಂತೆ ಈ ರೋಗವೂ ನನ್ನ ಸ್ವಾರ್ಜಿತವೇ, ಪಿತ್ರಾರ್ಜಿತ ಒಂದೂ ಇಲ್ಲ. ನಾನಷ್ಟೇ ಪಿತ್ರಾರ್ಜಿತ" ಎಂದಂದು ರಾಯರು ಚಿಕ್ಕದಾಗಿ ನಕ್ಕರು.

ಕೂಡಲೇ ಡಾ|| ಚಂದ್ರನ್ ಜಜ್‌ಮೆಂಟ್ ಹೇಳುವ ಧ್ವನಿಯಲ್ಲಿ ಹೇಳಿದರು.

"ಹಾಗಾದರೆ ಇದು ಡಯಾಬಿಟೀಸ್ ಅಲ್ಲ. ಆದರೂ ಒಂದು ಕೆಲಸ ಮಾಡಿ"

ಎಂದಂದು ಕಾಗದದಲ್ಲಿ ಏನನ್ನೋ ಬರೆಯಲುದ್ಯುಕ್ತರಾದರು.

"ಈ ಡಾಕ್ಟರ್ ಬಳಿ ಹೋಗಿ—ಐದೋ ಹತ್ತೋ ಕೇಳಿದರೆ ಬಿಸಾಡಿ. ಮೂತ್ರ, ರಕ್ತ ಎಲ್ಲವನ್ನೂ ಪರೀಕ್ಷೆ ಮಾಡಿ ರಿಜಲ್ಟ್ ಬರೆದುಕೊಡುತ್ತಾನೆ. ಮೊದಲು ಅನುಮಾನ ಪರಿಹಾರವಾಗಿ ಹೋಗಲಿ. ಆಮೇಲೆ ನನ್ನ ಬಳಿ ಬನ್ನಿ"

ಎಂದು ಹೇಳಿ, ನಂತರ ಲೋಕಾಭಿರಾಮವಾಗಿ ಏನೆಲ್ಲ ಮಾತನಾಡಿ ಬೀಳ್ಕೊಟ್ಟರು.

ರಾಯರ ಮೊದಲ ಮೂತ್ರ, ಇಡ್ಲಿ ಸಕ್ಕರೆ ಸಹಿತ ಕಾಫಿ ಆದನಂತರದ ಮೂತ್ರ ಮತ್ತು ರಕ್ತ, ಇಷ್ಟೆಲ್ಲ ಪರೀಕ್ಷೆ—ಆಯಿತು. ಇದು ಸಿಹಿ ಮೂತ್ರವಲ್ಲ ಎಂದು ಬಾಯಿಂದಲೇ ಹೇಳಿ ತಮ್ಮ ಅಭಿಪ್ರಾಯವನ್ನು ಬರೆದುಕೊಟ್ಟರು, ಆ ಇನ್ನೊಬ್ಬ ಡಾಕ್ಟರು ಬರೆದುಕೊಟ್ಟುದನ್ನು ನೋಡುತ್ತ 'ಸರಿ, ಒಳಕ್ಕೆ ನಡೆಯಿರಿ' ಎಂದರು. ಡಾಕ್ಟರ್ ದೃಷ್ಟಿಯಲ್ಲಿ ಹೇಸಿಗೆ ಎಂಬುದೇ ಇಲ್ಲವಲ್ಲಾ? ಬಲಗೈ ತೋರುಬೆರಳಿಗೆ ರಬ್ಬರ್ ಚೀಲ ತೊಡಿಸಿದರು, ಪಶ್ಚಿಮ ದ್ವಾರದಿಂದ ರಾಯರ ಅಂತರಂಗ ಪರೀಕ್ಷೆ ಮಾಡಿದರು. ಅದೊಂದು ಬಗೆಯ ತೃಪ್ತಿಯಿಂದ ತಲೆ ಯಾಡಿಸಿ ಅಲ್ಲಿಯೇ ಇದ್ದ ಬೇಸಿನ್‌ನಲ್ಲಿ ಕೈ ತೊಳೆದು ಬಂದು ಕುರ್ಚಿಯಲ್ಲಿ ಕುಳಿತರು. ಇವರ ಮುಖ ನೋಡುತ್ತ ಇದಿರು ಕುರ್ಚಿಯಲ್ಲಿ ರಾಯರೂ ಕಾದು ಕುಳಿತರು.

ಡಾಕ್ಟರ್ ಚಂದ್ರನ್ ಸಾವಕಾಶವಾಗಿ ನುಡಿದರು.

"ಇದು ಏನು ಎಂಬುದು ನನಗೆ ಗೊತ್ತಿತ್ತು. ಆದರೆ ನಿಮ್ಮ ತಲೆಯಲ್ಲಿದ್ದ ಆ ಅನುಮಾನ ಹೋಗಿಬಿಡಲಿ ಎಂದು ಅವರ ಬಳಿ ಕಳಿಸಿದೆ. ಇದು ಡಯಾಬಿಟೀಸ್ ಅಲ್ಲ, ಆ ಯೋಚನೆ ಬಿಟ್ಟುಬಿಡಿ"

"ಹಾಗಾದರೆ ಇದೇನು ಕಾಯಿಲೆಯಪ್ಪಾ ?"

"ಸಾಧಾರಣವಾಗಿ ಮುಪ್ಪಿನಲ್ಲಿ ಅನೇಕರಿಗೆ ಇದು ಬರುವುದುಂಟು. ಇದನ್ನು ಇಂಗ್ಲೀಷಿನಲ್ಲಿ ಎನ್‌ಲಾರ್ಜ್‌ಮೆಂಟ್ ಆಫ್ ಪ್ರಾಸ್ಟೇಟ್ ಗ್ಲಾಂಡ್ ಅನ್ನುತ್ತಾರೆ. ಒಂದು ಗ್ರಂಥಿ—ಮೂತ್ರ ಕೋಶದ ಬಳಿ ಇರುವ ಗ್ರಂಥಿಯೊಂದು ಬೆಳೆದು ದೊಡ್ಡದಾಗುತ್ತದೆ. ಅದರಿಂದಾಗಿ ಮೂತ್ರ ಕೋಶ ಚಿಕ್ಕದಾಗಿ ಆಗಾಗ ಅದನ್ನು ಖಾಲಿ ಮಾಡಬೇಕಾಗುತ್ತದೆ. ಇದಕ್ಕಾಗಿ ಏನೂ ಚಿಂತಿಸಬೇಕಿಲ್ಲ, ಮಾಮೂಲಿ ಔಷಧಿಗಳಿಂದ ಗುಣಪಡಿಸಬಹುದು...."

"ಅಥವಾ ಯಾರಾದರೂ ಎಫ್. ಆರ್. ಸಿ. ಎಸ್ ಗೆ ತೋರಿಸಲೇ ?"

"ಸರ್ಜನ್ ಬಳಿ ಎಂದೂ ಹೋಗಬೇಡಿ" ಎಚ್ಚರಿಕೆ ಕೊಡುವ ದನಿಯಲ್ಲಿ ಡಾ || ಚಂದ್ರನ್ ಹೇಳಿದರು. ಹಾಗೆಯೆ ಮುಂದುವರಿಸಿದರು.

"ನೆಗಡಿ ಅಂದರೆ ಮೂಗು ಕುಯಿದು ನೋಡಬೇಕು ಅನ್ನುತ್ತಾರೆ, ಕೆಮ್ಮು ಅಂದರೆ ಗಂಟಲು ಕುಯ್ಯಬೇಕು ಅನ್ನುತ್ತಾರೆ. ಏನೂ ಬೇಡ, ಇನ್ನೊಂದು ತಿಂಗಳು ನೋಡೋಣ, ಆಮೇಲೆ ಬನ್ನಿ."

ಸಮಾಧಾನ ಹೇಳಿ ಕಳಿಸಿದರು ಡಾಕ್ಟರ್, ಆದರೆ ರಾಯರಿಗೆ ಅದೇಕೋ ಪೂರ್ತಿ ಸಮಾಧಾನವಾಗಲಿಲ್ಲ. ಕುರುಡು ನಾಯಿ ಸಂತೆಗೆ ಹೋದಂತೆ— ಇವನೂ ಇಂಗ್ಲಂಡಿಗೆ ಹೋಗಿದ್ದಾನೆ, ಬಂದಿದ್ದಾನೆ ಅಷ್ಟೆ. ರೋಗದ ಹೆಸರು ಹೇಳಿದ, ಅಷ್ಟೇ ಸಾಕು. ರಾಯರು ಮತ್ತೆ ಡಾ|| ಚಂದ್ರನ್ ಬಳಿ ಹೋಗಲಿಲ್ಲ. ಪ್ರಾಯಶಃ ಅದಕ್ಕೆ ಇನ್ನೊಂದು ಕಾರಣವೂ ಇರಬೇಕು—ಲೈಂಗಿಕ ಅವಯವಗಳ ರೋಗ. ಚಂದ್ರನ್ ಚಿಕ್ಕ ಹುಡುಗ ಇವರ ಮುಂದು. ಅವನ ಬಳಿ ಇದನ್ನೆಲ್ಲ ಹೇಳಿಕೊಳ್ಳುವುದೇ ಎಂದು ಕೊಂಚ ಸಿಗ್ಗನಿಸಿರಬೇಕು, ಪಾಪ !

ಕಾಲ ಸಂದಿತು, ಚಳಿಗಾಲ ಸುರುವಾಯಿತು. ರಾಯರ ತೊಂದರೆ ಇನ್ನೂ ಹೆಚ್ಚಾಯಿತು. ತಮ್ಮ ರೂಮ್‌ನಲ್ಲಿಯಕಿಂತಲೂ ಬಾತ್ ರೂಮಿನಲ್ಲಿಯೇ ಹೆಚ್ಚು ಸಮಯ ಕಳೆಯುವ ಪರಿಸ್ಥಿತಿ ಬಂತು. ಯಾವ ಡಾಕ್ಟರ್

ಬಳಿ ಹೋಗುವುದೂ ಎಂದು ತಲೆ ಕೆಡಿಸಿದರು. ಕೆಲವೇ ಸಮಯ–ಥಟ್ಟನೆ ಹೊಳೆ ಯಿತು. ಹೌದು, ಡಾಕ್ಟರ್ ಮುತ್ತಣ್ಣ! ಎಫ್. ಆರ್. ಸಿ. ಎಸ್ ಮಾಡಿ, ಮಿಲಿಟರಿಯಲ್ಲಿದ್ದವನು. ಮೇಜರ್ರೋ ಕ್ಯಾಪ್ಟನ್ನೋ ಆಗಿದ್ದ ಅಲ್ಲವೇ? ಹೈಸ್ಕೂಲಿನಲ್ಲಿ ಇವರ ಕ್ಲಾಸುಮೇಟು, ಬೆಂಚ್‌ಮೇಟು. ಒಂದೆರಡು ಬಾರಿ ಕ್ಲಬ್ಬಿನಲ್ಲಿ ಸಿಕ್ಕಿದ್ದ, ಇಬ್ಬರೂ ಬಹು ಹೊತ್ತು ಹರಟುತ್ತ ಬೀರು ಗುಟುಕರಿಸಿ ದ್ದರು. ಅವನೇ ಸರಿಯಾದ ಗುರು ಇದಕ್ಕೆ ಎಂದು ನಿಶ್ಚಯಿಸಿ ಕೂಡಲೆ ಫೋನ್ ಮಾಡಿದರು. ಬುಧವಾರ ಬೆಳಿಗ್ಗೆ ಹನ್ನೊಂದಕ್ಕೆ ಬನ್ನಿ ಎಂದು ಗುರುವಾರ ಸಂಜೆಗೇ ಉತ್ತರಬಂತು. ಆಯಿತು, ಇನ್ನೊಂದು ವಾರ ಎಂದು ಮನಕ್ಕೆ ಸಮಾಧಾನ ಹೇಳಿಕೊಂಡರು.

ಮುಂದಿನ ಬುಧುವಾರ ಬೆಳಿಗ್ಗೆ ಹನ್ನೊಂದಕ್ಕೆ ಸರಿಯಾಗಿ ರಾಯರು ಡಾ|| ಮುತ್ತಣ್ಣನವರ ಕಾಲಿಂಗ್ ಬೆಲ್ ಒತ್ತಿದರು. ಸೇವಕನೊಬ್ಬ ಬಾಗಿಲನ್ನು ತೆರೆದ, ಒಳಕ್ಕೆ ಕರೆದೊಯ್ದು ಕುರ್ಚಿಯಲ್ಲಿ ಕೂಡಿಸಿದ. ರಾಯರು ತಮ್ಮ ವಿಜಿಟಿಂಗ್ ಕಾರ್ಡ್ ಅವನ ಕೈಗಿತ್ತು ಕಾಯುತ್ತ ಕುಳಿತರು. ಕೊಂಚವೇ ಸಮಯ. 'ಹಲೋ' ಎನ್ನುತ್ತ ಡಾಕ್ಟರ್ ಮುತ್ತಣ್ಣ ಬಂದು ಕೈ ಕುಲಿಕಿ ಹಲ್ಲಲ್ಲಿ ಕಚ್ಚಿದ್ದ ಸಿಗಾರ್ ಹೊರತೆಗೆದು 'ಬಾರಯ್ಯಾ ಒಳಕ್ಕೆ' ಎಂದು ಸಲುಗೆ ಯಿಂದ ಭುಜದ ಮೇಲೆ ಕೈ ಹಾಕಿ ಒಳಗಿನ ಕೋಣೆಗೆ ಕರೆದೊಯ್ದರು.

ಉಭಯ ಕುಶಲೋಪರಿ ಆಯಿತು. ರಾಯರು ಸಾಂಸಾರಿಕ ವಿಷಯ ವನ್ನು ಸೂಕ್ಷ್ಮವಾಗಿ ಹೇಳಿ ಮುಗಿಸಿದರು.

"ಮಗ ಎಂಜಿನಿಯರ್, ಸ್ಟೇಟ್ಸ್‌ನಲ್ಲಿದ್ದಾನೆ. ಅಲ್ಲಿಯವಳೇ ಕನ್ನೆ ಅವನಿಗೀಗ ಮೂವರು ಮಕ್ಕಳು. ಹೇರಳವಾಗಿ ಹಣ ಕಳಿಸುತ್ತಿದ್ದಾನೆ. ಅಡಚಣೆ ಇಲ್ಲ, ಸುಖವಾಗಿದ್ದೇನೆ"

"ನಿನ್ನ ಮಿಸೆಸ್?"

"ಅವಳು ಹೋಗಿಯೇ ಇಪ್ಪತ್ತೈದು ವರ್ಷಗಳ ಮೇಲೆ ಆಯಿತಲ್ಲಾ? ಒಬ್ಬ ಬಹು ಒಳ್ಳೆಯ ಹಳೆಯ ಸರ್ವೆಂಟ್ ಇದ್ದಾನೆ. ಅವನೂ ಮುದುಕ. ಚೆನ್ನಾಗಿ ನೋಡಿಕೊಳ್ಳುತ್ತಾನೆ."

ರಾಯರು ಮುತ್ತಣ್ಣನ ಸಂಸಾರದ ಬಗ್ಗೆ ಒಂದು ಪ್ರಶ್ನೆಯನ್ನೂ ಕೇಳ

ಲ್ಲ. ಅವರಿಗೆ ಗೊತ್ತಿತ್ತು. ಮುತ್ತಣ್ಣ ಮಿಲಿಟರಿಯಲ್ಲಿದ್ದಾಗಲೇ ಅವನ ಹೆಂಡತಿ ಒಬ್ಬ ಯುರೋಪಿಯನ್ ಮೇಜರ್ ಜನರಲ್‌ನೊಂದಿಗೆ ಪರಾರಿ ಆಗಿ ಬಿಟ್ಟಿದ್ದಳು. ಇದನ್ನರಿತ ಯಾವ ಜಾಣ ಸಲ್ಲದ ಪ್ರಶ್ನೆಗಳನ್ನು ಕೇಳುತ್ತಾನೆ?

ಕೂಡಲೆ ಡಾ|| ಮುತ್ತಣ್ಣ ನೇರವಾಗಿ ಪಸ್ತುತ ವಿಷಯಕ್ಕೇ ಬಂದರು.

"ಏನು ಕಂಪ್ಲೇಂಟು ?"

ಬೋಳುತಲೆ ಡಾಕ್ಟರ ಮುಂದು ಹೇಳಲು ಬಿಳೀ ತಲೆ ರಾಯರಿಗೆ ಸಂಕೋಚವೆ ? ಸಮವಯಸ್ಕರು, ಮನೋಭಾವವೂ ಒಂದೇ. ಡಾ|| ಚಂದ್ರನ್ ಹೇಳಿದುದನ್ನು ಸ್ಪಷ್ಟವಾಗಿ ಹೇಳಿದರು.

"ಈ ವಯಸ್ಸಿನಲ್ಲಿ ಅದು ಸಹಜ. ಮೇಜಿನ ಮೇಲೆ ಮಲಗು"

ಅಂತರಂಗ ಪರೀಕ್ಷೆ ಆಯಿತು. ಅದೊಂದು ಬಗೆಯ ತೃಪ್ತಿಯಿಂದ ತಲೆ ಯಾಡಿಸಿ ಕೈ ತೊಳೆಯುತ್ತ ಡಾ|| ಮುತ್ತಣ್ಣ ನುಡಿದರು.

"ಅಷ್ಟೇನೂ ಹೆಚ್ಚಿಲ್ಲ, ಕೊಂಚ ಇದೆ. ಇರಲಿ ಬಿಡು, ಟ್ಯಾಬ್ಲೆಟ್ಸ್ ಬರೆದು ಕೊಡುತ್ತೇನೆ, ತೆಕ್ಕೊ."

"ಆಪರೇಷನ್ ಮಾಡಿಬಿಟ್ಟರೆ ?" ಕೇಳಿ ರಾಯರು ಮುಖ ನೋಡಿದರು.

"ಛೆಛೆ ! ಈಗೇಕಯ್ಯಾ ಆಪರೇಷನ್‌ಗೆ ಅವಸರ, ಮುಂದು ಅವಶ್ಯವಿದ್ದರೆ ನಾನೇ ಮಾಡುತ್ತೇನೆ. ಈಗ ಬೇಡ"

ಎರಡು ವರ್ಷಗಳು ಉರುಳಿದವು. ರಾಯರು ರಿಟಾಯರ್ ಕೂಡ ಆದರು. ಅವರ ಆ ಅರ್ಜೆಂಟ್ ಮೂತ್ರದ ತೊಂದರೆ ಇಲ್ಲವೇ ಇಲ್ಲ ಎಂಬಷ್ಟು ಕಡಮೆಯಾಯಿತು. ಅದನ್ನು ಮರೆತೂ ಬಿಟ್ಟರು. ಇನ್ನೊಂದು ಚಳಿಗಾಲ, ಆ ಕಾಯಿಲೆಯ ಉಪದ್ರವ ಸುರುವಾಯಿತು. ಮತ್ತೆ ಡಾ|| ಮುತ್ತಣ್ಣನಿಗೆ ಫೋನು. ನಾಳೆಯೇ ಬಂದು ಬಿಡು, ಬೆಳಿಗ್ಗೆ ಹನ್ನೊಂದು ಎಂದು ಔತಣವೂ ಬಂತು. ರಾಯರು ಮತ್ತೆ ಡಾ|| ಮುತ್ತಣ್ಣನ ಕೂರ್ಗ್ ಕ್ಲಿನಿಕ್ ಮುಂದು ಹಾಜರ್. ಯಥಾಪ್ರಕಾರ ಅಂತರಂಗ ಪರೀಕ್ಷೆ ಆಯಿತು. ಮುತ್ತಣ್ಣನ ಬಿಳಿ ಹುಬ್ಬು ಮೇಲಕ್ಕೆ ಹೋಯಿತು.

"ಹೌದಯ್ಯಾ, ತುಂಬಾ ದೊಡ್ಡದಾಗಿದೆ"

"ಆಪರೇಷನ್ ಮಾಡಿಬಿಡು"

"ಈಗೆಷ್ಟು ನಿನ್ನ ವಯಸ್ಸು ?"

ರಾಯರು ನಿಖರವಾಗಿ ಹೇಳಿದರು. ಡಾಕ್ಟರ್ ಮುತ್ತಣ್ಣ ಅಡ್ಡಡ್ಡವಾಗಿ ತಲೆಯಾಡಿಸಿ

"ಊಹುಂ, ಬಹಳ ತಡವಾಯಿತು. ಈ ವಯಸ್ಸಿನಲ್ಲಿ ಆಪರೇಷನ್ ಅಪಾಯ"

ಎಂದು ಗಂಭೀರ ಧ್ವನಿಯಲ್ಲಿ ನುಡಿದರು. ಹಿಂದೆಯೆ ಚಿಕ್ಕದಾಗಿ ನಕ್ಕು

"ಇರಲಿ ಬಿಡು, ಏನೀಗ ಅದರಿಂದ ನಿನಗೆ ತೊಂದರೆ ? ಇದರಿಂದ ಪುರುಷತ್ವ ಕೊಂಚ ಹೆಚ್ಚಾಗುತ್ತದೆ, ಅಷ್ಟೇ"

ಎಂದಂದು ಮಾತು ಮುಗಿಸಿಬಿಟ್ಟರು.

ರಾಯರು ಮೆಟ್ಟಲುಗಳನ್ನಿಳಿಯುವಾಗ ಇಡೀ ಡಾಕ್ಟರ ಜಾತಿಯನ್ನೇ ಶಪಿಸಿದರು.

'ಆಗ ಹಾಗೆ ಬೊಗಳಿದ, ಈಗ ಹೀಗೆ ಬೊಗಳುತ್ತಾನೆ'

ಕಿವಿಗೆ ಬಿದ್ದ ಮಾತೆಲ್ಲವೂ ಗಾಳಿಗೆ ಹೋಗುತ್ತವೆಯೆ ? ಕೆಲವಂತೂ ಮನಸ್ಸಿನಲ್ಲಿ ಭದ್ರವಾಗಿ ಬೇರೂರುತ್ತವೆ. 'ಇದರಿಂದ ಪುರುಷತ್ವ ಕೊಂಚ ಹೆಚ್ಚಾಗುತ್ತದೆ, ಅಷ್ಟೇ' ಎಂದಂದಿದ್ದ ಡಾ|| ಮುತ್ತಣ್ಣ. ಹೆಂಡತಿ ಸತ್ತು ಮೂವತ್ತು ವರ್ಷ ಆಗುತ್ತಾ ಬಂತು, ಈಗ ಪುರುಷತ್ವ ಹೆಚ್ಚುತ್ತದೆ ? ಕಾಡ ಬೆಳದಿಂಗಳು !

ಡಾಕ್ಟರು ಹೇಳಿರದಿದ್ದರೆ ಏನಾಗುತ್ತಿತ್ತೋ ಯಾರು ಬಲ್ಲರು ? ಅಂತೂ ಆ ಮಾತಿನ ಪರಿಣಾಮ ಸುರುವಾಯಿತು, ಬರೀ ಮಾನಸಿಕವಾಗಿ ಮಾತ್ರವಲ್ಲ– ದೈಹಿಕವಾಗಿಯೂ ! ಮುದುಕರಿಗೆ ಕೊನೆಗೊಮ್ಮೆ ಯೌವನ ಮರುಕಳಿಸುತ್ತದೆ ಎಂದೆಲ್ಲೋ ಓದಿದುದು ರಾಯರಿಗೆ ಈಗ ಸ್ಮರಣೆಗೆ ಬಂತು. ಇದೆಲ್ಲದರ ಪರಿಣಾಮ ? ಮೂವತ್ತು ವರ್ಷಗಳ ಹಿಂದಿದ್ದ ದೈಹಿಕ ಆತುರ ಈಗ ಸುರುವಾಯಿತು.

ಒಂದೊಂದು ರಾತ್ರಿಯಂತೂ ಬರೀ ಇದೇ ವಿಚಾರವೇ ತಲೆ ತಿಂದು ನಿದ್ರೆಯೇ ಹಾಳಾಯಿತು. ಈ ದಾಹಕ್ಕೆ ಪರಿಹಾರ ?

ರಾಯರು ಅದೊಂದು ಬಗೆಯ ಕಟ್ಟಿನಲ್ಲಿ ಬೆಳೆದು ಬಾಳಿದವರು. ನೈತಿಕ ಮಟ್ಟವನ್ನು ಮೊದಲಿನಿಂದಲೂ ಕಾಯ್ದುಕೊಂಡು ಬಂದವರು. ವಾಮಮಾರ್ಗ ವೆಂಬುದು ಅವರ ಬಳಿಯೂ ಸುಳಿಯದು. ಕಟ್ಟೆ ಕಡೆಗೊಂದು ನಿರ್ಧಾರಕ್ಕೆ ಬಂದರು—ಮದುವೆ ಒಂದೇ ಸರಿಯಾದ ಮಾರ್ಗ. ಹಿಂದೆಯೆ ತಲೆಯಲ್ಲೊಂದು ಸಂಶಯ—ಈ ವಯಸ್ಸಿನಲ್ಲಿ! ಹೆಂಣು ಕೊಡುವವರಿದ್ದಾರೆಯೆ? ಕೂಡಲೆ ಅಲ್ಲಿಯೆ ಉತ್ತರ—ಮೂರು ನಾಲ್ಕು ಲಕ್ಷ ರೂಪಾಯಿಗಳ ಸ್ವಾರ್ಜಿತ ಆಸ್ತಿ ಇದೆ. ಒಂದು ಹೆಂಣನ್ನು ತರುವುದು ನನಗೆ ಕಷ್ಟವೆ? ಹೀಗೆಯೆ ತಲೆಯಲ್ಲಿ ಪಾಣಿಪತ್ತು ಸಾಗಿತ್ತು. ತಮ್ಮ ಬಾಲ್ಯದ ಮಿತ್ರ ಸರ್ವಜ್ಞಾಚಾರಿಯ ನೆನಪು ಥಟ್ಟನೆ ಬಂತು. ಹೌದು, ಅವನಿಗೆ ಸೂಡುಗಟ್ಟಲೆ ಹೆಂಣು ಮಕ್ಕಳಿವೆ, ಒಂದಕ್ಕೂ ಇನ್ನೂ ಲಗ್ನವಿಲ್ಲ. ವಿಚಾರಿಸುವುದರಲ್ಲಿ ತಪ್ಪೇನಿದೆ? ತಲೆಯನ್ನು ಹರಿಬಿಟ್ಟ ಮೇಲೇನಿದೆ? ಅದು ಹೋದಂತೆಲ್ಲ ರಾಯರೂ ಹೊರಟರು.

ಮರುದಿನ ಬೆಳಿಗ್ಗೆ ಸರ್ವಜ್ಞಾಚಾರಿಯನ್ನು ಬರಮಾಡಿಕೊಂಡರು, ಈ ವಿಚಾರವನ್ನು ಮೆತ್ತಗೆ ಎತ್ತಿದರು. ಆಚಾರಿಯ ಬಾಯಿ ನೀರೊಡೆಯಿತು, ರಾಯರ ಆಸ್ತಿ ಎಷ್ಟಿದೆ? ನಾಳೆ ಈ ಜಟಾಯು ಗುಟಕ್ ಅಂದರೆ ಎಲ್ಲವೂ ತನ್ನದೇ.

"ಮನೆಯಲ್ಲಿ ವಿಚಾರಿಸಿ ಹೇಳ್ತೇನೆ ಸ್ವಾಮಿ!"

ಇಪ್ಪತ್ನಾಲ್ಕು ಗಂಟೆಗಳೂ ಸಂದಿಲ್ಲ, ಸರ್ವಜ್ಞಾಚಾರಿ ರಾಯರ ಮನೆ ಯಲ್ಲಿ ಹಾಜರ್.

"ನನ್ನ ದೊಡ್ಡ ಮಗಳು ಒಪ್ಪಿದ್ದಾಳೆ ರಾವ್‌ಜೀ. ಆದರೆ ಅವಳದೊಂದೇ ಒಂದು ಕರಾರು."

ಏನು ಎಂಬಂತೆ ಮುಖ ನೋಡಿದರು ರಾಯರು.

"ನಮ್ಮ ಮನೆಯಲ್ಲಿ ಚಿಕ್ಕ ಮಕ್ಕಳೇ ಇಲ್ಲ ನೋಡೀ, ಅದರಿಂದಾಗಿ ಅವಳಿಗೆ ಮಕ್ಕಳೆಂದರೆ ಜೀವ. ಮದುವೆಯಾಗಿ ಎರಡು ವರ್ಷದೊಳಗಾಗಿ ಅವಳು ತಾಯಿ ಆಗಲೇಬೇಕು. ಇಲ್ಲದಿದ್ದಲ್ಲಿ ನಿಮ್ಮ ಆಸ್ತಿಯನ್ನು ಅವಳ ಹೆಸರಿ ನಲ್ಲಿ ಬರೆದುಕೊಟ್ಟು ನೀವು ಮನೆಯಿಂದ ಹೊರಬೀಳಬೇಕು. ಹೀಗೆಂದು ಈಗಲೆ ಉಯಿಲು ಬರೆದುಕೊಡಬೇಕು. ಮರುದಿನವೇ ಮದುವೆ."

"ಆಗಲಿ, ನಾಳೆ ಹೇಳುತ್ತೇನೆ"

ಸರ್ವಜ್ಞಾಚಾರಿ ಹೊಸ್ತಿಲು ದಾಟಿದರು ಮನಸ್ಸಿನಲ್ಲಿಯೆ ಮಂಡಿಗೆ ಉಣ್ಣುತ್ತ. ರಾಯರು ಹಿಂದೆಯೆ ಟೆಲಿಫೋನ್ ಕೈಗೆತ್ತಿ ಡಾ || ಮುತ್ತಣ್ಣ ನವರನ್ನು ಕರೆದರು.

"ಈ ಸಂಜೆ ಆರಕ್ಕೆ, ಕ್ಲಬ್ಬಿಗೆ ಬಾ, ನಾನೂ ಬರುತ್ತೇನೆ, ಕೊಂಚ ಮಾತ ನಾಡಬೇಕು"

"ರೈಟ್" ಎಂದಂದು ಡಾ || ಮುತ್ತಣ್ಣ ಫೋನನ್ನು ಕೆಳಕ್ಕಿಟ್ಟರು.

ಡಾಕ್ಟರ್ ಮುತ್ತಣ್ಣ ಸರಿಯಾಗಿ ಆರಕ್ಕೇ ಬಂದರು. ಮಿಲಿಟರಿ ಮನುಷ್ಯ ನಲ್ಲವೆ? ಆದರೆ ರಾಯರು ಮಾತ್ರ ನಾಲ್ಕೂವರೆಗೇ ಬಂದು ಆರಕ್ಕಾಗಿ ಕಾಯ್ದು ಕುಳಿತಿದ್ದರು. ಲಾನ್ ಮೂಲೆಯಲ್ಲಿದ್ದ ಮೇಜಿಗೆ ಕರೆದೊಯ್ದರು ರಾಯರು. ಮೂರನೆ ಕುರ್ಚಿಯನ್ನು ತೆಗೆಯಲು ಹುಡುಗನಿಗೆ ಅಪ್ಪಣೆ ಮಾಡಿದರು.

"ನನಗೆ ಬೀರು, ನಿನಗೆ ಮುತ್ತಣ್ಣಾ ?"

ಬಿಳಿ ಮೀಸೆಯ ತುದಿಯನ್ನು ಬೆರಳಿನಿಂದ ಚೂಪಿಸುತ್ತ ಮಿಲಿಟರಿ ಮುತ್ತಣ್ಣ 'ರಮ್' ಎಂಡಪ್ಪಣೆ ಕೊಡಿಸಿದರು. ಇಬ್ಬರೂ ಗುಟುಕರಿಸುತ್ತ ಕುಳಿತರು, ಮುತ್ತಣ್ಣ ಮಧ್ಯೆ ಮಧ್ಯೆ ಹಲ್ಲಲ್ಲಿ ಕಚ್ಚಿದ್ದ ಸಿಗಾರ್‌ನಿಂದ ಮುಗಿಲು ಕಾಣದಷ್ಟು ಹೊಗೆ ಊದುತ್ತಿದ್ದ. ವಿಷಯವನ್ನು ಪ್ರಸ್ತಾಪ ಮಾಡುವುದು ಹೇಗೆ ಎಂದು ರಾಯರು ಇನ್ನೂ ಮೀನ, ಮೇಷ ಮಾಡುತ್ತಿದ್ದರು. ಮುತ್ತಣ್ಣ ತಾವಾಗಿಯೆ ಈ ಕೆಲಸವನ್ನು ರಾಯರಿಗೆ ಹಗುರ ಮಾಡಿಕೊಟ್ಟರು

"ಹೇಗಿದೆಯಯ್ಯಾ ನಿನ್ನ ಹಳೇ ರೋಗ ?"

"ಆ ಹಳೇರೋಗ ಈಗ ಹೊಸ ಸುಖಕ್ಕೆ ದಾರಿ ಮಾಡಿಕೊಟ್ಟಿದೆ"

ಹೊಟ್ಟೆಯೊಳಕ್ಕಿಷ್ಟು ಬೀರು ಹೊಕ್ಕಿದೆ, ತಲೆಗೆ ಮದುವೆ ವಿಚಾರ ಏರಿದೆ. ಕಣ್ಣೆದುರಿನಲ್ಲಿ ಸರ್ವಜ್ಞಾಚಾರಿಯ ಮಗಳು ಸಾಕ್ಷಾತ್ಕರಿಸಿ ನಿಂತಂತಾಗಿತ್ತು ರಾಯರಿಗೆ.

"ನೀನು ಹೇಳಿದ್ದೇ ಕರೆಕ್ಟು ಮುತ್ತಣ್ಣ ! ಪುರುಷತ್ವ ನಿಜವಾಗಿಯೂ ಹೆಚ್ಚಾಗಿದೆ. ಈಗ ಮದುವೆಯ ಯೋಚನೆಯಲ್ಲಿದ್ದೇನೆ. ಆ ವಿಷಯಾ ಮಾತ ನಾಡಲಿಕ್ಕೇ ನಿನ್ನನ್ನು ಬಾ ಅಂದದ್ದು."

"ಅಚ್ಛಾ" ಎಂದಷ್ಟೆ ಖುಷಿಯಿಂದ ನುಡಿದು ಗ್ಲಾಸಿನಲ್ಲಿ ಸುಮಾರು ಅರ್ಧ ದಷ್ಟಿದ್ದ ರಮ್ಮನ್ನು ಒಂದೇ ಬಾರಿಗೆ ಮುಗಿಸಿ ಎರಡನೆಯದರ ದಾರಿ ಕಾಯುತ್ತ ಕುಳಿತರು ಡಾ|| ಮುತ್ತಣ್ಣ.

ರಾಯರು ವಿಷಯವನ್ನು ವಿಶದೀಕರಿಸಿದರು; ಸರ್ವಜ್ಞಾಚಾರಿಯ ಕರಾರನ್ನೂ ತಿಳಿಸಿ ಡಾಕ್ಟರ್ ಮುತ್ತಣ್ಣನ ಮುಖವನ್ನು ನೇರವಾಗಿ ನೋಡುತ್ತ ಅಷ್ಟೇ ನೇರವಾಗಿ ಒಂದು ಪ್ರಶ್ನೆಯನ್ನು ಕೇಳಿದರು.

"ನೋಡಯ್ಯಾ, ನನಗೆ ಸ್ಪಷ್ಟವಾಗಿ ಹೇಳಿಬಿಡು. ಅವಳಿಗೆ ಒಂದಾದರೂ ಮಗುವಾಗಲೇ ಬೇಕು, ಅದೂ ಎರಡೇ ವರ್ಷದೊಳಗಾಗಿ. ಇದನ್ನು ನೀನು ಗ್ಯಾರಂಟಿ ಕೊಟ್ಟರೆ ಮದುವೆ ಆಗಿಬಿಡುತ್ತೇನೆ."

"ಅವಳಿಗೇಕಯ್ಯಾ ಮಕ್ಕಳಾಗುವುದಿಲ್ಲ ?"

ಎಂದುತ್ತರಿಸುತ್ತ ಬಿಳಿ ಮೀಸೆಯಲ್ಲಿಯೆ ಮುಸಿ ಮುಸಿ ನಕ್ಕ. ಮಿಲಿಟರಿ ಮನುಷ್ಯ, ಶೀಲ ಅಶ್ಲೀಲಗಳ ಬಗ್ಗೆ ಭೇದವಿದೆ ಎಂಬುದೇ ಗೊತ್ತಿಲ್ಲ ಆ ಪ್ರಾಣಿಗೆ. ಸಾಲದುದಕ್ಕೆ ಒಳಹೊಕ್ಕಿದ್ದ ರಮ್ ಕೆಲಸ ಮಾಡುತ್ತಲಿದೆ. ಮನಸ್ಸು ಹಗುರ, ಮಾತು ಮತ್ತಷ್ಟೂ ಹಗುರ.

"ಮದುವೆ ಮಾಡಿಕೊ ಅವಳಿಗೆ ಮಗುವಾಗಬೇಕು ತಾನೆ ? ಮನೆ ಯಲ್ಲಿಯೇ ಒಬ್ಬ ಪೇಯಿಂಗ್ ಗೆಸ್ಟ್ ಇಟ್ಟುಕೊ."

ಮತ್ತೆ ರಾಯರ ಮತ್ತು ಡಾ|| ಮುತ್ತಣ್ಣನವರ ಭೇಟಿ ಎಂದಿಗೋ. ಸುಮಾರು ಒಂದೂವರೆ ವರ್ಷದನಂತರ ಇಂಗ್ಲೀಷ್ ಪಿಕ್ಚರ್ ನೋಡಲು ಬಂದಾಗ ಇಂಟರ್‌ವಲ್‌ನಲ್ಲಿ ಒಬ್ಬರನ್ನೊಬ್ಬರು ಗುರುತಿಸಿ ಕೈ ಕುಲುಕಿದರು. ಥಟ್ಟನೆ ಮುತ್ತಣ್ಣನ ತಲೆಗೆ ಅದೇನೋ ಹೊಳೆಯಿತು !

"ಮದುವೆ ಮಾಡಿಕೊಂಡಿ ಏನಯ್ಯಾ? ಮಗು ಆಯಿತೇ ?"

"ಆರು ತಿಂಗಳು ಅವನಿಗೀಗ. ಭೂಪ ಹುಟ್ಟಿದಾಗಲೇ ಎಂಟು ಪೌಂಡು ಇದ್ದ."

ರಾಯರು ಈ ಮಾತನ್ನು ಸಾಕಷ್ಟು ಹೆಮ್ಮೆಯಿಂದಲೇ ಹೇಳಿಕೊಂಡರು. ತಪ್ಪೇನು ಇದರಲ್ಲಿ ?

ಮುತ್ತಣ್ಣನ ಮಿಲಿಟರಿ ಸಂಸ್ಕೃತಿ ತಲೆ ಎತ್ತಿತು.

"ಹೌದೇ ? ಹಾಗಾದರೆ ಇನ್ನು ಆ ಪೇಯಿಂಗ್ ಗೆಸ್ಟ್ ಅವಶ್ಯಕತೆ ಇಲ್ಲ. ಅವರನ್ನು ಓಡಿಸಿ ಬಿಡು"

"ಛೆ, ಪಾಪ ! ಏನು ಮುತ್ತಣ್ಣಾ, ನಾನಷ್ಟು ಹೃದಯಹೀನನೆ ? ಅವಳಿಗೀಗ ಒಂಭತ್ತು ತಿಂಗಳು. ಈ ವಾರದಲ್ಲಿಯೇ ಹೆರಿಗೆ ಆಗಬೇಕು, ಪಾಪ !"

ಮುತ್ತಣ್ಣ ಮೂರ್ಛೆ ಹೋದ.

# ಕುದುರೆಯ ಹೆಸರು

ಸುಬ್ಬಮ್ಮ ಯಾವ ಕಾಲದ ಹೆಣ್ಣು ಮಗಳು, ಪಾಪ! ಆಕೆಯ ಹೆಸರೇ ಸೂಚಿಸುವಂತೆ ಆದಿಶೇಷ ಹುಟ್ಟಿದಾಗಲೇ ಆಕೆಯೂ ಹುಟ್ಟಿದಳೋ ಏನೋ? ನಾನು ಕಂಡಾಗಲಂತೂ ಸುಬ್ಬಮ್ಮ ಪೂರ್ತಿ ಹಣ್ಣು ಹಣ್ಣು ಮುದುಕಿ–ಆಕೆ ಮದುವೆಯಾಗೇ ಹತ್ತಿಪ್ಪತ್ತು ವರ್ಷಗಳು ಸಂದಿರಬೇಕು.

ಚಿಕ್ಕ ಮಗುವಾಗಿದ್ದಾಗ ತಾಯಿ ಹಾಕಿದ್ದ ಮೊಟ್ಟಮೊದಲ ಪಾಠವೇ ಆಕೆ ಮಸಣ ಸೇರುವವರೆಗೂ ಬೆನ್ನು ಹತ್ತಿತ್ತು—ಸಾಮಾನ್ಯವಾಗಿ ಎಲ್ಲರ ಕತೆಯೂ ಅಷ್ಟೆ. ಅದರಲ್ಲೂ ಹೆಣ್ಣು, ಶಾಲೆಯ ಮೆಟ್ಟಲನ್ನೂ ತುಳಿಯದ ಅವಿದ್ಯಾವಂತೆ. ಗಂಡ ಬದುಕಿರುವವರೆಗೂ ಪತಿಸೇವೆ ಮಾಡಿದಳು, ಆ ಪತಿ ಶುದ್ಧ ಅಯೋಗ್ಯನಾಗಿದ್ದರೂ. ಅನಂತರದ ಹವ್ಯಾಸ, ಮಕ್ಕಳ ಪೋಷಣೆಗಿಂತಲೂ ಹೆಚ್ಚಾಗಿ ಪುರಾಣ ಪುಣ್ಯ ಕಥೆ, ದೇವರು ಬ್ರಾಹ್ಮಣರು, ತೀರ್ಥಯಾತ್ರೆ, ದಾನಧರ್ಮ. ಇದಕ್ಕೂ ಹೆಚ್ಚು ಬೇರೇನು ಮಾಡಲು ಸಾಧ್ಯ ಆ ಮಡಿ ಮನಸ್ಸಿನ ಹೆಂಗಸಿಗೆ? ಆಸ್ಟ್ರೋನಟ್ ಆಗಿ ಚಂದ್ರಮಂಡಲಕ್ಕೆ ಹೋಗಬೇಕೇ ಆಕೆ? ಅಥವಾ ಈಸ್ಪೀಟು ಆಡಲು ಕ್ಲಬ್ಬಿಗೆ ಬರಬೇಕೆ? ಪತ್ರಿಕೆ ಓದುತ್ತ ಕುಳಿತಿದ್ದ ಮಗ ರಾಮಣ್ಣ ಒಂದು ಬಾರಿ ಸುಬ್ಬಮ್ಮನಿಗೆ ಹೇಳಿದ ಅಮೆರಿಕಾದವರು ಚಂದ್ರಲೋಕಕ್ಕೆ ಹೋಗಿ ಬಂದರೆಂದು. ಆ ಪವಿತ್ರ ಸುಬ್ಬಮ್ಮನ ಮನಸ್ಸು ಇಂತಹ ಸುಳ್ಳು ಕತೆಗಳನ್ನೆಲ್ಲ ನಂಬುವುದುಂಟೆ?

"ನಿನ್ನ ತಲೆ! ಮಾನವ ಕ್ರಿಮಿಗಳಿಗೆ ಅದೆಲ್ಲ ಸಾಧ್ಯವೇ? ಚಂದ್ರ ದೇವರು ರಾಮಣ್ಣಾ! ಹುಲು ಮಾನವರಾದ ನಾವೆಲ್ಲಿ, ಆ ದೇವರೆಲ್ಲಿ? ಅದೆಲ್ಲಾ ಸುಳ್ಳು, ನಂಬಬೇಡ"

ಎಂದು ಮಗನಿಗೇ ಬುದ್ಧಿವಾದ ಹೇಳಿದಳು.

"ಪತ್ರಿಕೆಯಲ್ಲಿ ಬರೆದಾರಮ್ಮಾ! ಫೋಟೋ ಕೂಡ ಇದೆ, ನೋಡು"

ಎಂದನ್ನುತ್ತ ರಾಮಣ್ಣ ಪತ್ರಿಕೆಯನ್ನು ತಂದು ಮುಖಕ್ಕೆ ಹಿಡಿದ. ಅದನ್ನು ನೋಡುತ್ತಾಳೆಯೆ ಸುಬ್ಬಮ್ಮ? ಪಾಪ ಘಟನೆ!

"ಛೀ ಹುಚ್ಚಾ! ಪತ್ರಿಕೆ ಅವರೇನು ಸತ್ಯ ಹರಿಶ್ಚಂದ್ರರೇ? ತಮ್ಮ ಪತ್ರಿಕೆಗಳು ಹೆಚ್ಚು ಮಾರಾಟವಾಗಲೆಂದು ಏನೇನೋ ಸುಳ್ಳೆಲ್ಲ ಬರೀತಾರೆ"

ಎಂದು ಒಂದೇ ಮಾತಿನಲ್ಲಿ ಪತ್ರಿಕಾಪ್ರಪಂಚವನ್ನೇ ಜರಿದುಬಿಟ್ಟಳು.

ಕುಂತಿ ಕನ್ಯಾವಸ್ಥೆಯಲ್ಲಿದ್ದಾಗ ಅರಿಯದೆ ಸೂರ್ಯ ಮಂತ್ರ ಜಪಿಸಿದುದ ಕ್ಕಾಗಿ ಕಿವಿಯಿಂದ ಕರ್ಣನನ್ನು ಹೆತ್ತಳು ಎಂಬುದನ್ನು ಭದ್ರವಾಗಿ ನಂಬಿದ್ದ ಸುಬ್ಬಮ್ಮನಿಗೆ ಅಮೇರಿಕನ್ನರು ಚಂದ್ರಮಂಡಲಕ್ಕೆ ಹೋದ ಸಂಗತಿಯನ್ನು ನಂಬುವುದು ಅಸಾಧ್ಯವಾಯಿತು. ಕಡುಬು ಇಳಿದ ಗಂಟಲಲ್ಲಿ ನೀರು ಇಳಿಯ ಲಿಲ್ಲ.

ಆ ಸಂಜೆ ಪುರಾಣ ಮುಗಿಸಿಕೊಂಡು ಮನೆಗೆ ಬರುತ್ತಿರವಾಗ ಈ ಆಸ್ಟ್ರೋನಟ್ ಸಂಗತಿ ನಿಜವೆಂದು ಕೌಶಲ್ಯಾಬಾಯಿಯೇ ಹೇಳಿದರು. ಸುಬ್ಬಮ್ಮ ನಿಗೆ ಕೌಶಲ್ಯಾಬಾಯಿಯ ಮಾತು ವೇದವಾಕ್ಯ. ಆಕೆಯೂ ತನ್ನಂತೆ ಮಹಾ ದೈವಭಕ್ತಳು, ಪುರಾಣ ಪುಣ್ಯ ಕಥೆಗಳಲ್ಲಿ ಅಪಾರ ಶ್ರದ್ಧೆ ಉಳ್ಳವಳು, ಇದೆಲ್ಲ ದುದರಕಿಂತಲೂ ಹೆಚ್ಚು ವೇದಾಂತವನ್ನು ತಿಳಿದವಳು ಮತ್ತು ಅಷ್ಟಿಷ್ಟು ವಿದ್ಯಾ ವಂತೆ ಕೂಡ. ಆಕೆಯೇ ಅ, ಈ ಮಾತನಾಡುತ್ತ ಅದಾವುದೋ ಸಂದರ್ಭ ಬಂದಾಗ ಹೇಳಿದಳು.

"ಅದು ನಿಜ ಸುಬ್ಬಮ್ಮನವರೇ! ಎಂತಹ ಸಾಹಸ ನೋಡೀ, ಆ ಜನದ್ದು. ಚಂದ್ರಮಂಡಲಕ್ಕೆ ಹೋಗುವುದೆಂದರೆ ಸಾಮಾನ್ಯವೇ? ವಿಜ್ಞಾನ ಬಹಳ ಬೆಳೆದಿದೆ ಆ ದೇಶಗಳಲ್ಲೆಲ್ಲ"

ಇಷ್ಟು ಹೇಳಿ ತನ್ನ ಮನೆಗೆ ತಾನು ಹೊರಟು ಹೋದಳು ಕೌಶಲ್ಯಾ

ಬಾಯಿ. ಆದರೆ ಈ ಬಡ ಸುಬ್ಬಮ್ಮನ ಗತಿ? ಕೌಶಲ್ಯಾಬಾಯಿ ದಡ್ಡಿ ಅಲ್ಲ, ಸುಳ್ಳು ಹೇಳುವವಳಲ್ಲ, ನಂಬಲೇಬೇಕಾಯಿತು. ಮನಸ್ಸಿಗೆ ಎಷ್ಟೇ ಬೇಡ ವಾಗಲಿ, ನಂಬಿದಳು. ಅದರ ಪರಿಣಾಮ? ನಮಸ್ಸೂರ್ಯಾಯ ಚಂದ್ರಾಯ ಮಂಗಳಾಯ ಬುಧಾಯ ಮುಂತಾಗಿ ನವಗ್ರಹ ಸ್ತುತಿಯನ್ನು ಚಿಕ್ಕಂದಿನಲ್ಲಿಯೇ ಬಾಯಿಪಾಠ ಮಾಡಿದ ಹೆಣ್ಣು, ಪಾಪ! ದಾರಿಯುದ್ದಕ್ಕೂ ಕಂಣೀರಿಡುತ್ತ ಮನೆಗೆ ಬಂದಳು ಪಾಪ!

ರಾಮಂಣ ಸ್ವಭಾವದಿಂದ ಒರಟ ನಿಜ, ಆದರೆ ತನ್ನ ತಾಯಿಯ ಬಗ್ಗೆ ಅವನ ಪ್ರೇಮವೆಷ್ಟು ಅಪಾರ? ಸುಬ್ಬಮ್ಮ ಕೊಂಚ ಮುಖ ಚಿಕ್ಕದು ಮಾಡಿ ಕೊಂಡಾಯಿತು, ಅವನಿಗೆ ಅನ್ನವೂ ರುಚಿಸದು. ತಾಯಿ ಕಂಬನಿ ಸುರಿಸುತ್ತ ಮನೆಗೆ ಬಂದುದನ್ನು ಕಂಡು ಮರುಗಿದ. ಕರಗಿಹೋದ, ಅವಾಕ್ಕಾದ, ಕಂಗಾ ಲಾಗಿ ಕೇಳಿದ.

"ಯಾಕಮ್ಮಾ, ಏನಾಯ್ತು?"

"ಇನ್ನೇನು ಆಗಬೇಕು ರಾಮಂಣಾ? ಅಮೇರಿಕಾದ ಶೂದ್ರಮುಂಡೇವು ಬೂಟುಗಾಲಿನಿಂದ ದೇವರ ಮೇಲೆಲ್ಲಾ ತಿರುಗಾಡಿಬಿಟ್ಟರಂತೆ. ಇನ್ನೇನು ಉಳೀತಪ್ಪಾ? ಕಲಿಪ್ರವೇಶ ಆದಮೇಲೆ ಇನ್ನೇನು? ನಾನಿನ್ನು ಬದುಕಬಾರದು"

ಅದೆಷ್ಟು ನೊಂದಿದ್ದಳೋ ಆ ಬಡಪಾಯಿ ಮುದಕಮ್ಮ, ಪಾಪ! ಈ ದಡ್ಡತನಕ್ಕೆ, ಈ ಮೌಢ್ಯಕ್ಕೆ ರಾಮಂಣನ ಬಳಿ ಔಷಧಿ ಇದೆಯೇ? ಅವನಲ್ಲಿ ಬೇಡ. ಯಾವ ಧನ್ವಂತರಿಯ ಬಳಿ ಇದೆ? ಗೂಟಕ್ಕಿದ್ದ ಅಂಗಿಯನ್ನು ಕೈಗೆ ತೆಗೆದುಕೊಂಡ ರಾಮಂಣ, ಅದನ್ನು ಹಾಕಿಕೊಳ್ಳುತ್ತಲೇ ಹೊರಹೊರಟ. ತಾಯಿಯ ನೋವನ್ನು ನೋಡುತ್ತ ನಿಲ್ಲುವುದು ಮಾತ್ರ ಅವನಿಂದೆಂದೂ ಆಗದು. ಆ ಒಂದು ವಿಷಯದಲ್ಲಿ ಮಾತ್ರ ಅವನು ಕಾರುಣ್ಯನಿಧಿ. ಅವನ ತಾಯಿಯ ಪ್ರೇಮ ಅಗಾಧ!

ಸುಬ್ಬಮ್ಮನ ಪೂರ್ವ ವೃತ್ತಾಂತವನ್ನು ಇಲ್ಲಿ ಕೊಂಚದರಲ್ಲಿಯೇ ಹೇಳು ವುದು ಪ್ರಸ್ತುತ. ಆಸ್ತಿಕವಂಶದಲ್ಲಿ ಹುಟ್ಟಿದಳು, ಚಾತುರ್ವರ್ಣಗಳು ಸಾಕ್ಷಾತ್ ಪರಮಾತ್ಮನ ಸೃಷ್ಟಿ ಎಂಬುದನ್ನು ಸುಭದ್ರವಾಗಿ ನಂಬಿದ್ದಳು. ಕೈಹಿಡಿದ

ಗಂಡನು ಅದೆಂತಹ ಅಯೋಗ್ಯನೇ ಇರಲಿ, ಪತಿಯೇ ದೇವರು ಎಂದು ನಂಬಿ ಅವನ ಸೇವೆಗೈದಳು. ಎರಡು ಗಂಡು ಮಕ್ಕಳು ಹುಟ್ಟಿದವು—ಹಿರಿಯ ಕೃಷ್ಣ, ಕಿರಿಯ ರಾಮ. ಮಕ್ಕಳಿಗಿನ್ನೂ ಏಳು, ಐದು ವರ್ಷಗಳು ವಯಸ್ಸು. ಗಂಡ ಕಣ್ಮುಚ್ಚಿದ. ಪಾಲಿಗೆ ಬಂದದ್ದು ಪಂಚಾಮೃತ ಎಂದು ಭಾವಿಸಿ ವೈಧವ್ಯವನ್ನು ಕಾಯೇನ, ವಾಚಾ, ಮನಸಾ ಸ್ವೀಕರಿಸಿ ಸರ್ವಾಂಗ ವಿಧವೆ ಆಗಿ ಆಯುಷ್ಯ ದುದ್ದಕ್ಕೂ ಬಾಳಿದಳು.

ಸುಬ್ಬಮ್ಮನ ತಮ್ಮ ಮಹಾಬಲ ಒಬ್ಬ ಮಹಾ ಚಾಂಡಾಲ. ಅಕ್ಕನ ಗಂಡನ ಮರಣದ ನಂತರ ಆಕೆಗೆ ಬರಬೇಕಾಗಿದ್ದ ಹಣವನ್ನು ತಂದುಕೊಡು ವುದಾಗಿ ಹೇಳಿ ಆಕೆಯ ಹೆಬ್ಬೆರಳಿನ ಗುರುತುಗಳನ್ನು ಬೇಕುಬೇಕಾದ ಕಾಗದ ಗಳಲ್ಲಿ ಹಾಕಿಸಿಕೊಂಡು ಹೋದ.

ಅನಂತರ ಬಂದುದೆಲ್ಲವನ್ನೂ ತಾನೇ ಸ್ವಾಹಾಮಾಡಿ ಏನೂ ಬರಲಿಲ್ಲವೆಂದು ಹೇಳಿ ಮುಗ್ಧಳಾದ ಸುಬ್ಬಮ್ಮನಿಗೆ ಮೋಸಮಾಡಿದ. ಮುಂದು ಎಂದಾದ ರೊಂದು ದಿನ ತನ್ನ ಹಿರಿಯ ಮಗನಾದ ಕೃಷ—ಭಾರತದ ಕೃಷ್ಣನು ತನ್ನ ಸೋದರ ಮಾವನನ್ನು ಕೊಂದಂತೆ—ತನ್ನ ಸೋದರಮಾವನಾದ ಮಹಾಬಲ ನಿಗೂ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಯೇ ಮಾಡುತ್ತಾನೆಂದು ಕಾದು ಕುಳಿತಳು ಸುಬ್ಬಮ್ಮ. ಆದರೆ ಆಕೆ ಬಯಸಿದುದೇ ಒಂದು. ಆದುದೇ ಇನ್ನೊಂದು. ಪುರಾಣದ ಕಥೆಯಲ್ಲಿ ಆದಂತೆಯೇ ನಮ್ಮ ಜೀವನದಲ್ಲೂ ಆಗುತ್ತದೆಯೆ ?

ಆ ಸೋದರಮಾವ ಮಹಾಬಲ ಅವರಿವರನ್ನು ಬೋಳಿಸಿ ಚೆನ್ನಾಗಿ ಊರ ಗೂಳಿಯಂತೆ ತಿಂದು ದುಂಡಾದ. ಈ ಕೃಷ್ಣ ಹತ್ತು ವರ್ಷ ತುಂಬುವ ಒಳಗಾಗಿ ಸತ್ತೇಹೋದ ಯಾವುದೋ ಕಾಯಿಲೆಯಿಂದ. ಉಳಿದವನು ರಾಮಣ್ಣ ನೊಬ್ಬನೇ. ಅವನನ್ನು ಕಣ್ಣಲ್ಲಿಟ್ಟುಕೊಂಡು ಪೋಷಣೆಮಾಡಿತು ಆ ಬಡ ಅನಾಥ ಹೆಂಣು.

ಇದ್ದೊಬ್ಬ ಮಗ ವಿದ್ಯಾವಂತನಾಗಬೇಕು. ದೊಡ್ಡ ಚಾಕರಿ ಮಾಡ ಬೇಕು, ಬೊಗಸೆ ತುಂಬ ಸಂಬಳ ತಂದು ತನ್ನ ಕೈಯಲ್ಲಿ ಕೊಡಬೇಕು—ಇಂತಹ ಯಾವ ಲೌಕಿಕ ಆಶೆಯನ್ನೂ ಇಟ್ಟುಕೊಂಡವಳಲ್ಲ ಸುಬ್ಬಮ್ಮ. ತನ್ನ ಮಗ

ಆಸ್ತಿ ಮಾಡುವುದು ಬೇಕಿಲ್ಲ, ಆದರೆ ಆಸ್ತಿಕನಾಗಿ ಬಾಳಲಿ ಎಂಬುದೊಂದೇ ಆಕೆಯ ಮಹತ್ವಾಕಾಂಕ್ಷೆ. ಮುಖ್ಯವಾಗಿ ರಾಮಣ್ಣ ದೇವರಪೂಜೆ ಮಾಡಬೇಕು, ಆಕೆಯ ಕೈಯಲ್ಲಿ ತೀರ್ಥವನ್ನು ಹಾಕಬೇಕು. ಅದನ್ನು ಕುಡಿದು ತಾನು ಸಾಯ ಬೇಕು—ಇಷ್ಟೇ ಆ ಪುಣ್ಯಜೀವಿ ಬಯಸಿದುದು.

"ರಾಮಣ್ಣಾ ! ಮೂರು ಹೊತ್ತೂ ತ್ರಿಕಾಲ ಸಂಧ್ಯಾವಂದನೆ ಮಾಡು, ದೇವರಪೂಜೆ ಮಾಡು. ಉತ್ತಮ ಕುಲದಲ್ಲಿ ಹುಟ್ಟಿರುವಿ, ಹಿಂದಿನ ಜನ್ಮದ ಪುಣ್ಯದಿಂದ. ಮುಂದಿನ ಜನ್ಮಕ್ಕೆ ಸಾಧನೆ ಮಾಡಿಕೋ, ಪುರಾಣಕ್ಕೆ ಹೋಗೋಣ ಬಾ. ದೇವರಂಥಾ ಆಚಾರ್ರು !"

ಹೀಗೆಯೇ ನಿತ್ಯವೂ ಮಗನನ್ನು ಕಟಿಯುತ್ತಿದ್ದಳು. ರಾಮಣ್ಣ ಪುರಾಣಕ್ಕೆ ಹೋಗುತ್ತಾನೆಯೇ ? ರಾಮಣ್ಣನೂ ಹೋಗಿ ಪುರಾಣ ಕೇಳುತ್ತ ಕುಳಿತರೆ ಇಲ್ಲಿ ಇಸ್ಪೀಟು ಕ್ಲಬ್ಬಿನ ಗತಿ ? ರಾಮಣ್ಣನಿಗೆ ಚಿಕ್ಕಂದಿನಿಂದಲೂ ಸತ್ಸಹವಾಸ. ಹನ್ನೆರಡು ತುಂಬುವ ಹೊತ್ತಿಗೆ ಸಿಗರೇಟು ಎಳೆದ, ಹದಿನೈದಕ್ಕೆ ಈಸ್ಪೀಟು ಎಲೆ ಹಿಡಿದ. ಮೀಸೆ ಜೊತೆಯಲ್ಲಿ ಸೀಸೆಯೂ ಬಂದಿತು. ಆ ರಾತ್ರಿ ಮನೆಗೇ ಬರುತ್ತಿರಲಿಲ್ಲ. ಮಗ ಪೋಲಿ ಆದ, ಅಪಾಪೋಲಿಯೂ ಆದ, ಪೋಕರಿಯೂ ಆದ. ಸುಬ್ಬಮ್ಮನ ಮನಕ್ಕಾದ ಗಾಯ ಎಂತಹುದು, ಪಾಪ !

"ರಾಮಣ್ಣಾ !"

"ಏನಮ್ಮಾ ?"

ಎಂದೆಂದು ಮುಂದು ಬಂದು ಕುಳಿತ ಮಗ. ಸುಬ್ಬಮ್ಮ ಉಪದೇಶವನ್ನು ಆರಂಭಿಸಿದಳು. ಉಪದೇಶವನ್ನು ಆರಂಭಿಸುವುದು ಸುಲಭ. ಆದರೆ ಮುಗಿಸುವುದು ? ಇದು ಅನೇಕರಿಗೆ ಬಾರದ ಕಲೆ.

"ನಾನು ಹೇಳೋದು ಕಿವಿಕೊಟ್ಟು ಕೇಳು ರಾಮಣ್ಣಾ ! ಮನುಷ್ಯಜನ್ಮ ಸಿಗುವುದೇ ದುರ್ಲಭ. ಎಷ್ಟು ಜನ್ಮಗಳ ಪುಣ್ಯದಿಂದ ದೊರೆತಿದೆಯೋ, ಯಾರಿಗಪ್ಪಾ ಗೊತ್ತು ? ತತ್ರಾಪಿ ಬ್ರಾಹ್ಮಣ ಜನ್ಮ ! ಸಾಮಾನ್ಯ ಏನಪ್ಪಾ ? ದೇವರ ಮುಖದಿಂದ ಬ್ರಾಹ್ಮಣ ಹುಟ್ಟಿದ, ಭುಜದಿಂದ ಕ್ಷತ್ರಿಯ ಹುಟ್ಟಿದ, ತೊಡೆಯಿಂದ ವೈಶ್ಯ ಹುಟ್ಟಿದ, ಪಾದದಿಂದ ಶೂದ್ರ ಹುಟ್ಟಿದ ಅಂತ ಪುರಾಣದಲ್ಲೇ ಇದೆ. ಇಂತಹ ಪವಿತ್ರವಾದ ಬ್ರಾಹ್ಮಣ ಜನ್ಮವನ್ನು ಹಾಳುಮಾಡಿಕೊಂಡು

ಕುಂಭೀಪಾಕದಲ್ಲಿ ಬೀಳಬೇಡ ರಾಮಣ್ಣಾ ! ನಿತ್ಯವೂ ದೇವರಪೂಜೆ ಮಾಡು, ಸದ್ಬುದ್ಧಿಯನ್ನು ಕೊಡು ಎಂದು ಕೇಳಿಕೊ. ಕೇಳಿಕೊಂಡರೆ ದೇವರು ಕೊಟ್ಟೇ ಕೊಡುತ್ತಾನೆ. ರಾಮಾ, ಕೃಷ್ಣಾ ಅಂತ ಧ್ಯಾನ ಮಾಡು...."

ಸುಬ್ಬಮ್ಮನ ಪವಿತ್ರ ದೃಷ್ಟಿಯಲ್ಲಿ ದೇವರೆಂದರೆ ಇವರಿಬ್ಬರೇ—ರಾಮ ಮತ್ತು ಕೃಷ್ಣ. ಈಶ್ವರ, ಗೀಶ್ವರ ಅವರೆಲ್ಲ ಕಡಮೆಯ ದರ್ಜೆ ದೇವರುಗಳು. ದೇವರುಗಳ 'ಸೀನಿಯಾರಿಟಿ ಲಿಸ್ಟ್' ಆ ತಾಯಿಗೆ ಚಿಕ್ಕಂದಿನಲ್ಲಿಯೇ ಕಂಠಗತವಾಗಿತ್ತು.

'ಈ ಮುದುಕಿಗೊಂದು ಹುಚ್ಚು' ಎಂದು ಬಾಯಲ್ಲಿಯೇ ಅಂದುಕೊಂಡು ರಾಮಣ್ಣ ಕ್ಲಬ್ಬಾಭಿಮುಖವಾಗಿ ಹೊರಟ, ಬೆಳಗಿನ 'ಸೆಷನ್ಸ್' ಆರಂಭ ಮಾಡಲು.

ಒಂದು ದಿನ ಎದ್ದವನೇ ಚಿಕ್ಕೊಂದು ಪುಸ್ತಕವನ್ನು ಕೈಲಿ ಹಿಡಿದು ಏಕಲವ್ಯನಂತೆ ತದೇಕ ಚಿತ್ತನಾಗಿ ಓದುತ್ತಾ ಕುಳಿತಿದ್ದ ರಾಮಣ್ಣ. ಕುತೂಹಲದಿಂದ ಸುಬ್ಬಮ್ಮ ಕೇಳಿದರು, ಅದೇನು ಪುಸ್ತಕ ರಾಮಣ್ಣಾ ಎಂದು.

ರಾಮಣ್ಣ ಮಹಾ ಚತುರಮತಿ, ಕುಶಾಗ್ರಬುದ್ಧಿ. ಅವನಿಗೆ ಸುಳ್ಳನ್ನು ಕಲಿಸಿಕೊಡಬೇಕೇ ? ಅಲ್ಲದೆ ತಾಯಿಗೆ ಸಂತೋಷವನ್ನುಂಟುಮಾಡಲು ಸುಳ್ಳು ಹೇಳಬೇಕೆಂಬ ಅನುಕೂಲಸಿಂಧು ಅವನಿಗೆ ಗೊತ್ತು.

"ಇದು ಭಗವದ್ಗೀತೆ ಕಣಮ್ಮಾ"

ಸುಬ್ಬಮ್ಮನ ಆತ್ಮ ಆಕಾಶಕ್ಕೆ ಜಿಗಿಯಿತು ಮಗ ಅಷ್ಟು ಶ್ರದ್ಧೆ ಭಕ್ತಿಗಳಿಂದ ಅಧ್ಯಯನ ಮಾಡುತ್ತಿದ್ದುದು ರೇಸ್‌ಗೈಡ್ ಎಂಬುದು ಆ ಸನಾತನ ಕಾಲದ ಮುದುಕಿಗೇನು ಗೊತ್ತು ? ಕುದುರೆಯ ಬಾಲಕ್ಕೆ ಹಣ ಕಟ್ಟುವ ಕತ್ತೆ ಆಗಿದ್ದ ರಾಮಣ್ಣ.

ಆ ಸಂಜೆ ಅದೇಕೋ ಬೇಗ ಮನೆಗೆ ಬಂದ ರಾಮಣ್ಣ. ಮುಖ ಬಹು ಸಪ್ಪೆ ಆಗಿತ್ತು. ಅದನ್ನೆಲ್ಲ ಗಮನಿಸಲಿಲ್ಲ ಆ ತಾಯಿ. ಮಗ ಮನೆಗೆ ಬೇಗ ಬಂದ, ದೇವರು ಒಳ್ಳೆಯ ಬುದ್ಧಿಯನ್ನು ದಯಪಾಲಿಸಿದ. ಭಗವದ್ಗೀತೆಯ ಪರಿಣಾಮ ಇದು ಎಂದಾಕೆಯ ತಿಳುವಳಿಕೆ.

ರಾಮಣ್ಣ ಹಸಿದಿದ್ದ, ಚೆನ್ನಾಗಿ ಉಂಡ, ಬೇಗ ಮಲಗಿದ. ವಯಸ್ಸಾದ

ನಂತರ ಹಸಿವು ಕಡಮೆ, ನಿದ್ರೆ ಇನ್ನೂ ಕಡಮೆ. ಸುಬ್ಬಮ್ಮ ಹಾಸಿಗೆಯಲ್ಲಿ ಮಲಗಿದ್ದರು ಅಷ್ಟೆ, ನಿದ್ರೆ ಎಲ್ಲಿ ಪಾಪ!

ಮಗ ರಾತ್ರಿ ಏನೇನೋ ಬಡಬಡಿಸಿದ, ನಾಲ್ಕೈದು ಸಾರಿ ಅಂದುದನ್ನೆ ಅಂದ. ಸುಬ್ಬಮ್ಮ ಎಲ್ಲವನ್ನೂ ಕೇಳಿಸಿಕೊಂಡರು. ಅತೀವವಾಗಿ ಮನ ನೊಂದರು.

ಬೆಳಿಗ್ಗೆ ರಾಮಣ್ಣ ಎದ್ದಾಗ ಸುಬ್ಬಮ್ಮ ಅಳುತ್ತಿದ್ದರು. ಗಾಬರಿಯಿಂದ ಕೇಳಿದ ಏನಾಯಿತಮ್ಮಾ ಎಂದು.

"ಒಂದು ರಾಮ ಇಲ್ಲಾ, ಒಂದು ಕೃಷ್ಣ ಇಲ್ಲಾ. ಅದೇನಪ್ಪಾ ರಾತ್ರಿಯೆಲ್ಲಾ ಆ ಸುಡುಗಾಡು ಬಾಬಾ, ಬಾಬಾ ಎಂದು ಕನವರಿಸುತ್ತಿದ್ದಿ? ನಾನು ಹೆತ್ತದ್ದು ಇಬ್ಬರನ್ನು, ಒಬ್ಬನು ಸತ್ತ, ಇನ್ನೊಬ್ಬ ಬಾಬನ ಶಿಷ್ಯನಾದ. ಅಂತೂ ಹಡೆದೊಡಲು ಬಂಜೆಯಾಯ್ತು. ಆ ನಿನ್ನ ಸಾಯಿಬಾಬ ಯಾವ ದೇವರೋ ರಾಮಂಣಾ?"

ಎಂದು ಕೇಳಿ ಮುಖ ನೋಡಿದರು ತಾಯಿ. ಕೂಡಲೇ ರಾಮಂಣ ಸತ್ಯವನ್ನು ನುಡಿದ.

"ಛೆಛೆ! ಅದು ದೇವರ ಹೆಸರಲ್ಲಮ್ಮಾ, ನಿನ್ನೆ ಜಾಕ್‌ಪಾಟ್ ಕೊಟ್ಟ ಕುದುರೆಯ ಹೆಸರದು. ಅದನ್ನು ನಾನು ಕನವರಿಸಿರಬೇಕಷ್ಟೆ."

# ಕವಿಗೋಷ್ಠಿ

ತಿಂಮನಿಗೆ ಅದೇನೋ ಹುಚ್ಚು. ಹುಚ್ಚೇ ಸರಿ! ಹುಚ್ಚಲ್ಲದೆ ಮತ್ತೇನು?

ಒಂದು ಕವಿಗೋಷ್ಠಿಯನ್ನು ಏರ್ಪಡಿಸಬೇಕು. ಅದರ ಉದ್ಘಾಟನೆಯನ್ನು ಒಂದು—ಅಲ್ಲ, ಕ್ಷಮಿಸಬೇಕು—ಒಬ್ಬ ಮಂತ್ರಿಗಳ ಕೈಯಿಂದ—ಅಲ್ಲ, ಬಾಯಿಂದ ಮಾಡಿಸಬೇಕು. ಇದವನ ಹುಚ್ಚು, ನಿರ್ಧಾರ.

"ಕವಿಗೋಷ್ಠಿಗೂ ಮಂತ್ರಿಗಳಿಗೂ ಏನೋ ಸಂಬಂಧ?"

ಅದಾರೋ ಮುದಿ ಕವಿಗಳೊಬ್ಬರು ಅಡ್ಡ ಮಾತಾಡಿದರು. ತಿಂಮ ಹುಬ್ಬೇರಿಸಿದ.

"ಅದಕ್ಕೇ ಈ ಕವಿಗಳಿಗೆ ವ್ಯವಹಾರ ಜ್ಞಾನವಿಲ್ಲ ಅನ್ನೋದು"

ತಿಂಮ ಕೂಡಲೆ ಗದರಿಕೊಂಡ. ಹಾಗೆಯೇ ಮುಂದುವರಿಸಿದ.

"ರವಿಯಾಕಾಶಕೆ ಭೂಷಣಂ ಎಂದು ನಿಮ್ಮಲ್ಲಿಯೇ ಅದಾರೋ ಒಬ್ಬರು ಹೇಳಿಲ್ಲವೆ? ಇದೂ ಹಾಗೇ ಸಾಮೀ! ಕವಿಗೋಷ್ಠಿ ಎಂಬ ಆಕಾಶಕ್ಕೆ ಮಂತ್ರಿಯೇ ಭೂಷಣ. ಮಂತ್ರಿ ಇಲ್ಲದಿದ್ದರೆ ಸಭೆಗೆ ಯಾರು ಸ್ವಾಮೀ ಬರುತ್ತಾರೆ?"

ಎಂದು ಕೇಳಿ ಮುಖ ನೋಡುತ್ತ ನಿಂತ. ಕವಿಗಳಿಗೆ ಮಾತ್ರ ಕೋಪ

ವಿಲ್ಲವೇ ?  ಅದರಲ್ಲೂ ಮುದುಕರು.  ಅವರು ಮರು ಪ್ರಶ್ನೆಯಿಂದಲೇ ಉತ್ತರಿಸಿದರು.

"ಏನೋ ನೀನನ್ನುವುದು ? ಮಂತ್ರಿ ಬಾರದಿದ್ದರೆ ಕವಿಗೋಷ್ಠಿಗೆ ಜನವೇ ಬರುವುದಿಲ್ಲವೇ ?"

"ಜನ ಬರುತ್ತೆ ಸ್ವಾಮೀ !  ನೂರುಗಟ್ಟಲೆ ಒಳಕ್ಕೆ ಬರುತ್ತಾರೆ.  ಸಾವಿರ ಗಟ್ಟಲೆ ಹೊರಕ್ಕೆ ಹೋಗುತ್ತಾರೆ.  ಜನವೇನು ಬಿಡಿ, ಕೆಂಪೇಗೌಡ ಸರ್ಕಲ್ ಬಳಿ ಯಾವನಾದರೂ ಹಾವಾಡಿಸಿದರೂ ಬಂದು ನಿಲ್ಲುತ್ತೆ.  ನಮ್ಮ ಜನದ ಬಗ್ಗೆ ನನಗೇನೂ ಯೋಚನೆ ಇಲ್ಲ.  ಆದರೆ...."

"ಏನೋ ಆದರೆ, ಗೀದರೆ ?"

"ಮಂತ್ರಿ ಬಾರದಿದ್ದರೆ ನಿಮ್ಮ ಕವಿಗಳೇ ಬರುವದಿಲ್ಲವಲ್ಲ ಸ್ವಾಮೀ ? ಮಂತ್ರಿಗಳು ನನಗೂ ಬೇಕಿಲ್ಲ.  ಸಾಮಾನ್ಯ ಜನಕ್ಕಂತೂ ಮೊದಲೇ ಬೇಕಿಲ್ಲ...."

"ಹಾಗಾದರೆ ನಮಗೂ ಬೇಕಿಲ್ಲ.  ಕವಿಗಳಿಗೆ ಮಾತ್ರ ಮಂತ್ರಿ ಏಕಯ್ಯಾ ಬೇಕು ?"

"ನನಗೆ ಗೊತ್ತು ಸ್ವಾಮೀ, ಅವರು ನಿಮಗೂ ಬೇಕಿಲ್ಲ ಎಂಬುದು. ಆದರೆ ಕವಿಗೋಷ್ಠಿ ಆಯಿತು ಎಂಬ ವಿಷಯ ನಮ್ಮ ಪತ್ರಿಕೆಗಳಲ್ಲಾದರೂ ಬರಬೇಕೋ ಬೇಡವೋ ?"

"ಪತ್ರಿಕೆಯಲ್ಲಿ ಬರಬೇಕು.  ಮೊದಲ ಪುಟದಲ್ಲೇ ಬರಬೇಕು, ಫೋಟೋ ಸಹಿತ "

"ಬಿಡಿ ಮತ್ತೆ.  ಅದರರ್ಥ ಮಂತ್ರಿಗಳು ಬರಬೇಕೆಂದೇ ಆಯಿತು. ಮೊದಲ ಪುಟದಲ್ಲಿ ಫೋಟೋ ಬರಬೇಕಾದರೆ ಮಂತ್ರಿಯ ಭಾಷಣ ಇರಬೇಕು, ಇಲ್ಲವೆ ಯಾರಾದರೂ ಸಿಟಿ ಬಸ್ ಅಡಿಯಲ್ಲಿ ಬಿದ್ದು ಸಾಯಬೇಕು.  ಈ ಎರಡರಲ್ಲಿ ಒಂದಾದರೂ ಅನಾಹುತ ಆಗಲೇಬೇಕು."

"ಯಾರೂ ಸಾಯುವುದು ಬೇಡ ಪುಣ್ಯಾತ್ಮಾ ! ಮಂತ್ರಿಗಳೇ ಬರಲಿ"

ಎಂದರು ವೃದ್ಧ ಕವಿವರ್ಯರು.  ತಿಂಮ "ಹಾಗೆ ಬನ್ನಿ" ಎಂದಂದು ಮಾತು ಮುಂದುವರಿಸಿದ.

"ಮಂತ್ರಿಗಳು ಬಂದರೆ ಇನ್ನೊಂದೂ ಉಪಯೋಗವಿದೆ ಸ್ವಾಮೀ ! ಏನು ಎಂದು ಕೇಳಿ"

"ಏನಪ್ಪಾ ಅದು ?"

"ಯಾರು ಬರಲಿ ಬಿಡಲಿ, ನಾಲ್ಕು ಜನ ಪೋಲೀಸರಂತೂ ಬಂದೇ ಬರುತ್ತಾರೆ, ಹೌದೇ ? ಹೌದು ಅನ್ನಿ"

"ಹೌದು. ಮುಂದು ಹೇಳಯ್ಯಾ"

"ಅದೇ ಪೋಲೀಸರಿಗೆ ಹೇಳಿದರೆ ಸಾಕು, ಹಳೆ ತರಗುಪೇಟೆಯಲ್ಲಿ ಓಡಾಡುವ ಹಮಾಲರನ್ನೆಲ್ಲಾ ಹಿಡಿದು ತಂದು ಕೂಡಿಸುತ್ತಾರೆ.

"ನಿನ್ನಿಷ್ಟ ಮಹರಾಯಾ ! ಏನಾದರೂ ಮಾಡಿಕೋ"

ಎಂದಂದು ವೃದ್ಧ ಕವಿಗಳು ಮುಸಿಮುಸಿ ನಕ್ಕು ಸುಮ್ಮನಾದರು.

ಮಂತ್ರಿಗಳೊಬ್ಬರನ್ನು ಕರೆಯಬೇಕೆಂದಂತೂ ನಿರ್ಧರಿಸಿ ಆಯಿತು. ಆದರೆ ಯಾವ ಮಂತ್ರಿಯನ್ನು ಕರೆಯಬೇಕೆಂಬುದೇ ದೊಡ್ಡ ಜಿಜ್ಞಾಸೆಯಾಯಿತು ತಿಂಮನಿಗೆ. ತಲೆ ಕೆರೆಯಲಾರಂಭಿಸಿದ.

"ಯಾರೋ ಒಬ್ಬ ಮಂತ್ರಿಗಳನ್ನು ಕರೆಯೋ ! ಬಿಟ್ಟಿಯಾಗಿ ಪೋಲೀಸರು ಬಂದರಾಯಿತು ನಿನಗೆ. ಯಾವ ಮಂತ್ರಿ ಆದರೆ ನಿನಗೇನು ?"

"ಹಾಗಿಲ್ಲಾ ವಿಷಯ ಯಜಮಾನರೇ ! ನಿಮ್ಮ ಕಾಲದಲ್ಲೆಲ್ಲ ಒಂದು ಸಲ ಮಂತ್ರಿ ಆದರಾಯಿತು. ಐದು ವರ್ಷಗಳು ಅವರಲ್ಲಿ ಭದ್ರವಾಗಿರುತ್ತಿದ್ದರು. ಈಗಿನ ಸಮಾಚಾರವೇ ಬೇರೆ. ಮೊನ್ನಿನ ಪ್ರಸಂಗ ಹೇಗಾಯಿತು, ನೋಡಿ. ಇಂದು ರಾತ್ರಿಯವರೆಗೂ ಮಾನ್ಯ ಮಂತ್ರಿಗಳಾಗಿದ್ದವರು, ಬೆಳಗ್ಗೆ ಮಂತ್ರಿಯೂ ಅಲ್ಲ, ಮಾನ್ಯರೂ ಅಲ್ಲ...."

"ಆ ಇವರ ವಿಷಯ ತಾನೇ ನೀವು ಹೇಳಿದ್ದು ? ಅ....ನಿಮ್ಮ...."

"ನಮ್ಮ ?"

ತಿಂಮ ಇದ್ದಕ್ಕಿದ್ದಂತೆಯೇ ಕಣ್ಣಿಂದ ಕಿಡಿ ಹಾರಿಸಿದ.

"ಸ್ವಾಮೀ, ಏನು ತಾವನ್ನೋದು ? ಆ ಮಾಜಿ ಸಚಿವರು ನನಗೇನು ಸಂಬಂಧ ? ನಿಮ್ಮ ನಿಮ್ಮ ಅಂತ ಅಂತೀರಿ ?"

"ಹೋಗಲಿ ಬಿಡೋ, ಏನೋ ಬಾಯಿ ಜಾರಿ ಬಂದಿತು, ಅಂದೆ. ಅದಿರಲೀ ಅಂತಹರಲ್ಲದವರೊಬ್ಬರನ್ನು ಕರೆ, ಸಾಕು "

"ಏನು ಸ್ವಾಮೀ ಹಾಗಂದರೆ ? ಅಂತಹರು, ಅಂತಹರಲ್ಲದವರು ಎಂದು ದೇವರು ಪ್ರತ್ಯೇಕವಾಗಿ ನಿರ್ಮಿಸಿರುತ್ತಾನೆಯೇ ? ಅಂತಹರಾಗುವವರೆಗೂ ಎಲ್ಲರೂ—ನಾನು, ನೀವು ಕೂಡಾ ಅಂತಹರಲ್ಲದವರೇ ಎಂದು ಜಗತ್ತು ನಂಬಿರುತ್ತದೆ. ನಾಳೆ ನೀವೇ ಒಂದು ವೇಳೆ...."

"ಯಾರು, ನಾನೇ ?"

ವೃದ್ಧ ಕವಿಗಳು ಬಾಯಲ್ಲಿದ್ದ ಕೃತಕ ದಂತಗಳನ್ನೊಮ್ಮೆ ಅತ್ತಿಂದ ಇತ್ತ ಸರಿಸಿ ದುರುಗುಟ್ಟಿ ನೋಡಿದರು.

"ಕೋಪಿಸಿಕೊಳ್ಳಬೇಡಿ ಸ್ವಾಮೀ! ನೀವು ಅಂದರೆ ನೀವೇ ಎಂದರ್ಥವೇ ?"

ಒಂದರೆಗಳಿಗೆಯೂ ನಿಲ್ಲಲಿಲ್ಲ ಆ ವಯೋವೃದ್ಧ ಕವಿವರ್ಯರು. ದುಡು ದುಡು ನಡದೇಬಿಟ್ಟರು.

ತಿಂಮ ಕಾರ್ಯೋನ್ಮುಖನಾದ. ಮರುದಿನವೇ ಎಲ್ಲ ಪತ್ರಿಕೆಗಳಲ್ಲೂ ಪ್ರಕಟನೆ ಬಂದೇಹೋಯಿತು. "ನಭೂತೋ ನಭವಿಷ್ಯತಿ ಎಂಬಂತಹ ಕವಿಗೋಷ್ಠಿ—ಇನ್ನು ಎರಡೇ ತಿಂಗಳಲ್ಲಿ. ಉದ್ಘಾಟನೆ—ಅಂದು ಯಾರು ಇನ್ನೂ ಮಂತ್ರಿಗಳಾಗಿ ಉಳಿದಿರುತ್ತಾರೋ ಅವರ ಅಮೃತಹಸ್ತದಿಂದ."

ಕವಿಗೋಷ್ಠಿಯ ದಿನ ಬಂದೇ ಬಿಟ್ಟಿತು. ಭಾನುವಾರ ಬೆಳಗ್ಗೆ ಹತ್ತು ಘಂಟೆಗೆ. ಕವಿವರ್ಯರು ಒಬ್ಬೊಬ್ಬರೇ ಒಂಭತ್ತು ಗಂಟೆಯಿಂದಲೇ ಬರಲಾರಂಭಿಸಿದರು. ಗೇಟಿನಲ್ಲಿ ನಿಂತಿದ್ದ ತಿಂಮ ಎಲ್ಲರನ್ನೂ ಸ್ವಾಗತಿಸಿ ಒಳಕ್ಕೆ ಕಳಿಸಿದ. ಹಿರಿಕವಿಗಳು, ಕಿರಿಕವಿಗಳು, ಸಂಪ್ರದಾಯದ ಕವಿಗಳು, ಹೊಸ ಸಂಪ್ರದಾಯದ ಅಂದರೆ ಯಾವ ಸಂಪ್ರದಾಯವೂ ಇಲ್ಲದ ಕವಿಗಳು, ನಾಮದ ಕವಿಗಳು, ಜರೀಪೇಟಾ ಕವಿಗಳು, ಗಾಂಧಿಟೋಪಿ ಕವಿಗಳು, ಬೋಳುತಲೆ ಕವಿಗಳು, ಕ್ರಾಪಿನ ಕವಿಗಳು, ಉದ್ದುದ್ದ ಕೂದಲಿನ ರೋಮಪ್ರಿಯ ಕವಿಗಳು, ಗಡ್ಡದ ಕವಿಗಳು (ಪುರುಷರು ಮಾತ್ರ) ಮಹಾಕವಿಗಳು, ಯಾವನು ಮಹಾಕವಿ ಎಂದೆಂಬ ಕವಿಗಳು, ಬೀಜಗಣಿತ ಶಾಸ್ತ್ರವನ್ನು ಭಾಮಿನಿ ಷಟ್ಪದಿಯಲ್ಲಿ ಯಾರಿಗೂ

ತಿಳಿಯದಂತೆ ಬರೆದ ಹೇಮಾಹೇಮಿ ಕವಿಗಳು, ಕುಕವಿಗಳು, ಭಾವೀ ಕವಿಗಳು ಎಲ್ಲರೂ ಸೇರಿದರು. ಗಂಟೆ ಹತ್ತಾಯಿತು. ಹನ್ನೊಂದೂ ಆಯಿತು. ಮಂತ್ರಿಗಳ ಕಾರಿನ ಮುಖದರ್ಶನವೇ ಇಲ್ಲ.

"ಏನೋ ತಿಂಮಾ ! ಇನ್ನೂ ಬರಲಿಲ್ಲವಲ್ಲೋ ಮಂತ್ರಿಗಳು ?"

ಎಂದೊಬ್ಬಿಬ್ಬರು ಕೇಳಿದರು.

"ಈಗತಾನೇ ಫೋನು ಮಾಡಿದರು ಅವರ ಪಿ.ಎ. ಮಂತ್ರಿಗಳು ಕ್ಯಾಬಿನೆಟ್ ಮೀಟಿಂಗ್‌ನಲ್ಲಿದ್ದಾರಂತೆ. ಅದು ಮುಗಿದ ಕೂಡಲೆ ಬರುತ್ತಾರೆ."

"ಅದಾಯಿತಪ್ಪಾ, ಯಾವಾಗಲಾದರೂ ಬರಲಿ. ಯಾವ ಮಂತ್ರಿಗಳು ಬರುತ್ತಾರಯ್ಯಾ."

"ಅದೇ ಸ್ವಾಮೀ, ಇನ್ನೂ ನಿರ್ಧಾರವಾಗಿಲ್ಲ. ಕೆಲ ಮಂತ್ರಿಗಳನ್ನು ವಜಾಮಾಡಿ, ಕೆಲವು ಹೊಸಬರನ್ನು ಸೇರಿಸಿಕೊಂಡು, ಅನಂತರ ಅವರಲ್ಲಿ ಖಾತೆಗಳನ್ನು ಮರುವಿಂಗಡನೆ ಮಾಡುವ ಯೋಚನೆಯಲ್ಲಿದ್ದಾರಂತೆ. ತಾವು ಒಳಗಡೆ ಕುಳಿತುಕೊಳ್ಳಿ, ಉಪಹಾರ ಸೇವನೆ ಶುರುವಾಗಲಿ. ಮಂತ್ರಿಗಳ ಭಾಷಣವನ್ನು ನಾನು ಒಂದು ವಾರದ ಹಿಂದೆಯೇ ಬರೆದು ಪಿ.ಎ. ಸಾಹೇಬರಿಗೆ ಕೊಟ್ಟಿದ್ದೇನೆ. ಯಾರೋ ಒಬ್ಬ ಮಂತ್ರಿಗಳು ಬಂದು ಅದನ್ನು ಓದುತ್ತಾರೆ. ತಾವು ಉಪಹಾರ ಪ್ರಾರಂಭಿಸಿ."

ಒಂದು ಸಿರಿಭಾತ್, ಒಂದು ಖಾರಾಭಾತ್, ಒಂದು ಕಾಫಿ ಒಂದು ಬಾಳೆಹಣ್ಣು ಪ್ರತಿಯೊಬ್ಬರ ಮುಂದೂ ಬಂದುಬಿಟ್ಟಿತು. ಉಪಹಾರ ಕಾರ್ಯಕ್ರಮ ಪ್ರಾರಂಭವಾಯಿತು, ಮಂತ್ರಿ ಮಹಾಶಯರ ಸಹಾಯವಿಲ್ಲದೆ.

ಕೊಂಚ ತಡವಾಗಿ ಬಂದರು ಒಬ್ಬ ಕೂದಲ ಕವಿಗಳು.

"ಯಾಕೆ ಸ್ವಾಮೀ, ಇಷ್ಟು ವಿಳಂಬ ?"

ಎಂದೊಬ್ಬ ಕಿರಿಕವಿಗಳು ಕೇಳಿದರು.

"ಪೋಲೀಸ್ ಸ್ಟೇಷನ್‌ಗೆ ಹೋಗಿದ್ದೆನಯ್ಯಾ"

ಎಂದನ್ನುತ್ತ ಕೈಲಿದ್ದ ಡಬ್ಬಾವನ್ನು ಎತ್ತಿ ತೋರಿಸಿದರು.

"ಪೋಲೀಸ್ ಸ್ಟೇಷನ್‌ಗೆ! ಅಂತಹ ತಪ್ಪನ್ನೇಕೆ ಮಾಡಿದಿರಿ ಮಹಾಸ್ವಾಮೀ ?"

"ಸೀಮೆಎಣ್ಣೆ ಬೇಡವೆ ? ಪೋಲೀಸ್ ಸ್ಟೇಷನ್ ಬಳಿ ಕ್ಯೂ ನಿಂತಿದ್ದೆ. ಸೀತೆಯ ಬಾಲದಷ್ಟುದ್ದ ಇದೆ ಆ ಕ್ಯೂ."

"ಸೀತೆಯ ಬಾಲ ?" ಎಂದಂದು ಬೆಚ್ಚಿಬಿದ್ದರು ವೃದ್ಧ ಕವಿಗಳೊಬ್ಬರು.

"ಅವರು ಹಾಗೆಯೇ ! ನವ್ಯಕಾವ್ಯದ ಜನ."

"ಏನು ಕಾಲ ಬಂತಯ್ಯಾ ? ನಮ್ಮ ಕಾಲದಲ್ಲೆಲ್ಲ ಸೀಮೆಎಣ್ಣೆಯನ್ನು ಕೇಳುವವರಿದ್ದಿಲ್ಲ. ಮನೆಮನೆಗೆ ಬಂದು ಹಾಕಿ ಹೋಗುತ್ತಿದ್ದರು. ಎರಡಾಣೆಗೆ ಒಂದು ಸೀಸೆ. ಈಗ ನೋಡಿ ಒಂದು ಲೀಟರ್‌ಗೆ ಅರವತ್ತೊಮ್ರು ಪೈಸೆ !"

"ಅದು ವಾಸಿ ಸ್ವಾಮೀ ! ಬ್ಲಾಕ್ ಮಾರ್ಕೆಟ್‌ನಲ್ಲಿ ಅದೇ ಒಂದು ಲೀಟರ್‌ಗೆ ಒಂದು ರೂಪಾಯಿ."

"ಸೀಮೆಎಣ್ಣೆ ಬಿಡಿ. ಎಲೆಕ್ಟ್ರಿಕ್ ದೀಪ ಇದೆ. ಹೇಗೋ ಮಾಡ ಬಹುದು. ಕಡಲೆಕಾಯಿ ಎಣ್ಣೆ ? ಜನತಾ ಮಾರ್ಕೆಟ್ಟಿನಲ್ಲೇ ಏಳೂವರೆ ರೂಪಾಯಿಗೆ ಒಂದು ಕೆ.ಜಿ."

"ನಾರಾಯಣ ! ನಾರಾಯಣ ! ನಾವು ಹುಡುಗರಿದ್ದಾಗ ಒಂದು ವೀಸೆಗೆ ನಾಲ್ಕಾಣೆ ಇತ್ತು."

"ಅಕ್ಕಿ ! ಅಕ್ಕಿ ಹೇಗಿದೆ ಗೊತ್ತೇ ಆಚಾರ್ಯರೇ ? ಎರಡೂ ಇಪ್ಪತ್ತೈದು ಕೊಟ್ಟರೆ ಒಂದು ಕೆ. ಜಿ. ಹಾಕ್ತಾನೆ ಆ ಸೆಟ್ಟಿ. ನಾನೇ ಒಂದು ಕಾಲದಲ್ಲಿ ಒಂದು ರೂಪಾಯಿಗೆ ಹತ್ತು ಸೇರು ತಂದಿದ್ದೆ."

"ಆ ಒಂದು ಕಾಲದ ಮಾತು ಈಗ ಆಡಬೇಡಿ. ನನಗೂ ನೆನಪಿದೆ. ಎರಡಾಣೆಗೆ ಸೇರು ತೊಗರಿಬೇಳೆ ತರುತಿದ್ದೆವು ನಾವು ಹುಡುಗರಾಗಿದ್ದಾಗ. ಈಗ ಅದೇ ಬೇಳೆಗೆ ಕೆ.ಜೀ.ಗೆ ಎರಡೂ ತೊಂಭತ್ತು."

"ಆಚಾರ್ಯರಿಗೆ ಬೇಳೆಯದೇ ಯೋಚನೆ. ಮಕ್ಕಳಿಗೆ ಕಾಯಿಲೆ ಆಗಿದೆ, ಹಣ್ಣು ಕೊಡಿ ಅನ್ನುತ್ತಾರೆ ಡಾಕ್ಟರು. ಯಾವ ಹಣ್ಣು ತರಲಿ ? ಅಗ್ಗವಾಗಿದೆ, ಹುಣಸೇಹಣ್ಣೇ ಕೊಡೋಣ ಅಂತ ಅಂಗಡಿಗೆ ಹೋದೆ. ಅದೂ ಐದು ರೂಪಾ ಯಿಗೆ ಕೆ.ಜಿ."

"ಕೇ.ಜಿ ಐದು ರೂಪಾಯಿ ? ನಾಲ್ಕಾಣೆಗೆ ವೀಸೆ ಇತ್ತು ಆಗೆಲ್ಲ."

"ಹಾಗಂದರೇನು ಸ್ವಾಮೀ ? ನಿಮ್ಮ ಕಾಲದಲ್ಲಿ ಗೋಧಿ ಒಂದು ರೂಪಾ

ಯಿಗೆ ಎಂಟು ಸೇರು ಇದ್ದಿಲ್ಲವೆ? ಈಗ ಅದೇ ಗೋಧಿ ಎರಡೂ ಅರವತ್ತಕ್ಕೆ ಒಂದು ಕೆ.ಜಿ."

"ಮೆಣಸಿನಕಾಯಿಗೆ ಏನು ರೋಗ ಬಂತಯ್ಯಾ? ಒಂದು ಕೇಜೀಗೆ ಆರೂವರೆ ರೂಪಾಯಿ! ವೀಸೆಗೆ ನಾಲ್ಕಾಣೆಯಂತೆ ಮನೆಮನೆಗೆ ತಂದುಕೊಡುತ್ತಿದ್ದರು. ಅದಿರಲಿ, ಕೊತ್ತಂಬರಿಬೀಜ ಒಂದು ಕೇಜೀಗೆ ಮೂರು ರೂಪಾಯಿ! ಮಲಕಾಜಪ್ಪ ಮನೆಮನೆಗೆ ಬಂದು ರೂಪಾಯಿಗೆ ಎಂಟು ಸೇರು ಸಾಲ ಹಾಕಿ ಹೋಗುತ್ತಿದ್ದ."

"ಕಾಲ ಕೆಟ್ಟುಹೋಯಿತಪ್ಪಾ! ಸಕ್ಕರೆ ಏನಾಗಿದೆ ಈಗ? ನನ್ನ ಪುಣ್ಯ ಸಧ್ಯ, ದೇವರು ದೊಡ್ಡವನು. ಡಯಾಬಿಟೀಸ್ ಆಯಿತು. ಸಕ್ಕರೆ ಕೊಳ್ಳುವುದು ತಪ್ಪಿತು. ನಾಲ್ಕಾಣೆಗೆ ವೀಸೆ ಕೊಡುತ್ತಿದ್ದರು ಆಗೆಲ್ಲ. ಈಗ? ಎರಡೂ ಹದಿನೈದು ಪೈಸೆಗೆ ಒಂದು ಕೆ.ಜಿ. ಬ್ಲ್ಯಾಕ್‌ಮಾರ್ಕೆಟ್‌ನಲ್ಲಿ ಮೂರು ಅರವತ್ತಂತೆ."

"ವಡೆ ಇಲ್ಲದೆ ಹಿರಿಯರ ತಿಥಿ ಹೇಗೆ ಸ್ವಾಮೀ ಮಾಡೋದು? ಉದ್ದು ಬೇಡವೆ? ರೂಪಾಯಿಗೆ ಎಂಟು ಸೇರು ತರತಾ ಇದ್ದಿವಿ. ಈಗ ಅದೂ ಮೂರು ರೂಪಾಯಿಗೆ ಕೇ.ಜಿ."

"ಬಡವರು ಬದುಕಿದಂತೆಯೇ ಇದೆ. ಉಪ್ಪಿಗೂ ಬರವೇ? ನಿಮ್ಮ ಕಾಲದಲ್ಲಿ ಉಪ್ಪು ಹೇಗಿತ್ತು ಸಾರ್?"

"ರೂಪಾಯಿಗೆ ಹದಿನಾರು ಸೇರಿನಂತೆ ನಾನೇ ತಂದಿದ್ದೆ. ಈಗ ನೋಡಿ, ರೂಪಾಯಿಗೆ ಐದು ಕೇ.ಜಿ."

"ನೀವು ಸಾವಿರ ಹೇಳಿ, ನಮಗೇನೋ ಒಳ್ಳೇದೇ ಆಗಿದೆ"

ಎಂದೊಬ್ಬ ಮೀಸೆ ಕವಿ ನಗಲಾರಂಭಿಸಿದರು. ಎಲ್ಲರೂ ಅವರ ಮುಖ ನೋಡಿದರು ಕಕ್ಕಾಬಿಕ್ಕಿಯಾಗಿ.

"ಏನಪ್ಪಾ, ನಿನಗೆ ಒಳ್ಳೆಯದಾಗಿರೋದು?"

ವೃದ್ಧ ಮಡಿಅಯ್ಯಂಗಾರರು ಮುಖ ನೋಡುತ್ತ ಕೇಳಿದರು.

"ಮೊನ್ನೆ ಮೊನ್ನಿನವರೆಗೂ ಒಂದೂ ಇಪ್ಪತ್ತು ಇತ್ತು. ಈಗ ನೋಡಿ ಎಂಭತ್ತೇ ಪೈಸೆ."



ಇದೇನು ಕವಿಗೋಷ್ಠಿಯೇ ?

"ಯಾವುದಯ್ಯಾ ಅದು ? ಅದನ್ನೇ ಹೇಳಲಿಲ್ಲವಲ್ಲಾ ?"

"ನಮ್ಮ ಸಂಜೆ ಕಾಫಿ ಸ್ವಾಮೀ ! ಕಲಾಸಿಪಾಳ್ಯದ್ದು."

ನಾರಾಯಣ, ನಾರಾಯಣ ಎಂದರು ಕೆಲರು, ಆಂಡವನೇ ಅನ್ನುತ್ತ ಮೂಗು ಮುಚ್ಚಿಕೊಂಡರು ಒಬ್ಬಿಬ್ಬರು.

ತಿಂಮ ಬಂದು ಹೇಳಿದ—ಮಂತ್ರಿಗಳು ಇಂದು ಬರುವುದಿಲ್ಲ ಎಂದು. ಕವಿವರ್ಯರು ಒಬ್ಬೊಬ್ಬರಾಗಿ ಮನೆಗಳಿಗೆ ನಡೆದರು.

ಮರುದಿನ ತಿಂಮ ಮಂತ್ರಿಮಾನ್ಯರನ್ನು—ಮೀನುಗಾರಿಕೆ ಖಾತೆ—ಕರೆದು ತಂದ.

"ಯಾರೂ ಇಲ್ಲವಲ್ಲೋ ತಿಂಮಾ ?"

"ಅವರ ಚರ್ಚೆಯೆಲ್ಲಾ ನಿನ್ನೆಯೇ ಮುಗಿದಿದೆ ಸ್ವಾಮೀ ! ತಾವು ಕೇಳಬೇಕೇನು ?"

ಎಂದಂದು ಕೂಡಲೆ ಟೇಪ್ ರೆಕಾರ್ಡ್ ಹಾಕಿದ.

"ಯಾಕೆ ಸ್ವಾಮೀ ! ಇಷ್ಟು ವಿಳಂಬ" ಎಂದು ಆರಂಭಿಸಿತು. "ಕಳಾಸಿಪಾಳ್ಯದ್ದು" ಅಂದಾಗ ಮುಗಿಯಿತು.

"ಇದೇನು ಕವಿಗೋಷ್ಠಿಯೇ ?"

ಎಂದಂದು ಮೂಗೇರಿಸಿದರು ಮಂತ್ರಿಗಳು.

"ಕವಿಗಳೂ ಮನುಷ್ಯರು ಸ್ವಾಮೀ !"

ಎಂದಂದು ತಿಂಮ ಮಂತ್ರಿಗಳ ಮುಖ ನೋಡಿ ಮುಸಿಮುಸಿ ನಕ್ಕ.

# ಸಂತಾನ ಪ್ರಾಪ್ತಿ ದೇವರಿಂದ?

ನ ಪುತ್ರಸ್ಯ ಗತಿರ್ನಾಸ್ತಿ—ಇದು ಹಿಂದಿನ ದೊಡ್ಡವರು ಹೇಳಿರುವ ಮಾತು ಎಂದು ಮುಂದಿನ ದೊಡ್ಡವರೂ ಹೇಳುತ್ತಾರೆ, ಎಲ್ಲಾ ಕಾಲದ ಚಿಕ್ಕವರೂ ನಂಬುತ್ತಾರೆ.

ಮಕ್ಕಳಿಲ್ಲದವಳನ್ನು ಸಮಾಜ ಬಂಜೆ ಎಂದು ಜರಿಯುತ್ತದೆ. ಮದುವೆಯಾಗಿ ಗಂಡನೊಡನೆ ವರ್ಷಗಟ್ಟಲೆ ಬಾಳುವೆ ಮಾಡಿದರೂ ಮಕ್ಕಳಾಗದಿದ್ದರೆ ಅದು ಅವಳ ತಪ್ಪೆ? ತಪ್ಪೋ, ಒಪ್ಪೋ ಆ ಪ್ರಶ್ನೆ ಸಮಾಜಕ್ಕೆ ಸಂಬಂಧವಿಲ್ಲ. ಬಂಜೆ ಬಂಜೆಯೇ! ಸಾಮಾನ್ಯ ಜನದ–ಅಂದರೆ ಅಸಾಮಾನ್ಯ ದಡ್ಡ ಜನದ–ದೃಷ್ಟಿಯಲ್ಲಿ ಆ ಹೆಂಣು ಒಂದು ಕೀಳು ಪ್ರಾಣಿ. ಪ್ರಕೃತಿದತ್ತವಾಗಿ ಬಂದ ಆ ದೋಷ ಗಂಡನಲ್ಲಿರಬಹುದು, ಹೆಂಡತಿಯಲ್ಲಿರಬಹುದು. ಆದರೂ ಆ ಹೆಂಣಂತೂ ಬಂಜೆ. ಅವಳ ಕೈಗೆ ಇತರ ತಾಯಂದಿರು ತಮ್ಮ ಮಕ್ಕಳನ್ನು ಕೊಡುವುದಿಲ್ಲ ವಷ್ಟೇ ಅಲ್ಲ, ಮಗುವನ್ನು ಅವರಿಗೆ ತೋರಿಸುವುದೂ ಇಲ್ಲ. ಬಂಜೆ ಹೆಂಣಿನ ದೃಷ್ಟಿ ತಾಗಿದರೆ ಮಗುವಿಗೆ ಕೆಡುಕಲ್ಲವೇ? ಅಂತೂ ಪ್ರತಿಯೊಂದು ಕತ್ತೆಯೂ ಒಂದಾದರೂ ಕತ್ತೆ ಮಱಿಯನ್ನು ಹಾಕಿಯೇ ಸಾಯಬೇಕು. ಇಲ್ಲದಿದ್ದಲ್ಲಿ ಆ ಕತ್ತೆಗೆ ಇಹದಲ್ಲಿ ಗೌರವವಿಲ್ಲ, ಸತ್ತ ನಂತರ ಸ್ವರ್ಗವಿಲ್ಲ. ಇದು ಸೇಕಡಾ ನೂರೊಂದು ಕತ್ತೆಗಳ ಭದ್ರವಾದ ನಂಬಿಕೆ. ಹೀಗಾಗಿ ಹುಚ್ಚರಿಗೂ ಮದುವೆ, ತಾವು ಜಾಣರೆಂದು ತಿಳಿದ ಹುಚ್ಚರಿಗೂ ಮದುವೆ. ಅನುವಂಶಿಕ ಕಾಯಿಲೆ

ಇರುವವರಿಗೂ ಮದುವೆ, ಗುಣವಾಗದಂತಹ ರೋಗಗ್ರಸ್ತರಿಗೂ ಮದುವೆ. ಸರಿಯಾಗಿ ಗಂಡಲ್ಲದವನಿಗೂ ಮದುವೆ, ಹೆಂಣಿಗಂತೂ ಸರೀ ಸರೀ–ಅದು ಹುಚ್ಚಿ ಇರಲಿ, ಧರ್ಮಸೆರೆ ಬಿಡಿಸಲು ಒಂದು ಮದುವೆ ಬೇಕೇಬೇಕು, ಈ ಕರ್ಮ ಅನಿವಾರ್ಯ.

ರತ್ನಮ್ಮನ ಮದುವೆಯಾಗಿ ಐದು ವರ್ಷಗಳು ಸಂದುವು. ಆದರೂ ಮಕ್ಕಳಿಲ್ಲ. ಈ ಕಾರಣದಿಂದಾಗಿ ಗಂಡನಾದ ಶಾಮಂಣ ಅವಳನ್ನೆಂದೂ ಕಡೆಗಾಣಿಸಲಿಲ್ಲ, ನಡೆ ನುಡಿಗಳಲ್ಲಂತೂ ಎಂದೂ ಆ ಭಾವನೆಯನ್ನು ತೋರಲಿಲ್ಲ. ಆಗೊಮ್ಮೆ ಈಗೊಮ್ಮೆ ರತ್ನಮ್ಮ ಕಂಣೀರಿಡುತ್ತಿದ್ದುದನ್ನು ಕಂಡಾಗ

"ಹೋಗಲಿ ಬಿಡೇ! ಆ ಪೀಡೆ ಇಲ್ಲದೆ ಹಾಯಾಗಿ ಇಬ್ಬರೇ ಇದ್ದು ಬಿಡೋಣ. ಏನೀಗ? ಬೇಕಾದರೆ ನಿನ್ನ ತಮ್ಮನ ಮಕ್ಕಳನ್ನೇ ತಂದು ಇಟ್ಟುಕೋ! ಒಬ್ಬನನ್ನು ದತ್ತು ತೆಗೆದುಕೊ"

ಎಂದು ಸಮಾಧಾನ ಹೇಳಿದುದೂ ಉಂಟು. ಈ ಎಲ್ಲ ಮಾತಿನಿಂದ ಬಂಜೆ ರತ್ನಮ್ಮನ ಮನಸ್ಸಿಗೆ ತೃಪ್ತಿಯಾದೀತೆ? ತಾಯಿಯಾಗಬೇಕೆಂಬ ಆಶೆ ಪ್ರತಿ ಹೆಂಣಿಗೂ. ಯಾಕೆ ಎಂದು ಕೇಳಿರಿ. ಯಾರಲ್ಲಿಯೂ ಉತ್ತರವಿಲ್ಲ. ಉತ್ತರ ದೊರೆತರೂ ಈ ಒಂದೇ—ತಂದೆಯಂತೂ ಆಗಲಾರದು, ಅದಕ್ಕಾಗಿ ತಾಯಿಯಾದರೂ ಆಗಲಿ!

ನೂರೊಂದು ದೇವರುಗಳ ಪೂಜೆಯನ್ನು ಮಾಡಿದಳು ರತ್ನಮ್ಮ, ದೇವರ ಸಂತೆಯನ್ನೇ ನೆರೆಸಿದಳು. ಸತ್ಯ ನಾರಾಯಣ, ಸುಳ್ಳು ನಾರಾಯಣ, ಜಪ ತಪ, ಹವನ ಹೋಮ, ಬಾವಿಯ ಪೂಜೆ, ಕೆರೆಯ ಪೂಜೆ, ನಲ್ಲಿಯ ಪೂಜೆಯೂ ಆಯಿತು. ಸಕುಟುಂಬವಾಗಿ ಒಂದು ವಾರ ಆಂಜನೇಯನ ಪೂಜೆ ಮಾಡಬೇಕು ಎಂದು ಅದಾರೋ ಹೇಳಿದರು. ರತ್ನಮ್ಮ ಗಂಡನಿಗೆ ಹೇಳಿದಳು.

ಶಾಮಂಣ ಬರೀ ಡಿಗ್ರಿವಂತನಲ್ಲ, ಬುದ್ಧಿವಂತ ಮತ್ತು ವಿಚಾರವಂತನೂ ಹೌದು. ದೇವರೆಂದರೇನು? ದೇವರಿಲ್ಲ. ಸುವ್ಯವಸ್ಥಿತವಾದ ವಿಶ್ವವನ್ನು ಸ್ವಚಲಿತಪೂರ್ಣ ಮಾಡಿರುವ ಒಂದು ಪ್ರಕೃತಿ ಮಾತ್ರ ಇದೆ ಎಂದು ಅನೇಕರೊಂದಿಗೆ ವಾದಿಸಿ ನಾಸ್ತಿಕ, ಪಾಷಂಡ ಮುಂತಾದ ಬಿರುದುಗಳನ್ನು ಗಳಿಸಿದ್ದ ಮನುಷ್ಯ. ಸೇವೆ ಮಾಡಿದರೆ ಮಾತ್ರ ಮಕ್ಕಳನ್ನು ಕೊಡುವ ದೇವರು

ಅವನೆಂತಹ ದೇವರು ? ಲಂಚ ಬೇಡುವ ದೇವರು ದೇವರೇ ? ಕತ್ತೆ, ನಾಯಿ ಗಳಿಗೆ ಬೇಕಾದಷ್ಟು—ಅಲ್ಲ, ಸಾಕಾಗುವಷ್ಟು–ಮರಿಗಳಾಗುತ್ತವೆ, ಹಂದಿಗೆ ? ಇವೆಲ್ಲ ಪ್ರಾಣಿಗಳು ಆಂಜನೇಯನಿಗೆ ತುಪ್ಪದ ದೀಪಗಳನ್ನು ಹಚ್ಚಿಟ್ಟು ಮಡಿ ಯಿಂದ ಸೇವೆ ಮಾಡುತ್ತವೆಯೆ ? ಈ ಕಂಡ ಕಲ್ಲಿಗೆ ಕೈ ಮುಗಿಯುವುದು, ಪೂಜೆ ಪ್ರದಕ್ಷಿಣೆ ಒಂದರಲ್ಲೂ ಅವನಿಗೆ ಸುತರಾಂ ನಂಬಿಕೆ ಇಲ್ಲ. ಆದರೆ ಇದನ್ನೆಲ್ಲ ಅಂದು ಈಗಾಗಲೇ ಮನನೊಂದಿರುವ ರತ್ನಾಳ ಮನಸ್ಸನ್ನು ಮತ್ತಷ್ಟು ನೋಯಿಸುವುದೆ ? ಮದುವೆಯಾದ ಅಪರಾಧಕ್ಕಾಗಿ, ತನಗೆಷ್ಟು ನಂಬಿಕೆ ಇಲ್ಲ ದಿದ್ದರೂ ಹೆಂಡತಿಯ ಸಲುವಾಗಿ ಏನೆಲ್ಲ ಮಾಡುವುದು ಸಹೃದಯ ಗಂಡನ ಧರ್ಮ. ಹೆಂಡತಿ ಹೇಳಿದುದಕ್ಕೆಲ್ಲ ಅಸ್ತು ಅಂದ. ಬೆಳಿಗ್ಗೆ ಅಷ್ಟು ಹೊತ್ತಿಗೇ ತಣ್ಣೀರಿನ ಸ್ನಾನ, ಒದ್ದೆ ಬಟ್ಟೆ ಉಟ್ಟು ಬ್ರಹ್ಮಚಾರಿ ಹನುಮಪ್ಪನ ಗುಡಿಯ ಸುತ್ತು ರೌಂಡ್ ಹೊಡೆಯುವುದು, ಗಾಣದೆತ್ತಿನಂತೆ. ವಾರ ಮುಗಿಯಿತು, ಫಲಿತಾಂಶ ? ಸೊನ್ನೆ, ಹನುಮಪ್ಪ ಫೇಲ್ ಆದ.

ರತ್ನಮ್ಮನ ತಲೆಯಲ್ಲಿ ಇನ್ನೊಂದು ವಿಚಾರ ಹೊಳೆಯಿತು. ಒಂದು ರಾತ್ರಿ ಗಂಡನೊಂದಿಗೆ ಪ್ರಸ್ತಾಪ ಮಾಡಿದಳು.

"ನಾವಿಬ್ಬರೂ ಡಾಕ್ಟರ ಬಳಿ ಹೋಗಿ ಏಕೆ ಪರೀಕ್ಷೆ ಮಾಡಿಸಿಕೊಳ್ಳ ಬಾರದು ?"

ಶಾಮಣ್ಣ ಒಂದರೆ ಸೆಕೆಂಡು ಸುಮ್ಮನಿದ್ದು ಅನಂತರ ಬಾಯಿ ತೆರೆದ.

"ನೀನು ಹೇಳಿದಂತೆಯೆ ಮಾಡೋಣ. ಆದರೆ ಒಂದು ಕರಾರು"

"ಏನದು ? ಹೇಳಿ"

ಎಂದಂದು ಕುತೂಹಲದಿಂದ ಮುಖ ನೋಡಿದಳು ರತ್ನಮ್ಮ.

"ಡಾಕ್ಟರು ಹೇಳುತ್ತಾನೆ—ನಿನಗೆ ತಾಯಿಯಾಗುವ ಸಂಭವ ಇದೆ, ಆದರೆ ನಿನ್ನ ಗಂಡನಲ್ಲಿ ದೋಷವಿದೆ ಎಂದು. ಆಗ ನೀನು ಬೇರೆಯವನನ್ನು ಮದುವೆ ಆಗಲು ಸಿದ್ಧವಿದ್ದೀಯಾ ? ಹಾಗೆ ಮಾಡಿಕೊಡಲು ನಾನಂತೂ ಸಿದ್ಧ"

ರತ್ನಳಿಗೆ ಇದು ತೋಚಿಯೇ ಇರಲಿಲ್ಲ. ಗಂಡನ ಪ್ರಶ್ನೆಯಿಂದ ಇನ್ನಷ್ಟು ಹೆಚ್ಚು ಮನನೊಂದು ಅಳಲು ಶುರುಮಾಡಿದಳು. ಕಡೆಯಲ್ಲಿ ಸಮಾಧಾನ ಹೇಳಿದ.

"ನೋಡು ರತ್ನಾ, ಹುಟ್ಟು ಎಂಬುದು ಕೇವಲ ಆಕಸ್ಮಿಕ. ನನ್ನ ಹುಟ್ಟೂ ಅಷ್ಟೇ, ನಿನ್ನ ಹುಟ್ಟೂ ಅಷ್ಟೇ. ಆಕಸ್ಮಿಕ ಅಂದರೆ ಅದು ಆಗ ಬಹುದು, ಆಗದೆಯೂ ಇರಬಹುದು. ಇದಕ್ಕಾಗಿ ದುಃಖಿಸಬೇಕೇ, ದಡ್ಡೀ!"

ಏಳೆಂಟು ವರ್ಷಗಳು ಗತಿಸಿದವು. ಮಕ್ಕಳಾಗಲಿಲ್ಲ, ನನ್ನ ಹಣೆಯಲ್ಲಿ ತಾಯಿಯಾಗುವ ಆ ಸುಯೋಗವಿಲ್ಲ ಎಂದು ತನಗೆ ತಾನೇ ಹೇಳಿಕೊಂಡು ಎದೆ ಯನ್ನು ಕಲ್ಲು ಮಾಡಿಕೊಂಡಳು ರತ್ನಮ್ಮ. ಆ ಯೋಚನೆ ಬಿಟ್ಟೆ ಎಂದು ಗಟ್ಟಿ ಯಾಗಿಯೆ ಅಂದುಕೊಂಡಳು, ಒಬ್ಬಳೇ ಇದ್ದಾಗ. ಕಡೆಗೂ ಹೆಂಡತಿ 'ರಿಪೇರಿ' ಆದಳು ಎಂದು ಅದೊಂದು ಬಗೆಯ ಸಮಾಧಾನವನ್ನು ತಂದುಕೊಂಡ ಶಾಮಣ್ಣ.

ಒಂದು ಮಧ್ಯಾಹ್ನ. ಗಂಡ ಆಫೀಸಿಗೆ ಹೋಗಿರುವ ಸಮಯ. ಮನೆ ಕೆಲಸದ ಮರಿಗಿ ಒಬ್ಬ ಮುದಿಕೆಯೊಂದಿಗೆ ಬಂದಳು. ಇದೇಕೆ ಈ ಅವೇಳೆಯಲ್ಲಿ ಬಂದಳು ಮರಿಗಿ ಎಂದು ರತ್ನಮ್ಮನಿಗೆ ಕೊಂಚ ಅಚ್ಚರಿಯಾಯಿತು.

"ಏನೇ ಮರಿಗೀ! ಈ ಹೊತ್ತಿನಲ್ಲಿ ಬಂದಿ?"

"ಯಾಕೂ ಇಲ್ರೆವ್ವ, ನಮ್ಮ ಚಿಗವ್ವ ಊರಿಂದ ಬಂದವ್ಳೆ. ನಿಮ್ಜ್ತಾವೆ ಏನೋ ಮಾತಾಡ್ತವ್ಳಂತೆ. ಅದಕೇ...." ಎಂದಂದು ಮೂಗೆಳೆದಳು ಮರಿಗಿ.

ಆ ಚಿಗವ್ವ ಅರವತ್ತರ ಪ್ರಾಂತ್ಯದಲ್ಲಿದ್ದವಳು. ಬೊಚ್ಚು ಬಾಯಿ, ಹಣೆ ತುಂಬ ಕುಂಕುಮ. ಕೈ ತುಂಬ ಕಪ್ಪು ಬಳೆ. ಹಳ್ಳಿಯ ಮುತ್ತೈದೆ, ವಯಸ್ಸಾದವಳು. ಆದರದಿಂದ ಬರಮಾಡಿಕೊಂಡು ಕೂಡಿಸಿದಳು ರತ್ನಮ್ಮ. ಚಿಗವ್ವ ಸಮಯವನ್ನು ವ್ಯರ್ಥ ಮಾಡದೆ ನೇರವಾಗಿ ವಿಷಯಕ್ಕೇ ಬಂದಳು. ಪೂರ್ವ ಪೀಠಿಕೆಯಾಗಿ

"ಸಂತಾನ ಪ್ರಾಪ್ತಿ ದೇವರಿಂದ" ಎಂದಾರಂಭಿಸಿದಳು.

ಈ ವಿಷಯ ಮಾತು ಬೇಡ ಎಂದು ರತ್ನಮ್ಮನ ವಿವೇಕ ಹೇಳಿದರೂ, ತಾಯಿಯಾಗಬೇಕೆಂಬ ಹೆಣ್ಣಿನ ಆ ಹೆಬ್ಬಯಕೆ ಅವಳ ವಿವೇಕವನ್ನು 'ಗಪ್' ಮಾಡಿತು. ಕೆನ್ನೆಗೆ ಕೈ ಇಟ್ಟು ಕುಳಿತು ಚಿಗವ್ವನ ಮಾತನ್ನು ಆಲಿಸಿದಳು, ಬಹು ಆಸ್ಥೆಯಿಂದ.

ಚಿಗವ್ವ ಚೀಲ ಬಿಚ್ಚಿದಳು. ಒಂದು ದೊಡ್ಡ ಕತೆಯನ್ನೇ ಹೇಳಿದಳು.

ಅವರ ಹಳ್ಳಿ ಇಲ್ಲಿಗೆ ಕೇವಲ ಆರೇ ಮೈಲು ದೂರ. ಅಲ್ಲೊಂದು ಅಜ್ಜಿ ಇದೆ.

"ಅವರೂ ನಿಮ್ಮನವೇ ಕಣಮ್ಮಾ"

ಎಂದು ಸೇರಿಸಿದಳು ಮಾತಿನ ಮಧ್ಯೆ. ಆದರ, ಭಕ್ತಿ, ವಿಶ್ವಾಸಗಳಿಂದ ತನ್ನ ಹೇಳಿಕೆಯನ್ನು ಮುಂದುವರಿಸಿದಳು ಚಿಗವ್ವ. ಆ ಅಜ್ಜಿ ಮನಸ್ಸು ಮಾಡಿದರೆ ಒಂದಲ್ಲ, ನಾಲ್ಕು ಮಕ್ಕಳೂ ಆಗುತ್ತವೆ. ಆಕೆ ದೇವರ ಮಗಳು, ಹಣದಾಶೆ ಎಂಬುದೇ ಇಲ್ಲ. ನೀವಾಗಿ ನೂರೋ, ಇನ್ನೂರೋ ಭಕ್ತಿಯಿಂದ ಕೊಟ್ಟರೆ ಸಾಕೇ ಸಾಕು, ತೆಗೆದುಕೊಳ್ಳುತ್ತಾಳೆ. ಮಕ್ಕಳನ್ನು ಕೊಡುತ್ತಾಳೆ.

"ಹೇಗೆ ?"

ಎಂದು ಕೇಳಿ ರತ್ನಮ್ಮ ಆ ಚಿಗವ್ವನ ಮುಖವನ್ನು ದಿಟ್ಟಿಸುತ್ತ ಕುಳಿತಳು.

ದೇವರ ಮಗಳು ಮನಸ್ಸು ಮಾಡಿದರೆ ಯಾವುದು ಅಸಾಧ್ಯ ? ರಜೋದರ್ಶನ ಮುಗಿದ ಮೂರನೆ ದಿನ ಬೆಳಿಗ್ಗೆಯೆ ಅಜ್ಜಿಯ ಬಳಿ ಬರಬೇಕು. ಆಕೆ ಪೂಜೆ ಮಾಡಿ ಪ್ರಸಾದ ಕೊಡುತ್ತಾಳೆ. ಮೂರು ರಾತ್ರಿ ಅಲ್ಲಿಯೇ, ಅವರ ಮನೆಯಲ್ಲಿಯೇ ಇರಬೇಕು. ಊಟವನ್ನೂ ಆಕೆಯೇ ಕೊಡುತ್ತಾಳೆ. ಅಲ್ಲಿಯೇ ಊಟ, ಅಲ್ಲಿಯೇ ನಿದ್ರೆ. ರಾತ್ರಿ ನಿದ್ರೆಯಲ್ಲಿ ಯಾವಾಗಲೋ ದೇವರು ಬರುತ್ತಾನೆ, ಗರ್ಭಾದಾನ ಮಾಡುತ್ತಾನೆ. ಅದೃಶ್ಯನಾಗುತ್ತಾನೆ. ಒಂದು ಕರಾರು, ಬೇರಾರು ಬಂಧುಗಳಾಗಲಿ ಗಂಡನೇ ಆಗಲಿ ಜೊತೆಯಲ್ಲಿ ಬರಕೂಡದು, ಒಬ್ಬಳೇ ಬರಬೇಕು. ನೂರಾರು ಹೆಂಣು ಮಕ್ಕಳು ಅಲ್ಲಿಗೆ ಬಂದು ಮಕ್ಕಳ ತಾಯಂದಿರಾಗಿ ಸುಖವಾಗಿದ್ದಾರೆ ಈಗ.

"ಅದಕ್ಯಾಕ್ರೆಮ್ಮ ಯೋಚನೆ ? ನಾನೇ ಬಂದು ಕರಕೊಂಡು ಓತಿವ್ನಿ, ತಂದು ಬಿಡ್ತಿವ್ನಿ. ನಾನು ಮಾಡೋ ಸೇವೆಗೆ ನೀವೆ ಏನಾದರೂ ಕೊಡಿ, ಬಡವಿ"

ಮಕ್ಕಳೇ ಬೇಡವೆಂದು ಎಂದೋ ನಿರ್ಧರಿಸಿ ಕಲ್ಲು ಮಾಡಿದ್ದ ರತ್ನಮ್ಮನ ಮನಸ್ಸು ಡೋಲಾಯಮಾನವಾಯಿತು.

"ಆಗಲಿ ಚಿಗವ್ವಾ ! ಅವರನ್ನು ಕೇಳಿ ಹೇಳ್ತೀನೆ"

"ಉಚ್ಚವ್ವಾ ! ಗಂಡು ಮಗನ ತಾಯಿ ಆಗ್ತೀನಿ ಅಂದ್ರೆ ನಿನಗಂಡ ಬ್ಯಾಡ

ಅಂತಾನೆಯೆ? ನೀನು ವರಾಕಾದ ದಿನಾನೇ ಮರಿಗಿ ಜೊತೇಲಿ ನನಗೆ ಯೋಳಿ ಕಳಿಸು. ಮುಂದಿನ ಏರ್ಪಾಟೆಲ್ಲ ನಾನು ಮಾಡ್ತಿನ್ನಿ."

ಆ ಸಂಜೆ ಗಂಡನ ಬರುವಿಕೆಗಾಗಿ ಕುತೂಹಲದಿಂದ ಕಾದು ಕುಳಿತಿದ್ದಳು ರತ್ನಮ್ಮ. ಬಂದುದೇ ತಡ, ಕೈಗೆ ಕಾಫಿ ಇತ್ತು ಜಿಗವ್ವ ಹೇಳಿದುದನ್ನೆಲ್ಲ ಆದ್ಯಂತವಾಗಿ ವರದಿ ಮಾಡಿದಳು, ಅತಿ ಉತ್ಸಾಹದಿಂದ

"ಈ ಹುಚ್ಚು ಗುಣವಾಗಿತ್ತು ಎಂದಂದುಕೊಂಡಿದ್ದೆ, ಮತ್ತೆ ಶುರುವಾಯಿತೆ?" ಎಂದು ಮನದಲ್ಲಿಯೆ ಅಂದುಕೊಂಡು ತುಟಿಯಲ್ಲಿಯೇ ನಕ್ಕ ಶಾಮಣ್ಣ ಇಂತಹ ಕತೆಗಳನ್ನು ಬಹಳ ಕೇಳಿದ್ದ. ಕೆಲವು ಸ್ವಾಮಿಗಳು ತಮ್ಮ ಭಕ್ತರ ಭಕ್ತಿಗೆ ಮೆಚ್ಚಿ ಆ ಭಕ್ತರ ಹೆಂಡಂದಿರೊಡನೆ ಪರಾರಿಯಾದ ಘಟನೆಗಳನ್ನೂ ಪತ್ರಿಕೆಗಳಲ್ಲಿ ಓದಿದ್ದ. ಅವನ್ನೆಲ್ಲ ರತ್ನಳಿಗೆ ಹೇಳುವುದೇ? ಅವಳ ಮುಖವನ್ನು ನೋಡಿದೊಡನೆ 'ಅಯ್ಯೊ ಪಾಪ!' ಅನಿಸಿ ಸುಮ್ಮನಾದ.

"ಎರಡು ನೂರು ಹೋದರೆ ಹೋಗಲಿ, ಮೂರು ದಿನ ಇದ್ದು ಬರುತ್ತೇನೆ."

ಹೆಂಡತಿಯ ದನಿಯಲ್ಲಿ ದೈನ್ಯ ಇತ್ತು, ಯಾಚನೆ ಇತ್ತು, ತಾಯಿ ಆಗುತ್ತೇನೆಂಬ ಉತ್ಸಾಹ ಇತ್ತು.

ಶಾಮಣ್ಣನಿಗ ಎರಡು ನೂರು ರೂಪಾಯಿ ದೊಡ್ಡದೇ? ಕ್ಲಬ್‌ನಲ್ಲಿ ಇಸ್ಪೀಟಿಗೆ ಕುಳಿತಾಗ ಇಂತಹ ನೂರುಗಳೆಷ್ಟೋ ಹೋಗಿದ್ದವು, ಬಂದಿದ್ದವು.

"ನನ್ನ ಹಣವನ್ನು ಹಾಳುಮಾಡುವ ಅಧಿಕಾರ ನನಗೆಷ್ಟು ಇದೆಯೋ ನನ್ನ ಹೆಂಡತಿಗೂ ಅಷ್ಟೇ ಇದೆ. ಹೇಗೆ ಹಾಳುಮಾಡಬೇಕೆಂಬ ವಿಧಾನ ಅವರವರ ಇಚ್ಛೆಗೆ ಬಿಟ್ಟದ್ದು."

ಕಡೆಗೆ ಒಂದೇ ವಾಕ್ಯ ನುಡಿದ.

"ನಿನ್ನಿಷ್ಟ, ನಾನೊಂದಕ್ಕೂ ಅಡ್ಡಿಮಾಡುವುದಿಲ್ಲ"

ಅನತಿ ದೂರದಲ್ಲಿಯೇ ರತ್ನಮ್ಮ ಬಹಿಷ್ಠೆ ಆದಳು ಮರಿಗಿಗೆ ತಿಳಿಸಿದಳು. ಹಳ್ಳಿಯಲ್ಲಿದ್ದ ಜಿಗವ್ವನಿಗೆ ತಾರು ಹೋದಂತೆ ಸುದ್ದಿ ಹೋಯಿತು.

ನಾಲ್ಕನೆ ದಿನ ಬೆಳಗಾಗುವಹೊತ್ತಿಗೆ ಜಿಗವ್ವ ರತ್ನಮ್ಮನ ಮನೆ ಮುಂದೆ ಹಾಜರ್. ಅವಳ ಕೈಗೆ ಒಂದಿಪ್ಪತ್ತು ಬಿತ್ತು. ಎರಡು ನೂರರ ನೋಟು

ಗಳನ್ನು ಜಂಬದ ಚೀಲದಲ್ಲಿಟ್ಟುಕೊಂಡು ಬಸ್ಸಿಗೆ ಹೊರಟಳು ರತ್ನಮ್ಮ. ಮುಂದು ಮುಂದು ಚಿಗವ್ವ, ಹಿಂದು ರತ್ನಮ್ಮ. ದಾರಿಯುದ್ದಕ್ಕೂ ಚಿಗವ್ವನ ಬಾಯಿಗೆ ರಜೆಯೇ ಇಲ್ಲ. ಹದಿನೈದು ವರ್ಷದ ಬಂಜೆ ಒಬ್ಬಳಿಗೆ ಅಜ್ಜಿ ಅವಳಿ ಮಕ್ಕಳನ್ನು ಕೊಡಿಸಿದ್ದಾಳೆ. ನಾನೇ ನೋಡಿದೆ, ಮಕ್ಕಳು ಗಿಳಿಯಂತಿವೆ. ಬರೀ ಇಂತಹವೇ ಕತೆಗಳು. ಬಂಜೆ ರತ್ನಮ್ಮನ ಬಾಯಿ ನೀರೊಡೆಯಿತು.

ಆರು ಮೈಲಿಗಳು ಬಸ್ಸಿನಲ್ಲಿ ಬರುವುದಕ್ಕೆ ಎಷ್ಟು ಮಹಾ ಸಮಯ ಬೇಕು ? ದೇವರ ಮಗಳಾದ ಅಜ್ಜಮ್ಮ ಪೂಜಾ ಸಾಮಗ್ರಿಗಳನ್ನೆಲ್ಲ ಅಣಿಮಾಡಿ ಕೊಂಡು ಕಾದು ಕುಳಿತಿದ್ದಳು. ರತ್ನಮ್ಮ ಒಳ ಬಂದಳು.

"ಹೊರಗಡೆ ನೀರು ಇದೆ, ಕಾಲು ತೊಳೆದು ಬಾ ಚಿನ್ನಾ"

ಅಂದಿತು ಅಜ್ಜಮ್ಮ. ಅಜ್ಜಿಯ ದನಿಯಲ್ಲಿ ಸಾಕ್ಷಾತ್ ಮಾತೃವಾತ್ಸಲ್ಯ! ದೇವರ ಮಗಳಲ್ಲವೇ ? ಕಾಲು ತೊಳೆದು ಒಳಬಂದಳು ರತ್ನಮ್ಮ. ಜಂಬದ ಚೀಲದಿಂದ ಎರಡು ನೂರರ ನೋಟುಗಳನ್ನು ಹೊರತೆಗೆದು ಭಕ್ತಿಯಿಂದ ಮುಂದಿಟ್ಟು ಕೈಮುಗಿದು ಮುಖ ನೋಡಿದಳು. ಅಜ್ಜಿ ವಿಧವೆ—ಸರ್ವಾಂಗ ವಿಧವೆ—ಆದರೂ ಆ ಮುಖದಲ್ಲಿ ಅದೆಂತಹ ವರ್ಚಸ್ಸು ! ಕಣ್ಣಲ್ಲಿಯ ಕಾಂತಿ ! ತೇಜಸ್ಸು ! ಓಜಸ್ಸು ! ಸಾಕ್ಷಾತ್ ದೇವರ ಮುಖದಲ್ಲಿ ಕಾಣಬಹುದಾದೆಲ್ಲ ವನ್ನೂ ರತ್ನಮ್ಮ ಆ ದೇವರ ಮಗಳ ಮುಖದಲ್ಲಿ ಕಂಡಳು. ಆಕೆ ದೇವರ ಮುಖವನ್ನು ಕಂಡಿದ್ದಳೇ ? ದೇವರಿಗೆ ಮುಖ ಇದೆಯೇ ? ದೇವರಿದ್ದಾನೆಯೆ ? ಇಂತಹ ಧೂರ್ತ ಪ್ರಶ್ನೆಗಳೆಲ್ಲವೂ ಆ ಮುಗ್ಧ ರತ್ನಮ್ಮನ ತಲೆಯಲ್ಲಿ, ಅದೂ ಆ ಸಮಯದಲ್ಲಿ ಬರಲು ಸಾಧ್ಯವೇ ? ದೀರ್ಘದಂಡ ನಮಸ್ಕಾರ—ಒಂದು ನಮಸ್ಕಾರ ದಂಡ—ಮಾಡಿದಳು. ಕೈ ಮುಗಿದು ಕಣ್ಣುಮುಚ್ಚಿ ಭಕ್ತಿಯ ಉನ್ಮಾದದಲ್ಲಿ ಕುಳಿತಳು.

ದೇವರ ಮಗಳ ಪೂಜೆ ಯಾವಾಗ ಮುಗಿಯಿತೋ, ಕಣ್ಣು ಮುಚ್ಚಿ ಕುಳಿತ ರತ್ನಮ್ಮನಿಗೇನು ಗೊತ್ತು ?

"ಕಣ್ಣು ತೆಗೆ ಚಿನ್ನಾ, ಬಲಗಡೆ ಹೂ ಬಿತ್ತು. ಗಂಡುಮಗನ ತಾಯಿ ಆಗುತ್ತಿ."

ರತ್ನಮ್ಮನಿಗೆ ಸಾಕ್ಷಾತ್ ದೇವರೇ ಪ್ರತ್ಯಕ್ಷವಾದಂತಾಗಿತ್ತು ಪಾಪ !

ಮಕ್ಕಳ ಬಯಕೆ ಯಾವಾವ ಹುಚ್ಚು ಹಿಡಿಸುತ್ತದೋ ಹೆಂಣಿಗೆ? ಬೊಗಸೆ ಒಡ್ಡಿದಳು, ಕೈಯಲ್ಲಿ ಹೂವು, ಕುಂಕುಮ ಬಿತ್ತು. ಧನ್ಯಳಾದೆ ಎಂದಂದು ಕೊಂಡು ಎದ್ದಳು ಅಜ್ಜಿ ತೋರಿಸಿದ ಹೊರಕೋಣೆಯಲ್ಲಿ ವಿಶ್ರಾಂತಿ ತೆಗೆದು ಕೊಳ್ಳಲು ಅಡ್ಡಾದಳು.

ಮಧ್ಯಾಹ್ನದ ಹೊತ್ತಿಗೆ ಅಡುಗೆಯಾಯಿತು. ಸ್ವತಃ ಅಜ್ಜಿಯೇ ಬಡಿಸಿ ದಳು. ರತ್ನ ಆ ಊಟವನ್ನು ಪ್ರಸಾದವೆಂಬ ಪವಿತ್ರ ಭಾವನೆಯಿಂದ ಭುಜಿಸಿ ದಳು. ಮತ್ತೆ ಸಂಜೆಗೆ ಪೂಜೆ, ನಮಸ್ಕಾರ, ಹೂವು ಇತ್ಯಾದಿ, ಇತ್ಯಾದಿ. ರಾತ್ರಿ ಊಟ ಮುಗಿಯಿತು.

“ನನ್ನ ಜೊತೆಯಲ್ಲೇ ಮಲಗು ಚಿನ್ನಾ”

ಎಂದಂದು ದೇವರ ಮಗಳಾದ ಅಜ್ಜಿ ಪಕ್ಕದ ಹಾಸಿಗೆಯಲ್ಲಿ ಮಲಗಿಸಿ ಕೊಂಡಳು. ರತ್ನಮ್ಮನಿಗೆ ನಿದ್ರೆಯೇ ಇಲ್ಲ. ಎಚ್ಚೆತ್ತಿರುವಾಗಲೇ ಕನಸು, ಏನೆಲ್ಲ ಸಿಹಿ ಕನಸು. ಕೂಸು ಅತ್ತಂತೆಯೂ ಕೇಳಿಸಿತು. ರಾತ್ರಿ ಹನ್ನೆರಡಾ ಗಿರಬೇಕು, ಬಾಗಿಲು ಕಿರ್ರೆಂದ ಸಪ್ಪಳವಾಯಿತು. ಮಲಗಿದಲ್ಲಿಯೆ ಮುಸುಕು ತೆರೆದು ನೋಡಿದಳು. ಅಜ್ಜಮ್ಮ ಹೊರಕ್ಕೆ ಹೋದಳು.

ಐದಾರು ಮಿನುಟುಗಳು ಸಂದಿರಬೇಕು. ಪುಟ್ಟ ದೀಪದ ಬೆಳಕಿನಲ್ಲಿ ಇನ್ನೆಷ್ಟು ಕಂಡೀತು? ಒಬ್ಬ ಧಾಂಡಿಗ ಒಳಬಂದ. ಬಾಗಿಲು ಮುಚ್ಚಿದ. ಊರ ಗೂಳಿಯಂತಹ ಅವನು ನೇರವಾಗಿ ರತ್ನಮ್ಮನ ಹಾಸಿಗೆಗೇ ಬಂದ. ಇನ್ನೊಂದು ಗಳಿಗೆಯಲ್ಲಿ ರತ್ನಮ್ಮನ ಶೀಲಭಂಗ! ಅರ್ಥವಾಯಿತು ಆಕೆಗೆ. ಕೂಡಲೇ ಎದ್ದು ಇರುಕಲು ಎತ್ತಿನಂತೆ ನೋಡುತ್ತ ನಿಂತಳು. ಮೈಮೇಲೇರಿ ಬಂದ ಅವನು, ಕೆನ್ನೆಗೆರಡು ಕೊಟ್ಟಳು. ಅಳುತ್ತ, ಚೀರುತ್ತ, ಆರ್ಭಟಿಸಿ ಓಡುತ್ತ ಬಂದು ಬಾಗಿಲನ್ನು ತೆರೆದು ರಸ್ತೆಗೆ ಓಡಿದಳು. ಮುಂದು ಮುಂದು ರತ್ನ, ಹಿಂದು ದೇವರು ಮತ್ತು ದೇವರ ಮಗಳಾದ ಅಜ್ಜಮ್ಮ. ರತ್ನಮ್ಮನ ಕೂಗಾಟವನ್ನು ಕೇಳಿ ಆ ಓಣಿಯವರು ಬಾಗಿಲು ತೆರೆದು ಹೊರಕ್ಕೆ ಬಂದರು. ದೇವರು ಮಾಯವಾದ, ದೇವರ ಮಗಳೂ ಪರಾರಿ

ರತ್ನಮ್ಮ ಆ ಪರಿಸ್ಥಿತಿಯಲ್ಲಿ ಯಾರನ್ನು ನಂಬುವುದು, ಯಾರನ್ನು ಬಿಡು ವುದು? ಯಾರದೋ ಮನೆಯಲ್ಲಿ ಬೆಳ್ಳಂಬೆಳಗೂ ಮೈಯೆಲ್ಲ ಕಂಣಾಗಿ ಕುಳಿತೇ

ಇದ್ದಳು. ಬೆಳಗಾಯಿತು, ಮೊದಲ ಬಸ್ಸಿಗೇ ಊರಿಗೆ ಮರಳಿದಳು. ನಡೆದ ಸಂಗತಿಯನ್ನು ಆದ್ಯಂತವಾಗಿ ಗಂಡನಿಗೆ ವರದಿ ಮಾಡಿ ಹೋ ಎಂದತ್ತಳು.

ಚಿಗವ್ವ, ಮರಿಗಿ, ದೇವರ ಮಗಳು ಮಧ್ಯಾಹ್ನವೇ ಪೋಲೀಸ್ ಲಾಕಪ್ ಸೇರಿದರು. ಪೋಲೀಸರಿಗೆ ದೇವರನ್ನು ಹುಡುಕುವುದು ಕಷ್ಟವೇ ? ಸಂಜೆಗೆ ಧಾಂಡಿಗನೂ ಸಿಕ್ಕ. ಪೋಲೀಸನ ಹಳೆಯ ಬೂಟಿನ ಏಟಿಗೆ ದೇವರು ಎಲ್ಲವನ್ನೂ ಒಪ್ಪಿಕೊಂಡ. ಸುಮಾರು ಐವತ್ತು ಹೆಂಗಳೆಯರಿಗೆ ಅವನಿಂದ ಸಂತಾನ ಪ್ರಾಪ್ತಿ ಆಗಿದೆ. ಅವನ ಶ್ರಮದಾನಕ್ಕೆ ಬಂದ ಕಮಿಷನ್ನು ಒಂದೊಂದಕ್ಕೆ ಕೇವಲ ಹತ್ತೇ ರೂಪಾಯಿ, ಪಾಪ !

# ಬರೆಯದ ನಾಟಕ

ಎಲ್ಲರಿಗೂ ಒಂದೇ ಬಗೆಯ ಹುಚ್ಚಿದೆಯೆ? ಛೆ ಛೆ! ಹುಚ್ಚಿನಲ್ಲಿಯೂ ಸಾಕಷ್ಟು ವೈವಿಧ್ಯತೆ ಇದೆ. ಒಬ್ಬೊಬ್ಬರಿಗೆ ಒಂದೊಂದು ತರಹದ ಹುಚ್ಚು.

ಕೆಲವರಿಗೆ ಫೋಟೋ ಬಾಬಾಗಳ ಹುಚ್ಚು, ಆ ಬಾಬಾಗಳಿಗೆ ದಢ್ಢ ಭಕ್ತಾದಿಗಳ ಹುಚ್ಚು. ಹಲವು ಗಂಡುಗಳಿಗೆ ಹೆಂಣಿನ ಹುಚ್ಚು, ಆ ಹೆಂಣುಗಳಿಗೆ ಹಣದ ಹುಚ್ಚು, ಕೆಲವರಿಗೆ ಕಪ್ಪು ಗಡಿಯಾರವನ್ನು ಬಲಗೈಗೆ ಕಟ್ಟುವ ಹುಚ್ಚು. ಕೆಲ ಬಡವರಿಗೆ ಪತ್ರಿಕೆಗಳನ್ನು ಹೊರಡಿಸುವ ಹುಚ್ಚು. ಇದು ಹೀಗೇಕೆ ಎಂಬ ಪ್ರಶ್ನೆಗೆ ಇಲ್ಲಿ ಆಸ್ಪದವೇ ಇಲ್ಲ. ಇದೆಲ್ಲಕ್ಕೂ ಒಂದೇ ಉತ್ತರ—ಅವರವರಿಗೆ ಅವರವರ ಹುಚ್ಚು.

ಶ್ರೀಕಾಂತನಿಗೆ ತನ್ನದೇ ಆದ ಒಂದು ಹುಚ್ಚು—ಒಂದು ನಾಟಕವನ್ನು ಬರೆಯಬೇಕೆಂಬ ಹುಚ್ಚು. ಇದರಲ್ಲಿ ಅವನದಾದರೂ ತಪ್ಪೇನಿದೆ, ಪಾಪ! ಪ್ರತಿಯೊಬ್ಬನಿಗೂ ತನ್ನದೇ ಆದ ಸ್ವಂತೊಂದು ಹುಚ್ಚಿರುವುದು ಅವನ ಜನ್ಮಸಿದ್ಧ ಹಕ್ಕು. ಹೀಗೆಂದು ನಮ್ಮ ರಾಷ್ಟ್ರದ ಘಟನೆಯಲ್ಲಿ ನಮೂದಿಸಲ್ಪಟ್ಟಿರುವುದೇ? ಈ ಪ್ರಶ್ನೆ ಬೇಡ. ಘಟನೆಯಲ್ಲಿ ಬರೆಯದಿರುವ ಅನೇಕ ಹಕ್ಕುಗಳು ಪ್ರಜೀವೆ. ಇವಕ್ಕೆ ಯಾರ ಆತಂಕವೂ ಇಲ್ಲ. ನನ್ನ ಕೈ ಕೋಲನ್ನು ಎಲ್ಲಿ ಬೇಕಾದಲ್ಲಿ ತಿರುಗಾಡಿಸುವ ಹಕ್ಕು ನನಗಿದೆ. ಆದರೆ ಅದು ಇನ್ನೊಬ್ಬರ ಮೂಗಿಗೆ ತಗಲ ಕೂಡದು. ಶ್ರೀಕಾಂತ ನಾಟಕ ಬರೆಯುವುದರಿಂದ ಯಾರ ಮೂಗಿಗೂ ಏನೂ ತೊಂದರೆ ಇಲ್ಲವಲ್ಲಾ?

ಚಿಕ್ಕಂದಿನಲ್ಲಿ ಶ್ರೀಕಾಂತನಿಗೆ ಇನ್ನೊಂದು ಹುಚ್ಚು ಇತ್ತು. ಅದಷ್ಟು ಕುರೂಪಿ ಹುಡುಗಿಯನ್ನೇ ಮದುವೆ ಆಗುತ್ತೇನೆಂದು ಹಟ ಹಿಡಿದಿದ್ದ. ಏಕೆ? ಅವನ ವಾದ ಅನೇಕರಿಗೆ ವಿಚಿತ್ರವಾಗಿ ಕಾಣುತ್ತಿತ್ತು. ಆದರೆ ಅವನಮಟ್ಟಿಗೆ ಅದೇ ಸರಿ.

ಹೆಂಡತಿಯೂ ರೂಪವತಿಯಾಗಿರಬೇಕೆ? ಧರಿಸಿಕೊಂಡು ಪಾರ್ಟಿಗಳಿಗೆ ಹೋಗುವ ಕೋಟ್ ಏನು ಹೆಂಡತಿ? ಲಾಲ್‌ಬಾಗ್‌ನಲ್ಲಿಯ ಗ್ಲಾಸ್ ಹೌಸ್ ನಲ್ಲಿ ಎಕ್ಸಿಬಿಷನ್‌ಗಿಡುವ ವಸ್ತುವೇ ಹೆಂಡತಿ ಎಂದರೆ? ಮನೆಯಾಕೆಯಾಗಿ ಮನೆಯಲ್ಲಿದ್ದು, ಮಕ್ಕಳನ್ನು ಹೆತ್ತು ಜೋಪಾನ ಮಾಡುವ ಹೆಂಡತಿಗೂ ಚೆಲುವು ಅದೇಕೆ ಬೇಕು? ರಾತ್ರಿ ಜೀವಿಗಳಿಗೆ ಚೆಂದ, ಚೆಲುವು ಬೇಕು. ಅದವರ ಬಂಡವಾಳ. ಗರತಿ ಗಂಗಮ್ಮನಾಗಿ ಬಾಳುವ ಗೃಹಿಣಿಗೆ ಸೌಂದರ್ಯ ಏಕೆ ಬೇಕು? ಶ್ರೀಕಾಂತನ ವಾದ ಸರಿಯೋ ತಪ್ಪೋ ಎಂಬುದನ್ನು ಮತಕ್ಕೆ ಹಾಕಿ ನಿರ್ಣಯಿಸಲು ಸಾಧ್ಯವೆ? ನಿಸ್ಸಿಷ್ಟ ಎಂದು ಎಲ್ಲರೂ ಕೈಬಿಟ್ಟರು. ಕಡೆಗೂ ಶ್ರೀಕಾಂತ ತನ್ನ ಹಟವನ್ನೇ ಸಾಧಿಸಿದ, ಒಂದು ಅಪ್ಪಟ ಕುರೂಪಿ ಹುಡುಗಿಯನ್ನು ಮದುವೆಯಾಗಿ ಮನೆಗೆ ತಂದ.

ಹೆಂಡತಿ ಕುರೂಪಿಯೋ, ಸುರೂಪಿಯೋ ಮನೆಗೆ ಬಂದ ನಂತರ ಬೇರೇನಾಗಲು ಸಾಧ್ಯ? ಆಗಬೇಕಾದುದೇ ಆಯಿತು—ಮನೆತುಂಬ ಮಕ್ಕಳು. ಪ್ರಕೃತಿಯ ಕಾರ್ಯ–ತತ್ಪರತೆಯ ಫಲ!

ಹುಚ್ಚುಗಳಲ್ಲಿಯೂ ಎರಡು ತರಹ. ಕೆಲವು ಖಾಯಂ ಹುಚ್ಚುಗಳು, ಉಳಿದವು ಹಂಗಾಮಿ ಹುಚ್ಚುಗಳು. ಶ್ರೀಕಾಂತನ ಈ ಕುರೂಪಿ ಹೆಂಡತಿಯ ಹುಚ್ಚು ಕೇವಲ ಹಂಗಾಮಿ ಹುಚ್ಚಾಗಿ ಪರಿಣಮಿಸಬೇಕೇ? ಈ ಹುಚ್ಚು ಕೆಲ ಕಾಲದ ನಂತರ ಗುಣವಾಯಿತು, ಅವನ ಮನಸ್ಸಿಗೆ ಪೇಚಾಟವಾಯಿತು. ಥೂ! ಇವಳ ಮುಖವನ್ನು ನೋಡಲಾರೆ ಎಂದಂದುಕೊಂಡ. ಕೆಲಬಾರಿ ಆಗಿ ಹೋದುದಕ್ಕೆ ಅತ್ತೇನು ಫಲ ಎಂದು ತತ್ವಜ್ಞಾನಿಯಂತೆ ತನಗೆ ತಾನೇ ಹೇಳಿಕೊಂಡ. ಇದು ಕೇವಲ ಬಾಯಿ ಸಮಾಧಾನ ಮಾತ್ರವೇ. ಮನಸ್ಸಿನ ಹಪಾಹಪಿ ಮಾತ್ರ ಹೋಗಲೇ ಇಲ್ಲ. ಒಳೊಳಗೇ ಪೇಚಾಟ, ಅವರಿವರಿಗೆ ಹೇಳಿಕೊಳ್ಳಲು ಬಾರದ ನೋವು.

ನಾಟಕ ಬರೆಯಲು ಕುಳಿತರಾಯಿತು, ಮಕ್ಕಳ ಗಲಾಟೆ ಗೌಜು ಗದ್ದಲ. ಆ ಮಕ್ಕಳನ್ನು ಕರೆದೊಯ್ಯಲು ಹೆಂಡತಿಯೇ ಬರಬೇಕು. ಆಗ ಹೆಂಡತಿಯ ಮುಖ ನೋಡುವುದು ಶ್ರೀಕಾಂತನಿಗೆ ಅನಿವಾರ್ಯ. ಆ ಮುಖಾರವಿಂದದ ದರ್ಶನ ಆದರಾಯಿತು, ಅವನ ನಾಟಕ ಬರೆಯುವ ಸ್ಫೂರ್ತಿ ಎಲ್ಲವೂ ಹಾಗೆಯೇ ಮಾಯ! ಹೆಂಡತಿಯ ಧ್ವನಿ ಕೇಳಿದರೇ ಸಾಕು, ಎಳೆ ಬಿಸಿಲಿಗೆ ಕರಗುವ ಮಂಜಿನಂತೆ ಕರಗಿಹೋಗಿ ಅವನ ಸ್ಫೂರ್ತಿಯ ಸೆಲೆಯೇ ಒಣಗಿ ಹೋಗುತ್ತಿತ್ತು. ಈ ಹಾಳು ಮನೆಯಲ್ಲಿ ನಾನು ನಾಟಕ ಬರೆದಂತೆಯೇ ಇದೆ ಎಂದು ಕೈಚೆಲ್ಲಿ ಕುಳಿತ.

ಶ್ರೀಕಾಂತನ ನಾಟಕ ಬರೆಯುವ ಹುಚ್ಚು ಇಂದು, ನಿನ್ನಿನದಲ್ಲ. ಬಹು ಚಿಕ್ಕಂದಿನಿಂದಲೂ ಈ ಗೀಳು ಅವನಿಗೆ ವಿದ್ಯಾರ್ಥಿಯಾಗಿದ್ದಾಗಲೇ ಒಂದು ನಾಟಕವನ್ನು ಬರೆದಿದ್ದ. ಪತ್ರಿಕೆಗೂ ಕಳಿಸಿದ್ದ. ಅವನ ನಾಟಕ ಒಂದೇ ಕಡೆ ಇರುವ ನಾಟಕವೇ? ಸದಾ ಚಲಾವಣೆಯಲ್ಲಿಯೇ ಇರುತ್ತಿತ್ತು. ಒಂದು ಪತ್ರಿಕೆಯಿಂದ ಮರಳಿಬಂದೊಡನೆ ಮತ್ತೊಂದು ಪತ್ರಿಕೆಗೆ ಹೋಗುತ್ತಿತ್ತು. ಆ ಮತ್ತೊಂದು ಪತ್ರಿಕೆಯಿಂದ ಇನ್ನೊಂದು ಪತ್ರಿಕೆಗೆ. ಹೀಗೆಯೇ ಅಶ್ವಮೇಧದ ಕುದುರೆಯಂತೆ ತ್ರಿಲೋಕಗಳನ್ನು ಸುತ್ತಾಡಿ ಜಯಶೀಲವಾಗಿ ಮರಳಿ ಮನೆಗೇ ಬಂದಿತ್ತು. ಇದೇ ಅವನ ಹಿರಿಹೆಮ್ಮೆ!

ಈ ಬಾರಿ ಒಂದು ದೊಡ್ಡ ನಾಟಕವನ್ನೇ ಬರೆಯಬೇಕು. ದೊಡ್ಡ ನಾಟಕ ಅಂದರೆ? ಹಳೆಯಕಾಲದ ಫುಲ್ ರಾಮಾಯಣದಂತಹ ನಾಟಕ. ಬೆಳ್ಳಂಬೆಳಗೂ ಆಡಬೇಕು. ನಾಟಕ ನೋಡಲು ಬಂದವರು ಚಹಾ ಕುಡಿದು ಕೂಡಬೇಕು, ಕಾಫಿ ಕುಡಿದು ಏಳಬೇಕು. ಅಂತೂ ನನ್ನ 'ಮ್ಯಾಗ್ನಮ್ ಓಪಸ್' ಸೃಷ್ಟಿಯಾಗಲೇಬೇಕು—ಶ್ರೀಕಾಂತ ನಿರ್ಧರಿಸಿದ.

ನಿರ್ಧಾರಮಾಡುವುದು ಅವನ ಕೈಲಿತ್ತು, ಮಾಡಿದ. ಆದರೆ ಅದನ್ನು ಕಾರ್ಯಗತ ಮಾಡುವ ಮಾರ್ಗ? ಈ ಮನೆಯಲ್ಲಂತೂ ಸಾಧ್ಯವಿಲ್ಲ. ಈ ರಂಭೆಯಂತಹ ಹೆಂಡತಿ, ಈ ಸದಾ ಕಿರುಚುತ್ತಿರುವ ಮಕ್ಕಳು! ಥೂ, ಈ ಮನೆಯಕಿಂತಲೂ ಸಿಟಿ ಮಾರ್ಕೆಟ್ ಮೇಲು ಎಂದಂದುಕೊಂಡ ಕಡೆಗೊಂದು ಉಪಾಯ ಹೊಳೆಯಿತು, ನಾಟಕಕಾರನಾದ ಶ್ರೀಕಾಂತನಿಗೆ ಯುಕ್ತಿಗಳಿಗೆ ಕೊರತೆಯೇ?

ಬೆಳಗಿನಲ್ಲಿಯೇ ಮನೆಯಿಂದ ಹೊರಬಿದ್ದ. ಗಲ್ಲಿ ಗಲ್ಲಿಗಳನ್ನು ಹೊಕ್ಕ. ಅಲ್ಲೊಂದು ಕುರುಡು ಓಣಿ ಸಿಕ್ಕಿತು. ಅದರಲ್ಲಿ ತೂರುತ್ತ ತಲೆಎತ್ತಿ ನೋಡಿದ ಹಳೆಯ ಬೋರ್ಡೊಂದು ರಾರಾಜಿಸುತ್ತಿತ್ತು—ಮೇನಕಾ ಲಾಡ್ಜ್!

ಲಾರಿ, ಬಸ್ಸುಗಳಿಲ್ಲ. ಆಟೋರಿಕ್ಷಾ ಸದ್ದೂ ಇಲ್ಲ. ಎತ್ತಿನ ಚಕ್ಕಡಿಯಂತೂ ಆ ಸಂದಿಯಲ್ಲಿ ಹಾಯುವಂತೆಯೇ ಇಲ್ಲ. ಎಲ್ಲವೂ ಪ್ರಶಾಂತವಾಗಿದೆ ಎಂದು ತನಗೆ ತಾನೇ ಹೇಳಿಕೊಂಡ. ಮೇನಕಾ ಲಾಡ್ಜ್ ಒಳಗಡೆ ನುಗ್ಗಿದ.

ಕುರ್ಚಿಯ ಮೇಲೆ ಕುಳಿತಿದ್ದ ಸಾಹುಕಾರ ಹಲ್ಕಿಸಿದು ಸ್ವಾಗತಿಸಿ ಏನು ಬೇಕು ಎಂದು ಕೇಳಿದ.

"ಬಾಡಿಗೆಗೆ ರೂಮು ಇದೆಯೆ?"

"ಡಬ್ಬಲ್ ರೂಮು ಇಲ್ಲ, ಎಲ್ಲವೂ ಸಿಂಗಲ್ ರೂಮುಗಳು."

ರೋಗಿ ಬಯಸಿದುದೂ ಅದೇ, ವೈದ್ಯ ಹೇಳಿದುದೂ ಅದೇ!

"ನನಗೆ ಸಿಂಗಲ್ ರೂಮೇ ಬೇಕು"

ಎಂದಂದ ಶ್ರೀಕಾಂತ.

ಸಾಹುಕಾರ ಕೆಲಸದ ಆಳನ್ನು ಕರೆದು ಅವನ ಕೈಗೆ ಬೀಗದ ಕೈಗಳನ್ನಿತ್ತು ಹೇಳಿದ.

"ರಾಯರಿಗೆ ರೂಮುಗಳನ್ನು ತೋರಿಸು, ಅವರಿಗೆ ಯಾವುದು ಬೇಕೋ ಅದನ್ನು ಕೊಡು."

ಆಳಿನೊಂದಿಗೆ ಶ್ರೀಕಾಂತ ಮಾಳಿಗೆ ಮೆಟ್ಟಿಲನ್ನೇರಿದ.

ಒಂದಲ್ಲ, ಎರಡಲ್ಲ, ಹತ್ತಲ್ಲ, ಇಪ್ಪತ್ತು ರೂಮುಗಳು—ಎಲ್ಲವೂ ಖಾಲಿ!

ಸಾಕ್ಷಾತ್ ಸ್ವರ್ಗ! ಶ್ರೀಕಾಂತನಿಗೆ ಬಹು ಮೆಚ್ಚಿಗೆ ಆಯಿತು. ಎಲ್ಲವೂ ನಿಶ್ಶಬ್ದ, ನೀರವ, ಪಿಟ್ ಎಂಬ ಸದ್ದೂ ಇಲ್ಲ.

"ಇಲ್ಲಿ ಯಾರೂ ರೇಡಿಯೋ ಹಾಕುವುದಿಲ್ಲ ತಾನೇ?"

"ನಮ್ಮ ಓಟ್ಲಾಗೆ ರೇಡಿಯೋನೇ ಇಲ್ಲ"

ಆ ಆಳು ಹೇಳಿದ ಉತ್ತರ ಶ್ರೀಕಾಂತನ ಮನಸ್ಸಿಗೆ ಹರ್ಷವನ್ನು ಇತ್ತಿತು.

ಈ ಕಾಲದಲ್ಲಿ ಈ ಊರಲ್ಲಿ ಇಂತಹ ಹೋಟೆಲ್‌ಗಳೂ ಇವೆಯೇ? ರೇಡಿಯೋ ಇಲ್ಲದ ಹೋಟೆಲು, ಡ್ಯಾನ್ಸು ಇಲ್ಲದ ನಾಟಕ, ಘಂಟೆ ಇಲ್ಲದ

ದೇವಾಲಯ, ಗಲಾಟೆ ಇಲ್ಲದ ಬಾರ್‌ಗಳು ಇನ್ನೂ ಇವೆ ಹಾಗಾದರೆ? ಶ್ರೀಕಾಂತನ ಸಂತೋಷ ಎಷ್ಟು?

"ಬಾಡಿಗೆ ಎಷ್ಟು?"

"ಎರಡು ರೂಪಾಯಿ"

"ಅಷ್ಟೇನೇ!"

ಉದ್ಗಾರ ಅವನರಿಯದೆಯೇ ಅವನ ಬಾಯಿಂದ ಹೊರಬಿತ್ತು. ಇಪ್ಪತ್ತು ಕೊಡಲೂ ಸಿದ್ಧನಿದ್ದ ಶ್ರೀಕಾಂತ.

ಇಂತಹ ಪ್ರಶಾಂತವಾದ ವಾತಾವರಣ! ಸ್ಮಶಾನ ಮೌನ! ನನ್ನ ನಾಟಕ ಅರ್ಧ ಮುಗಿದಂತೆಯೇ ಆಯಿತು ಎಂದು ಹಿರಿಹಿರಿ ಹಿಗ್ಗಿದ.

"ಯಾವ ರೂಮ್ ಬೇಕು ಸ್ವಾಮೀ?"

ಶ್ರೀಕಾಂತ ತಲೆಯೋಡಿಸಿದ. ಕೊನೆಯಲ್ಲಿನ ರೂಮ್‌ಗಳಲ್ಲಿ ಗಾಳಿ, ಬೆಳಕು ಚೆನ್ನಾಗಿದೆ, ನಿಜ. ಆದರೆ ಆಚೆ ಬೀದಿಯ ಗದ್ದಲ ಕೇಳಿಸಬಹುದು. ಊಹುಂ, ಅವು ಬೇಡ. ಮಧ್ಯದ ರೂಮು ಕೋಟೆಯಂತಿದೆ. ಗಾಳಿ? ಫ್ಯಾನ್ ಹಾಕಿಕೊಂಡರಾಯಿತು. ಬೆಳಕು? ಎಲೆಕ್ಟ್ರಿಕ್ ಲೈಟ್ ಇದೆಯಲ್ಲ? ಅಲ್ಲದೆ ತಾನಿಲ್ಲಿಗೆ ಬರುವುದು ಕೇವಲ ರಾತ್ರಿ ಮಾತ್ರವೆ.

ತನ್ನ ಕೋಣೆಗೆ ಬೀಗಹಾಕಿಕೊಂಡ, ಹತ್ತು ದಿನದ ಬಾಡಿಗೆ ಇಪ್ಪತ್ತು ರೂಪಾಯಿ ಕೊಟ್ಟು ನಡೆದ.

ಸಂಜೆ ಊಟ ಬೇಗ ಮುಗಿಸಿದ. ಬಿಳಿ ಕಾಗದ, ಪೆನ್ನು ಕೈಯಲ್ಲಿ ಹಿಡಿದು ರೂಮಿಗೆ ಬಂದ. ಆ ಕೋಣೆಯನ್ನು ನೋಡಿದ ಒಂದು ಬಾರಿ, ಮನಸ್ಸು ಪ್ರಸನ್ನವಾಯಿತು. ಆ ಹಾಳು ಹೆಂಡತಿಯ ಮುಖವಿಲ್ಲ, ಮಕ್ಕಳ ಗಲಭೆ ಇಲ್ಲ. ಸುತ್ತಲೂ ಮೌನ. ಇಡೀ ಮಾಳಿಗೆಗೆ ತಾನೇ ತಾನು. ಸ್ಫೂರ್ತಿ ಉಕ್ಕಿತು.

ಮೇಜಿನ ಮುಂದೆ ಕುಳಿತ. ಬಿಳಿ ಕಾಗದದ ಮೇಲೊಂದು ಶ್ರೀಕಾರ ಮೂಡಿಸಿ ಕಣ್ಣೆಗೊತ್ತಿಕೊಂಡ. ಭಾವಾವೇಶದಲ್ಲಿ ಕುಳಿತು ಮೂಗಿಗೆ ಬೆರಳಿಟ್ಟ. ಪಾತ್ರಗಳು—ಗಂಡೆಷ್ಟು? ಹೆಣ್ಣೆಷ್ಟು? ಹೀಗೆಯೇ ಏನೇನೋ ಗೊಂದಲ ದಲ್ಲಿತ್ತು ಶ್ರೀಕಾಂತನ ತಲೆ.

ಆಚೆ ಕೋಣೆಯಿಂದ ಪಿಸಿಪಿಸಿ ಮಾತಾಡಿದ ಸದ್ದು !

ಯಾವಾದರೂ ಪಿಶಾಚಿಗಳು ಬಂದುವೋ ? ಆಶ್ಚರ್ಯದಿಂದ ಹೊರಬಂದು ನೋಡಿದ. ಕೋಣೆಯಲ್ಲಿ ದೀಪವಿತ್ತು, ಧ್ವನಿಗಳಿಂದ ಒಂದು ಗಂಡು ಇನ್ನೊಂದು ಹೆಣ್ಣು ಇರಬೇಕು ಎಂದು ಊಹಿಸಿದ. ಯಾರೋ ಗಂಡ, ಹೆಂಡತಿ ಇರಬೇಕು ಎಂದಂದುಕೊಂಡು ತನ್ನ ಕೋಣೆಗೆ ಬಂದ. ಬಾಗಿಲನ್ನು ಮುಚ್ಚಿ ಮೇಜಿನ ಮುಂದು ಬಂದ. ಅವನಿಗೆ ಸ್ಫೂರ್ತಿಯ ಕೊರತೆಯೆ ? ತಲೆಯಲ್ಲಿ ನಾಟಕವು ರೂಪುಗೊಂಡಿತು. ಸ್ತುತಿಪದವೊಂದನ್ನು ಬರೆಯಲುದ್ಯುಕ್ತನಾದ.

ಈಚೆಯ ರೂಮಿನಿಂದ ಒಂದು ಹೆಣ್ಣು ಕಿರಿಚಿಕೊಂಡ ಸದ್ದು. ಓಡುತ್ತ ಹೊರ ಬಂದ. ಕೋಣೆಯಲ್ಲಿ ದೀಪವಿತ್ತು. ಒಂದು ಗಂಡು ಕುಡಿತದ ಅಮಲಿನಲ್ಲಿ ಅವಳ ಮೇಲೇರಿ ಹೋಗುತ್ತಿತ್ತು, ಆ ಹೆಣ್ಣು ತಕರಾರು ಮಾಡುತ್ತಿತ್ತು—ಪ್ರಾಯಶಃ ಹಣಕ್ಕಾಗಿ.

ಹಾಳಾಗಿ ಹೋಗಲಿ ಈ ಜನ ಎಂದು ಬಾಯಲ್ಲಿಯೇ ಅಂದುಕೊಳ್ಳುತ್ತ ತನ್ನ ಕೋಣೆಗೆ ಬಂದು ಕುರ್ಚಿಯಲ್ಲಿ ಕುಳಿತ. ಐದು ನಿಮಿಷಗಳೂ ಆಗಿಲ್ಲ. ಒಂದು ಹೆಣ್ಣು ಕಿಲಕಿಲನೆ ನಕ್ಕಿತು ಹತ್ತು ಹದಿನೈದು ನಿಮಿಷಗಳೊಳಗಾಗಿ ಆ ಹತ್ತೊಂಭತ್ತು ರೂಮುಗಳಲ್ಲಿಯೂ ಒಂದೇ ಕಥೆ. ಹೌದು, ಇದು ಮೇನಕಾ ಲಾಡ್ಜು !

ಶ್ರೀಕಾಂತನ ಮನಸ್ಸಿಗೆ ಅದೇನಾಯಿತೋ ? ಕೂಡಲೇ ಎದ್ದು, ಕೋಣೆಗೆ ಬೀಗ ಹಾಕಿ ನೇರವಾಗಿ ಮನೆಗೆ ಬಂದ. ಹೆಂಡತಿ ಬಾಗಿಲು ತೆರೆದಳು. ಹೌದು, ಅದೇ ಕುರೂಪಿ ಹೆಂಡತಿ. ಆದರೆ ಶ್ರೀಕಾಂತನ ಕಂಣಿಗೆ ? ಸಾಕ್ಷಾತ್ ರಂಭೆಯಂತೆ ಕಂಡಳು. ಆ ರಾತ್ರಿಜೀವಿಗಳಿಂದ ತನಗಾದ ಉಪಕಾರದ ಅರಿವು ಇದೆಯೇ ಶ್ರೀಕಾಂತನ ಹೆಂಡತಿಗೆ ?

ನಾಟಕ ? ಇನ್ನೆಲ್ಲಿಯ ನಾಟಕ ? ಈ ಜೀವನ ನಾಟಕದಲ್ಲಿ ಅದು ಬರೆಯದ ನಾಟಕವಾಗಿಯೇ ಉಳಿಯಿತು.

# ಪಿಂಚಿನಿ ಭಕ್ತಿ

"ತಂದಿ ಅಂದ್ರೆ ಏನು ತಿಳಿದಿ ರಾಮುಂಣಾ ?"

"ತಿಳದೀನಿ ತಿಳದೀನಿ. ತಂದಿ ಅಂದ್ರೆ ಹಂದಿ."

"ನಾರಾಯಣ ನಾರಾಯಣ"

ಬಾಯಲ್ಲಿಯೇ ಅಂದುಕೊಂಡಳು ತುಳಸವ್ವ. ಮುದುಕಮ್ಮ ಗಲ್ಲಗಲ್ಲ ಹಾಕಿಕೊಂಡಳು, ಮಗನಿಗೆ ಪಾಪ ಬಂದೀತೆಂಬ ಭಯದಿಂದ. ಭಾಗವತ ಪುರಾಣ ಕೇಳುತ್ತಲೆ ಮುದುಕಿಯಾದಾಕೆ ತುಳಸವ್ವ

"ಹಾಗನಬಾರದಪ್ಪಾ, ಒಳತು ಅನ್ನು. ತಂದಿ ಅಂದ್ರೆ ಜನಕನ ಸಮಾನ"

ರಾಮಾಚಾರಿಗೆ ರೇಗಿತು ಕೊಂಚ.

"ಬಾಯಿ ಮುಚ್ಚಿಗೊಂಡು ಬಿದ್ದಿರು ಮೂಲ್ಯಾಗೆ. ಜನಕ ಅಂತೆ ಜನಕ. ಆ ನಿನ ಗಂಡ ಜನಕ ಅಲ್ಲ, ಆಮ್ಲ ಜನಕ."

ಆಮ್ಲ ಜನಕ ಅಂದರೆ ಆ ತುಳಸವ್ವನಿಗೆ ಏನರ್ಥವಾಗಬೇಕು ?

"ಹಾಗೇ ಮಾಡು. ಎಂಥಾ ಜನಕನೇ ಆಗಲಿ, ಜನಕ ಅಂತೂ ಹೌದಲ್ಲೊ ?"

ಸಂಧ್ಯಾವಂದನೆಗೆ ಸಿದ್ಧವಾಗುತ್ತಿದ್ದ ಕ್ರಿಷ್ಟಾಚಾರಿಗೆ ಪಿತ್ಥ ನೆತ್ತಿಗೇರಿತು. ಅಂಣನ ಮೇಲೆ ಕಂಣು ಕಿಸಿದ.

"ಅಪ್ಪ ಅಂಬೋ ಆ ಸೂಳೇಮಗನ ಸುದ್ದಿ ನನ್ನ ಮನಿಯಾಗೆ ಆಡಬ್ಯಾಡ್ರಿ

ಅಂತ ಎಷ್ಟು ಸಾರಿ ಹೇಳೀನಿ ನಿಮಗೆ? ತಾಯಿ ಅನ್ನೋ ಮುದಿ ಮುಂಡೇ ಮಗಳಿಗಂತೂ ಬುದ್ಧಿ ಇಲ್ಲ ಅಂದ್ರೆ ನಿಂಗೂ ಬುದ್ಧಿಲ್ಲೇನು ರಾಮಣ್ಣಾ ?"

"ನಾ ತಗದ್ನೇನೋ ಆ ಭ್ರಷ್ಟ ಮುಂಡೇಮಗನ ಸುದ್ದೀನ? ಈಕಿ-ಈಕಿ ಇನ್ನೂ ಬದುಕ್ಯಾಳಲ್ಲಾ, ಭೂಮಿಗೆ ಭಾರ, ಕೂಳಿಗೆ ದಂಡಾಗಿ—ಈಕೀನೆ ತಗದ್ಳು. ನಂಗೇನು ಬೇಕೋ, ಆ ಮನಿಹಾಳನ ಮಾತು? ಎಂದು ಅವನು ಮನಾಗಿನ ನಾಗಮುರಿಗಿ ಒಯ್ದು ಆ ಸ್ಮಾರ್ತ ರಂಡೀಗೆ ಕೊಟ್ಟನೋ ಅವತ್ತೆ ಆವನು ಸತ್ತ ನನ್ನ ಪಾಲಿಗೆ."

ತುಳಸವ್ವನ ಕಂಣು ನೀರೊಡೆಯಿತು. ಗಂಟಲು ಹಿಡಿಯಿತು.

"ಹಾಗೆಲ್ಲ ಕೆಟ್ಟ ಮಾತು ಆಡಬಾರದು. ದೇವತೆಗಳು ಸದಾ 'ತತಾಸ್ತು, ತತಾಸ್ತು' ಅನ್ನತಿರತಾರಂತೆ. ನಿಮಗೆ ಬ್ಯಾಡ ಆದವರಾಗಿ ಆದರೂ ಎಲ್ಲಾದರೂ ಬದಕಿರತಾರೆ. ನೀವ್ಯಾಕೆ ಸತ್ತ ಸತ್ತ ಅಂತೀರಪ್ಪಾ? ಮಕ್ಕಳು ಅಂಬೋ ಮಾತೇನು ಇದು?"

"ಸತ್ತ ಸತ್ತ ಸತ್ತ. ಒಂದು ಬ್ಯಾರಿ ಅಲ್ಲ, ಮೂರು ಮೂರು ಬ್ಯಾರಿ ಅಂತೀನೇ. ಆ ಅಪ್ಪಾ ಅಂಬೋವ್ನು ಸತ್ತ, ನೀನೂನೂ ಸಾಯಿ—ತಾಯಿ, ಖೊಬ್ರೀ ತಾಯಿ ಅಂಬಾಕಿ"

ಕ್ರಿಷ್ಣಾಚಾರಿಯ ಸಂಧ್ಯಾವಂದನೆಗೆ ಇದೇ ಕೇಶವ, ನಾರಾಯಣ. ಹೆತ್ತ ತಂದೆ ತಾಯಿಗಳಿಗೆ ಶಾಪ, ಕಾಣದ ಕೇಶವ ನಾರಾಯಣರಿಗೆ ನಮಸ್ಕಾರ. ದೇವರು ದಡ್ಡನಲ್ಲ ಎಂಬುದಕ್ಕೆ ಬೇರಾವ ಪುರಾವೆ ಬೇಕು? ದೇವರು ದಡ್ಡನಲ್ಲ ಅಥವಾ ಪುಕ್ಕಲು. ಭಕ್ತಾದಿಗಳ ಕಣ್ಣಿಗೆ ಬಿದ್ದರೆ ಸರ್ವಜ್ಞಾಚಾರಿ, ತುಳಸವ್ವರ ಗತಿಯೇ ಆತನಿಗೂ ಎಂಬುದು ಗೊತ್ತು.

ಜಗತ್ತನ್ನೆಲ್ಲಾ ಸೃಷ್ಟಿಸಿದ ದೇವನಿಗೆ ಒಂದು ಬಾರಿ ಆಶೆ ಆಯ್ತಂತೆ—ತಾನು ಸೃಜಿಸಿದ ಜಗತ್ತು ಹೇಗಿದೆಯೋ ನೋಡಬೇಕೆಂದು. ಸಹಜವಾದ ದೌರ್ಬಲ್ಯ, ಪಾಪ! ಥಕ್ಕನೆ ಒಂದು ಆಲೋಚನೆ ಹೊಳೆಯಿತು ಆ ಚುರುಕು ಮತಿಗೆ ಅಲ್ಲಿದ್ದ ಪ್ರಜೆಗೆ ಮಕ್ಕಳನ್ನಿತ್ತ, ಅವಕ್ಕೆ ಹೇಳಿದ—ಮಾತೃದೇವೋ ಭವ, ಪಿತೃದೇವೋ ಭವ ಎಂದು. ಪರಿಣಾಮಕ್ಕಾಗಿ ಕಾದು ನಿಂತ.

ಆ ಮಕ್ಕಳು ತಂದೆ, ತಾಯಿಗಳನ್ನು ಗೌರವದಿಂದ ಹಂದಿ ಅಂದರು, ನಾಯಿ ಅಂದರು. ದೇವರಿಗೆ ಬುದ್ಧಿ ಬಂತು. ಭೂಲೋಕಕ್ಕೆ ಹೋಗುವುದೇ ಬೇಡ ಎಂದು ತನಗೆ ತಾನೇ ಹೇಳಿಕೊಂಡು ಹಾಯಾಗಿ ತಲೆಮರೆಸಿ ಪಾರಾದ. ಇದು ಯಾರೋ ಹೇಳಿದ ಕಟ್ಟು ಕಥೆ ಅಲ್ಲ, ಸತ್ಯ ಸಂಗತಿ–ಅಂತೆ !

ಸರ್ವಜ್ಞಾಚಾರಿಯ ವೃತ್ತಾಂತವೇನು ? ಹುಟ್ಟುತ್ತಲೆ ಶ್ರೀಮಂತ— ಶ್ರೀಮಂತರ ಮಕ್ಕಳಿಗೆ ಕೆಡಲು ಬೇಕಾಗುವ ಎಲ್ಲ ಸೌಲಭ್ಯಗಳೂ ಸರ್ವಜ್ಞಾಚಾರಿಗೂ ದೊರೆತುವು. ಕೇಳಿದಾಗೆಲ್ಲ ಹಣ, ಮೇಲೆ ಕದಿಯಲೂ ಹಣ. ಆ ಹಣವನ್ನು ಕರ್ಚುಮಾಡಲು ಸಮಯವೆ ? ಶಾಲೆಗೆ ಚಕ್ಕರ್, ಜೇಬಿನಲ್ಲಿ ಹಣ ವಿದ್ದರೆ ಗೆಳೆಯರಿಗೆ ಕೊರತೆಯೆ ? ಒಂದು ಬೀಡಿ ಎಳೆಯುವುದರಿಂದ ಯಾರೂ ಸತ್ತಿಲ್ಲ ನಿಜ, ಆದರೆ ಒಂದೇ ಬೀಡಿಗೆ ನಿಲ್ಲಿಸಿದವರಾರು ? ವಯಸ್ಸಿಗೆ ಮೀರಿದ ಅಭ್ಯಾಸಗಳು ಕರೆಯದಲೆ ಬಂದುವು. ಸರ್ವಾಜ್ಞಾಚಾರಿಗೆ ಜೈನರ ಬಸದಿ ಈಸ್ಪೀಟು ಆಡಲು ಬಾಡಿಗೆ ಇಲ್ಲದ ಕ್ಲಬ್ಬು ಆಯಿತು.

ಇದನ್ನು ತಿಳಿದ ತಂದೆ ಮಗನ ಮೇಲೆ ಕಿಡಿಕಿಡಿಯಾದರು.

"ನೀನು ಈಸ್ಪೀಟು ಆಡು. ಲೆಕ್ಕಿಮುಷ್ಟಿ ಆಡು. ಅದಕ್ಕೆ ನಾ ಬ್ಯಾಡ ಅಂಬೋದಿಲ್ಲ. ನಾನೂ ಇವೆಲ್ಲಾನೂ ಮಾಡೀನಿ. ಆ ಸುಡುಗಾಡು ಜೈನರ ಬಸಿದೀವಳಿಗೆ ನಾವು—ಬ್ರಾಂಬ್ರು—ಕಾಲಿಡೋದು ಉಂಟೇನೋ, ಸರ್ವಜ್ಞಾ ? ಎರಡು ಸಾವಿರ ನಿನ್ನ ಹೆಣಕ್ಕಿಟ್ಟು ತಿರುಪತೀವಳಿಗೆ ಮುಂಜಿ ಮಾಡಿದೆನಲ್ಲೋ ? ಬಸದೀವಳಿಗೆ ಹೋದರೆ ಮತ್ತೆ ಮುಂಜೀ ಮಾಡಬೇಕು. ಗೊತ್ತೇನು ? ಹನುಮಪ್ಪನ ಗುಡಿ ಹಾಳಾಗಿ ಹೋಗ್ಯದೇನು ?"

ತಂದೆ ರಾಮಾಚಾರ್ಯರು ತಮ್ಮ ಏಕಮಾತ್ರ ಪುತ್ರನಾದ ಸರ್ವಜ್ಞಾಚಾರಿಗೆ ಮಾಡಿದ ಉಪದೇಶದ ಸಾರಾಂಶ ಇದು.

ಪಿತೃವಾಕ್ಯ ಪರಿಪಾಲನೆ ಮಾಡಿದ ಸರ್ವಜ್ಞ. ಎಲ್ಲವನ್ನೂ ತಮ್ಮ ಸ್ವಂತ ದೇವರಾದ ವಾಯುಪುತ್ರನ ಸನ್ನಿಧಿಯಲ್ಲಿಯೇ ಮಾಡಿದ. ಈಸ್ಪೀಟಿಗೆ ಪರವಾನಿಗೆ ಕೊಟ್ಟ ಮುಖ್ಯಪ್ರಾಣ ಹೆಣ್ಣಿಗೆ ಏಕೆ ಕೊಡಬಾರದು ? ಮನೆ ಕೆಲಸದ ಇಮಾಂಬಿಯ ಸರ್ವಸ್ವದ ಪರಿಚಯ ಸರ್ವಜ್ಞನಿಗಾದುದು ಇದೇ ಆಂಜನೇಯ ಸ್ವಾಮಿಯ ನೇತೃತ್ವದಲ್ಲಿಯೇ. ಏನೆಲ್ಲವನ್ನೂ ತೆಪ್ಪಗೆ ಸಹಿಸಿದ್ದ ಬ್ರಹ್ಮಚಾರಿ

ಯಾದ ಹನುಮಂತನಿಗೆ ಇದೊಂದನ್ನು ಮಾತ್ರ ನೋಡುವುದು ಅದೇಕೆ ಕಷ್ಟ ವಾಯಿತೋ ! ಅಸೂಯೆಯೇ ? ದೇವರಿಗೂ ಅಸೂಯೆ ಎಂದನ್ನುವುದು ಮಾನವ ಕ್ರಿಮಿಗಳಾದ ನಮಗೆ ಸರಿಯಲ್ಲ. ಅಂತೂ 'ಇದನ್ನು ನೋಡಲಾರೆ' ಎಂದು ಥಟ್ಟನೆ ಅತ್ತ ಮುಖ ತಿರುವಿದ. ಇಂದಿಗೂ ಆಂಜನೇಯನ ಮುಖ ಹಾಗೇ ಇದೆ ಇದೂ ಕೂಡಾ ಯಾರೊ ಹೇಳಿದ ಕಟ್ಟುಕಥೆ ಅಲ್ಲ, ಸತ್ಯ ಸಂಗತಿ—ಹನುಮಪ್ಪ ಅತ್ತ ಮುಖ ತಿರಿವಿರುವದೇ ಇದಕ್ಕೆ ಸಾಕ್ಷ ಅಂತೆ.

ತತ್ಸಂಬಂಧ ವಿಷಯದಲ್ಲಿ ತಂದೆ, ಮಗನಿಗೆ ಹಣಾಹಣಿ ಯುದ್ಧವೇ ಆಯಿತು ಒಂದು ಬಾರಿ. ಸರ್ವಜ್ಞಾಚಾರಿಯು ಕಂಠ ಬೃಹತ್ಕಂಠ. ನಡುಬೀದಿ ಯಲ್ಲಿ ನಿಂತು ತಂದೆಯ ಇದ್ದ ಕೊಂಚ ಮಾನವನ್ನು ಕಾಸಿಗೆ ಸಂಭೇರಿನಂತೆ ಬಿಕರಿ ಮಾಡಿದ.

"ನಿನ್ಕಥೀ ನಂಗೆಲ್ಲಾ ಗೊತ್ತದೋ ? ನೀನು ಮಡಿ ಉಟ್ಟುಗೊಂಡೇ ಏನೇನೋ ಮಾಡ್ತೀದಿ ಅಂಬೋದು ನಂಗೂ ಗೊತ್ತು. ಒಂದೊಂದೇ ಪಟ್ಟಿ ಮಾಡಿ ಹೇಳ್ಲೇನು ?"

ಪಟ್ಟಿಮಾಡಿ ಹೇಳಿಯೂ ಬಿಟ್ಟ–ಮಾಜಿ ಮುತ್ತೈದೆಯರ ಹೆಸರು ಗಳೆಲ್ಲವೂ ಸಾಲಾಗಿ ಹೊರಬಂದುವು. ಆಗ ತಂದೆಗೆ ಜ್ಞಾನೋದಯವಾಯಿತು. ಹಿರಿಯಾಚಾರ್ಯರು ಮಗನ ಮದುವೆಯ ಯೋಚನೆ ಮಾಡಿದರು. ಆಗಲೇ ಅಲ್ಲವೆ, ಕೇಳಿದಷ್ಟು ವರದಕ್ಷಿಣೆ ಸುರಿವಿ ತುಳಸವ್ವ ಸರ್ವಜ್ಞಾಚಾರಿಯೆಂಬ 'ವರಾಹ'ನ ಕೈ ಹಿಡಿದುದು ? ಮದುವೆಯ ಸಮಯಕ್ಕೆ ಸರ್ವಜ್ಞಾಚಾರ್ಯರ ಆರೋಗ್ಯ ಗುಟ್ಟಾಗಿ ಡ್ಯಾಮೇಜ್ ಆಗಿತ್ತು. ರಾಮಭಟನಾದ ಆಂಜನೇಯ ಸ್ವಾಮಿಯ ಸನ್ನಿಧಿಯಲ್ಲಿಯೇ ಆಗಿತ್ತು.

ತುಳಸವ್ವನ ತಂದೆಯ ಮುಂದೆ ಅದಾರೊ ಈ ವಿಷಯವನ್ನು ಪ್ರಸ್ತಾಪ ಮಾಡಿದರು.

"ಹಾಸಿಗೀ ಶಾಸ್ತ್ರ ಮುಂದಕ್ಕೆ ಹಾಕ್ರಿ. ನಿಮ್ಮ ಅಳಿಯನಿಗೆ ಔಷಧಿ ಕೊಡಿಸ್ರಿ"

"ಅದೆಲ್ಲ ಏನು ಮಾಡ್ತದೆ ನೀನು ?"

ಅದೇನೂ ಮಾಡಲಿಲ್ಲ. ಸರ್ವಜ್ಞಾಚಾರ್ಯರಿಗೆ ರಾಮ, ಕೃಷ್ಣರು ಹುಟ್ಟಿದರು.

ತುಳಸವ್ವನಿಗೆ ಅನುಗಾಲವೂ ಒಂದಲ್ಲ ಒಂದು ಕಾಯಿಲೆ. ಈ ಏಕ ಮಾತ್ರ ಕ್ಷುಲ್ಲಕ ಕಾರಣಕ್ಕಾಗಿ ಸರ್ವಜ್ಞಾಚಾರ್ಯರು ಸಂನ್ಯಾಸಿಯಂತಿರಲು ಸಾಧ್ಯವೇ ? ತುಳಸವ್ವ ಆರೋಗ್ಯವಂತಳಾಗಿದ್ದರೂ ಇದು ಆಗುತ್ತಿತ್ತು. ಈಗ ಇನ್ನೊಂದು ಹೆಚ್ಚಿನ ಕಾರಣವೂ ದೊರೆಯಿತು. ಹರಿಸರ್ವೋತ್ತಮ ವಾಯು ಜೀವೋತ್ತಮರಿಂದ ಬಂದ ಆ ದೇಹಕ್ಕೆ ಯಾವುದನ್ನೂ ಇಲ್ಲ ಅನ್ನುವ ಅವಿವೇಕ ವನ್ನು ಆಚಾರ್ಯರು ಮಾಡಲಿಲ್ಲ. ಬೇಕು ಅಂದಾಗ ಮಾತ್ರವಲ್ಲ, ಸಾಕು ಸಾಕು ಅನ್ನುವಷ್ಟು ಸುಖವನ್ನು ಸಪ್ಲೈ ಮಾಡಿ ದೈವದತ್ತವಾದ ದೇಹವನ್ನು ಮಹದಾನಂದದಲ್ಲಿಟ್ಟರು. ಸರ್ವಜ್ಞಾಚಾರ್ಯರಿಗೆ ಅಡ್ಡಿ ಮಾಡುವವರಾರು ? ತುಳಸವ್ವ ಒಂದು ಮೂಕ ಪ್ರಾಣಿ, ರಾಮ ಮತ್ತು ಕೃಷ್ಣ ಇನ್ನೂ ಚಿಕ್ಕವರು. ಚಿಕ್ಕವರು ಅಂದರೆ ಪೂರ್ತಿ ಚಿಕ್ಕವರಲ್ಲ. ಅರ್ಥ ಮಾಡಿಕೊಳ್ಳುವಷ್ಟು ದೊಡ್ಡ ವರು, ತೆಪ್ಪಗಿರುವಷ್ಟು ಚಿಕ್ಕವರು.

ಆಗಲೇ ಸರ್ವಜ್ಞಾಚಾರ್ಯರಿಗೆ ಸ್ಮಾರ್ತರ ಹನುಮಂತಿಯ ನೇಹ ವಾದುದು. ಧರ್ಮ ಕರ್ಮ ಸಂಯೋಗದಿಂದ ಆದ ಇವರ ಮಿಳನ ಪ್ಲೇಗಿಗೆ ಕಾಲರಾ ಸೇರಿದಂತಾಯಿತು. ಶ್ರೀಮಂತ ಗಂಡು ಕೈಗೆ ಸಿಕ್ಕಾಗ ಯಾವ ವ್ಯಭಿ ಚಾರೀ ಹೆಂಣು ನನಗೆ ನಿನ್ನ ಕಾಸುಬೇಡ ಅಂದೀತು ? ಹಸಿದ ಬ್ಲಾಟಿಂಗ್ ಪೇಪರ್ ಮಸಿಯನ್ನು ಹೀರುವಂತೆ ಸಕೇಶಿ ಹನುಮಂತಿ ಸರ್ವಜ್ಞಾಚಾರಿಯಿಂದ ಹಣವನ್ನು ಹೀರಿದಳು. ತುಳಸವ್ವನ ಪೀತಾಂಬರ, ಭಾರೀ ಕುಬುಸ ಇನ್ನೂ ಏನೇನೋ ಸರ್ವಜ್ಞಾಚಾರ್ಯರು ದಾನ ಮಾಡಿದರು, ಗರ್ಭಾದಾನದೊಂದಿಗೆ.

ಅಕ್ಕಪಕ್ಕದ ಮನೆಗಳು—ಎರಡು ಮನೆಗಳ ಮಧ್ಯೆ ಒಂದು ಸೇದುವ ಭಾವಿ. ಈ ಕಡೆ ಸರ್ವಜ್ಞಾಚಾರ್ಯರು ಆಕಡೆ ಹನುಮಂತಿ.

"ಹೂ, ಹಿಡಿ ಹಿಡಿ" ಎಂದಂದು ವಿಪ್ರೋತ್ತಮರು ಹೆಂಡತಿಯ ನಾಗ ಮುರಿಗೆಯನ್ನು ಮುಷ್ಟಿಯಲ್ಲಿ ಹಿಡಿದು ಹನುಮಂತಿಯ ಕೈಗೆ ಕೊಟ್ಟುದನ್ನು ಹನ್ನೆರಡು ವರ್ಷದ ಹುಡುಗ ರಾಮ ಕದ್ದು ನೋಡಿದ್ದ. ಆಡಲು ಈಗ ಬಾಯಿ



ಹೂಂ, ಹಿಡಿ....ಹಿಡಿ....

ಇಲ್ಲ ನಿಜ. ಆದರೆ ಗ್ರಹಿಸುವ ಬುದ್ಧಿ ಇಲ್ಲವೇ? ಅಂದೇ ತಂದೆಯ ಬಗ್ಗೆ ರಾಮನ ಮನಸ್ಸು ಕಹಿ ಆಯಿತು.

'ಬೋಳೀಮಗ! ನಮ್ಮನ್ಮುಂದು ಆಕೀಗೆ ಕೊಡ್ತಾನೆ'

ಎಂದು ಅಂದು ಬಾಯಲ್ಲಿ ಅಂದುಕೊಂಡಿದ್ದ, ಇಂದು ಅದೇ ಮಾತು ತುಟಿಯ ಹೊರಗಡೆ ಬಂದರೇನಾಶ್ಚರ್ಯ?

ಊರಲ್ಲಿ ಪುರಾಣ, ಹರಿಕಥೆಗಳಾದರೆ ಹಿರಿಯಾಚಾರ್ಯರಾದ ಸರ್ವಜ್ಞಾಚಾರ್ಯರಿಗೆ ಅಗ್ರಪೀಠ. ಆಚಾರ್ಯರಿಲ್ಲದೆ ಊರಲ್ಲಿ ಯಾವ ಧಾರ್ಮಿಕ ಕಾರ್ಯಗಳೂ ಆಗುವಂತಿಲ್ಲ. ವೆಂಕಟೇಶ್ವರ ದೇವಸ್ಥಾನದಲ್ಲಿ ಒಂದುಬಾರಿ ಮುಳಗುಂದ ರಾಮಶಾಸ್ತ್ರಿಗಳ ಹರಿಕಥೆ. ಶಾಸ್ತ್ರಿಗಳ ಪೀಠಿಕೆ ಅವರ ಕಥೆಗಿಂತಲೂ ಹೆಚ್ಚು ರುಚಿ ಎಂಬ ಪ್ರತೀತಿ ಇತ್ತು. ಅದು ನಿಜವೂ ಹೌದು.

ತನ್ನ ಸತಿಯಳ ಬಿಟ್ಟು ಪರಸತಿಯಳ ನೋಡೇ ಸಂಸಾರ ಹಾನಿಯಾಗುವುದು ಒಂದೂಊ!

ಎಂದ ರಾಗವಾಗಿ ಎಳೆದು ಶಾಸ್ತ್ರಿಗಳು ಹಾಡಿದಾಗ ಸರ್ವಜ್ಞಾಚಾರ್ಯರ ಮೂಗಿನ ಮೇಲೆ ಒಂದು ನೊಣ ಕೂತಿತು. ಹುಬ್ಬು ಮೇಲ ಹೋದುವು, ಹಣೆಯ ಮೇಲೆ ಹೊಸ ಗೆರೆಗಳು ಮೂಡಿದುವು. ರಾತ್ರಿ ಎಲ್ಲವೂ ವಿಪ್ರವರ್ಯರಿಗೆ ಅದೇನೇನೋ ಯೋಚನೆ ಸಂಸಾರ ಹಾನಿಯಾಗುತ್ತದೆಂದರೆ ಯಾರಿಗೆ ತಾನೇ ಯೋಚನೆ ಆಗದಿರಲು ಸಾಧ್ಯ? ಸೂಕ್ಷ್ಮಮತಿಗಳಾದ ಸರ್ವಜ್ಞಾಚಾರ್ಯರಿಗೆ ಥಟ್ಟನೆ ಒಂದು ಉಪಾಯ ಹೊಳೆಯಿತು. ಹೆಸರೇ ಸರ್ವಜ್ಞ!

ತನ್ನ ಸತಿಯಳ ಬಿಟ್ಟು ಪರಸತಿಯಳ ನೋಡೇ ...ಅಲ್ಲವೇ? ತನ್ನ ಸತಿಯಳನ್ನು ಬಿಡದೆ ಪರಸತಿಯಳನ್ನು ನೋಡಿದರೆ? ಆಚಾರ್ಯರ ಅನುಕೂಲ ಸಿಂಧುವಿನಲ್ಲಿ ಪರಾರಿ ಮಾರ್ಗವೊಂದು ಸಿಕ್ಕೇ ಹೋಯಿತು. ಇದರ ಪುಣ್ಯ ಫಲವಾಗಿ ತುಳಸವ್ವ ಮೂರನೆ ಬಾರಿ ಗರ್ಭವತಿ.

ಈ ಸಮಯಕ್ಕಾಗಲೆ ಆಚಾರ್ಯರ ಕೈ ಖಾಲಿ, ಸರ್ವಜ್ಞಾಚಾರ್ಯರು ಸುಧಾಮಾಚಾರ್ಯರಾಗಿದ್ದರು. ವೈಶ್ಯರ ಮನೆಗಳ ಪೌರೋಹಿತ್ಯದಿಂದಲೇ ಅನ್ನ, ಅಂದಿನ ಗ್ರಾಸದ ಗಳಿಕೆ ಅಂದೇ ಆಗಬೇಕು. ಈ ಸಂಪತ್ತಿಗೆ ಹೆಂಡತಿಯ

ಬಾಣಂತನ ? ಹನುಮಂತಿ ಇತ್ತ ತಿರುಗಿಯೂ ನೋಡಲಿಲ್ಲ. ಅವಳಿಗೆ ಬೇರೆ ಇನ್ನೊಂದು ಮುನಿಸಿಪರ್ಸ್ ಸಿಕ್ಕಿದ್ದಿತು. ಬಹು ಪರ್ಸಾನಿ ವಸುಂಧರಾ !

೧೯೪೨ರ ಭಾರತೀಯ ಆಂದೋಳನ ಎಂತೆಂತಹವರಿಗೆಲ್ಲ ರಕ್ಷಣೆಕೊಟ್ಟಿತು. ಕೊಲೆ, ಸುಲಿಗೆ, ದರೋಡೆ ಮಾಡಿದವರೆಲ್ಲ ದೇಶಭಕ್ತರಾದರು. ಒಬ್ಬ ನಾಮೂಲಿ ವ್ಯಭಿಚಾರೀ ಆಚಾರ್ಯರಿಗೆ ಇಲ್ಲ ಅಂದೀತೆ ? ಜೇಲಿಗೆ ಹೋದರೆ ಜಾತಿಯ ಗತಿ ? ಸೀತಿಗೆ ಎಂದೋ ತಿಲಾಂಜಲಿಯನ್ನು ಬಿಟ್ಟಿದ್ದ ಸರ್ವಜ್ಞಾಚಾರ್ಯರು ಅಷ್ಟು ಸುಲಭವಾಗಿ ಜಾತಿಯನ್ನು ಬಿಡಲು ಸಾಧ್ಯವೇ ? ಆಚಾರ್ಯರು ಭೂಗತರಾದರು. ಹೊಳೆ ಆಚೆಯ ಒಂದು ಹಳ್ಳಿಯನ್ನು ಸೇರಿ ಅಲ್ಲೊಬ್ಬ ದೇಸಾಯರ ಮನೆಯಲ್ಲಿ ಅಡುಗೆಗೆ ನಿಂತರು. ಇದವರ ದೇಶಸೇವೆ !

ಇದೆಲ್ಲವೂ ಯಾವ ಕಾಲದ ಕಥೆ ? ಅವರ ಮಕ್ಕಳಾದ ರಾಮಾಚಾರಿ ಕೃಷ್ಣಾಚಾರಿ ಈಗ ನಡುವಯಸ್ಸಿನವರು. ಅವರಿಗೂ ಮಕ್ಕಳಾಗಿವೆ ಮನೆ ತುಂಬ. ಸರ್ವಜ್ಞಾಚಾರ್ಯರು ಸತ್ತಿದ್ದಾರೆಯೇ, ಬದುಕಿದ್ದಾರೆಯೇ ? ಯಾರಿಗೆ ಬೇಕೀ ಪ್ರಶ್ನೆಗೆ ಉತ್ತರ ? ಎಂದೋ ಸತ್ತ ಎಂದು ಜನ ಅಂದಿತು, ಎಲ್ಲೋ ಬದುಕಿದ್ದಾರೆ ಎಂದು ತುಳಸವ್ವ ನಂಬಿದಳು. ಈ ಗಂಡನನ್ನು ಬೈದರೆ ಹೆಂಡತಿಯಾದವಳಿಗೆ ದುಃಖವಾಗದೆ ?

ತುಳಸವ್ವ ಹೆತ್ತಿದ್ದ ಮೂರನೆಯದು ಹೆಣ್ಣು—ಹುಚ್ಚಿ. ಇದು ಸಾಯಲಿಲ್ಲ ವಲ್ಲಾ ಎಂಬುದೇ ರಾಮಾಚಾರಿ, ಕೃಷ್ಣಾಚಾರಿಯರ ವ್ಯಥೆ.

ಭಗವಂತ ಕಣ್ಣು ತೆರೆದ. ಆಗಾಗ ಕಣ್ಣು ತೆರೆವುದೇ ಆ ಭಗವಂತ ಇನ್ನೂ ಬದುಕಿದ್ದಾನೆಂಬುದಕ್ಕೆ ಸಾಕ್ಷಿ ! ನಮ್ಮದೇ ಸರಕಾರ, ನಮ್ಮವರೇ ಮಂತ್ರಿಗಳು. ಮಂತ್ರಿಗಳು ಬರೀ ನಮ್ಮವರು ಮಾತ್ರವಲ್ಲ, ಅವರೂ ನಮ್ಮಂಥವರೇ ನಮ್ಮಂಥವರು ಮಾತ್ರವಲ್ಲ, ಇನ್ನೂ ಅತ್ತತ್ತ ಅಂದರೂ ತಪ್ಪಲ್ಲ. ಕದ್ದ ಮಾಲನ್ನು ಕಳ್ಳರು ಹಂಚಿಕೊಳ್ಳುವುದರಲ್ಲಿ ತಪ್ಪೇನಿದೆ ? ದೇಶದ ಸಂಪತ್ತನ್ನು ತಂತಮ್ಮಲ್ಲಿಯೇ ಹಂಚಿಕೊಳ್ಳಲು ಮುಖಂಡರು ಮುಂದಾದರು ರಾಜಕೀಯ ಸಂತ್ರಸ್ತರು ಎಂದೆಂಬ ಹೊಸ ಜಾತಿಯೊಂದು ಹುಟ್ಟಿಕೊಂಡಿತು.

"ನಾನು ಮೂರು ವಾರ ಜೇಲಿನಲ್ಲಿದ್ದೆ"

"ಮೂರು ಘಂಟೆ ನಾನು ಪೋಲಿಸ್ ಲಾಕಪ್‌ನಲ್ಲಿದ್ದೆ"

"ಜಮಾದಾರ ನನ್ನನ್ನು ಬೂಟಿನಿಂದ ಹೊಡೆದ"

ಎಂದೆಲ್ಲ ಅರ್ಜಿಗಳಲ್ಲಿ ಬರೆದುಕೊಂಡರು. ಜಮಾದಾರ ಬೂಟಿನಿಂದ ಹೊಡೆದುದು ನಿಜ, ಆದರೆ ಯಾಕೆ ?

ರಾಜಕೀಯ ಸಂತ್ರಸ್ತರಿಗೆ ತಿಂಗಳಿಗೆ ಎರಡು ನೂರು ರೂಪಾಯಿ ಹರಾಮ ವೇತನ ಕೊಡುವುದಾಗಿ ಸರಕಾರ ಘೋಷಿಸಿತು. ಪತ್ರಿಕೆಯಲ್ಲಿ ಇದನ್ನು ಓದಿದೊಡನೆ ರಾಮಾಚಾರಿ, ಕೃಷ್ಣಾಚಾರಿಗಳಿಗೆ ತಂದೆಯ ಮೇಲೆ ಎಲ್ಲಿಲ್ಲದ ಭಕ್ತಿ ಉದ್ಭವಿಸಿತು. ಊರೂರುಗಳಿಗೆ ಹೋಗಿ ವಿಚಾರಿಸಿದರು. ತಿಂಗಳುಗಳು ಈ ಪಿತೃವಿಗಾಗಿ ಹುಡುಕಾಡಿದರು. ಸರ್ವಜ್ಞಾಚಾರಿ 'ಪಾರ್ಕಿನ್‌ಸನ್ಸ್ ಡಿಸೀಜ್' ಎಂಬ ಭಯಂಕರ ವ್ಯಾಧಿಯಿಂದ ನಿತ್ಯವೂ ಇಷ್ಟಿಷ್ಟು ಕೊಳೆತು ಸತ್ತ ಎಂದು ಅದಾರೋ ಹೇಳಿದರು.

ದೇಶಸೇವೆ ಆಯಿತಲ್ಲ ? ಇವರ ಬಡ ಕುಟುಂಬಕ್ಕೆ ಪರಿಹಾರ ಬೇಡವೆ ? ನಲವತ್ತೆರಡರ ಆಂದೋಳನದಲ್ಲಿ ಸರ್ವಜ್ಞಾಚಾರ್ಯರು ಭೂಗತರಾಗಿದ್ದರು (ಯಾಕೋ ?) ಎಂದು ಸರ್ಟಿಫಿಕೇಟ್ ಕೊಟ್ಟರೆ ನಿಮ್ಮ ಕೆಲಸ ಆದಂತೆಯೆ ಎಂದು ರಾಮಾಚಾರಿಗೆ ಅದಾರೋ ಹೇಳಿದರು.

"ಮಾಧವರಾಯರು ಸರ್ಟಿಫಿಕೇಟ್ ಕೊಡುತ್ತಾರೆ, ಐವತ್ತು ರೂಪಾಯಿಗೆ"

ಹುಚ್ಚು ಮುದಿಕೆ ತುಳಸವ್ವನ ಎಡಗೈ ಹೆಬ್ಬೆರಳಿನ ಗುರ್ತು ಪಡೆದ ಅರ್ಜಿ ಮತ್ತು ಮಾಧವರಾಯನ ಸರ್ಟಿಫಿಕೇಟು ರಾಮ, ಕೃಷ್ಣರಿಗೆ ಕಲ್ಪವೃಕ್ಷ ಕಾಮ ಧೇನುಗಳಾದುವು.

ತುಳಸವ್ವ ಕುಳಿತಲ್ಲಿಯೇ ಗೊಣಗಿದಳು.

"ಅವರ ಇನ್ನೂರು ರೂಪಾಯಿ ತಿನ್ತೀರಿ, ಅವರ ಶ್ರಾದ್ಧ ಮಾಡ್ರಿ"

ರಾಮಾಚಾರಿ, ಕೃಷ್ಣಾಚಾರಿ ವರ್ಷಕ್ಕೊಮ್ಮೆ ತಪ್ಪದೆ ತಂದೆಯ ಶ್ರಾದ್ಧವನ್ನು ಇಂದಿಗೂ ಮಾಡುತ್ತಿದ್ದಾರೆ. ಇದು ಪಿತೃಭಕ್ತಿ–ಅರ್ಥಾತ್ ಪಿಂಚನಿಭಕ್ತಿ.

# ಒಂದು ಒಳ್ಳೆಯ ಹೆಂಣಿನ ಕೆಟ್ಟ ಕತೆ

ನನ್ನ ತೊಟ್ಟಿಲಲ್ಲಿಟ್ಟ ಹೆಸರು ಸಾವಿತ್ರಿ ಅಂತೆ. ಇದಕ್ಕೂ ಕಾರಣವಿದೆ— ಕಾರಣವಿಲ್ಲದೆ ಯಾವುದೂ ಇಲ್ಲ, ನನ್ನ ಜೀವನದಲ್ಲಿ. ಆದರೆ ಕಾರಣವನ್ನು ಹುಡುಕಿ ಅರ್ಥಮಾಡಿಕೊಳ್ಳುವ ಸಂಭಾವಿತ ಮನೋಭಾವ ಮಾತ್ರ ನಮ್ಮ ಜನತೆಯಲ್ಲಿ ಇಂದಿಗೂ ಇಲ್ಲ, ಅಂದಿಗೂ ಇಲ್ಲ. ಅದೇಕೋ, ನನ್ನ ತಾಯಿ ಮೂರು ಹೆಂಣು ಹೆತ್ತರಂತೆ—ಒಂದೇ ಬಾರಿಗೆ ಅಲ್ಲ, ಸಾಲಾಗಿ. ನನ್ನ ಪುಣ್ಯ ಒಳ್ಳೆಯದಿತ್ತು ಸದ್ಯ. ಆ ಕಾಲದಲ್ಲಿ 'ಒಂದು ಎರಡು ಬೇಕು, ಮೂರು ಸಾಕು, ನಾಲ್ಕಾದರೆ ಗಂಡನಿಗೆ ವಿಷ ಹಾಕು' ಎಂಬ ಇಂದಿನ ದಡ್ಡ ಕೂಗು ಇನ್ನೂ ಎದ್ದಿರಲಿಲ್ಲ ಮಕ್ಕಳೇ ಆಸ್ತಿ ಎಂಬ ನಂಬಿಕೆ ಇತ್ತು. ಆದರೆ ಹೆಂಣು ಮಕ್ಕಳು ಮಾತ್ರ ಸಾಲ ಎಂಬ ಭಯವೂ ಇತ್ತು ಎಂದು ಕಾಣುತ್ತದೆ. ಆಗ ನಾನು ಹುಟ್ಟಿದೆ. ಹುಟ್ಟಿದ ಮಗು ಹೆಂಣು ಎಂದೊಡನೆ ನನ್ನ ತಾಯಿ ಹೆರಿಗೆ ಆಸ್ಪತ್ರೆಯಲ್ಲಿ ಹೋ ಎಂದತ್ತೇ ಬಿಟ್ಟರಂತೆ. ನನ್ನ ತಂದೆಯವರು ಹಾಗೆಲ್ಲ ಅಳುವುದಕ್ಕಾಗುತ್ತೆಯೆ? ಎಷ್ಟಾದರೂ ಗಂಡು ಗಂಡೇ! ಅಳಲಿಲ್ಲ. ಆದರೆ ಅಂದಿನಿಂದ ನನ್ನ ತಾಯಿಯವರೊಡನೆ ಮಾತುಬಿಟ್ಟರಂತೆ. ಅದೆಲ್ಲವೂ ಏನೇ ಇರಲಿ, ನಾಲ್ಕನೆಯ ಹೆಂಣಾದ ನನಗೆ 'ಸಾಕು ಸಾವಿತ್ರಿ' ಎಂದಂದು ಆ ಮಹಾ ಪತಿವ್ರತೆಯ ಹೆಸರನ್ನಿಟ್ಟರಂತೆ.

ನಾನು ನಾಲ್ಕನೆಯ ಮಗು ಮಾತ್ರವಲ್ಲ, ಕಡೆಯ ಮಗುವೂ ಹೌದು.

ಆಗಲೇ ಹೇಳಲಿಲ್ಲವೆ, ನನ್ನ ತಂದೆಯವರು ನನ್ನ ತಾಯಿಯೊಂದಿಗೆ ಮಾತು ಬಿಟ್ಟಿರು ಎಂದು ! ಇದರಿಂದಾಗಿ ನನ್ನ ತಂಗಿ, ತಮ್ಮಂದಿರನ್ನು ಕಾಣುವ ಸುಯೋಗವೇ ದೊರಕಲಿಲ್ಲ. ಅಂತೂ ನಾನು ನಿಜಕ್ಕೂ ಸಾಕೇ ಸಾಕು ಸಾವಿತ್ರಿ ಆದೆ.

ನಾನು ಹುಟ್ಟಿದಾಗ ನನ್ನ ತಂದೆಯವರು ತಮ್ಮ ಮಗುವನ್ನು ನೋಡಲು ಆಸ್ಪತ್ರೆಗೂ ಬರಲಿಲ್ಲವಂತೆ. ನನ್ನ ತಾಯಿ ಹೇಳುತ್ತಿದ್ದ ಈ ದೂರಿನಲ್ಲಿ, ಅವರು ಬಾಣಂತಿಯನ್ನು ನೋಡಲು ಬರಲಿಲ್ಲ ಎಂಬ ಧ್ವನಿಯೂ ಇದ್ದಿತೋ ಏನೋ ? ಆಗ ನನಗಿದೆಲ್ಲ ಹೇಗೆ ಅರ್ಥವಾಗಬೇಕು ? ನಾನಾಗ ಬಹು ಚಿಕ್ಕವಳಲ್ಲವೆ ? ನಾನೊಬ್ಬಳೇ ಏಕೆ ! ದೊಡ್ಡವರಾಗುವವರೆಗೂ ಎಲ್ಲರೂ ಚಿಕ್ಕವರೇ !

ನಮ್ಮೂರಿಗೆ ಪ್ಲೇಗು ಬಂತು. ಪ್ಲೇಗು, ಕಾಲರಾಗಳೆಲ್ಲವೂ ಆ ಒಂದಾನೊಂದು ಮೂರ್ಖರ ಕಾಲದಲ್ಲಿ ನಮ್ಮ ಪಾಲಿಗೆ ದೇವತೆಗಳಲ್ಲವೆ ? ಆ ದೇವತೆ ಮೊಟ್ಟಮೊದಲು ನನ್ನ ದೊಡ್ಡ ಅಕ್ಕನಿಗೆ ಅನುಗ್ರಹಿಸಿದಳು. ಕಂಕುಳಲ್ಲಿ ಗಡ್ಡೆ ಕಾಣಿಸಿಕೊಂಡಿತು. ಯಥಾಪ್ರಕಾರ ಅಮ್ಮನವರಿಗೆ ಹಣ್ಣು, ಕಾಯಿ ಮಾಡಿಸಿದರು. ಏನೇನೋ ಬೇಡಿಕೊಂಡರು. ಇದೆಲ್ಲ ಹೆಡ್ಡತನ ಬೇಡ, ಮಗುವನ್ನು ಆಸ್ಪತ್ರೆಗೆ ಸಾಗಿಸಿ ಚಿಕಿತ್ಸೆಮಾಡಿಸಿ ಎಂದು ನನ್ನ ತಾಯಿಯ ತಮ್ಮ ಹೇಳಿದರಂತೆ, ನನ್ನ ತಾಯಿ ಅವರನ್ನು ದೈವದ್ರೋಹಿ ಎಂದು ತೆಗಳಿಬಿಟ್ಟರು. ಮೈಲಿ ರೋಗ-ಅದೇ ದೊಡ್ಡ ಅಮ್ಮ. ಪ್ಲೇಗು, ಮಾರಿಕಾ ದೇವತೆಗಳು. ಇವಕ್ಕೆಲ್ಲ ಆಸ್ಪತ್ರೆಗೆ ಹೋಗುವುದುಂಟೆ ? ಮನೆಯಲ್ಲಿ ನನ್ನ ಅಕ್ಕ, ಊರಮ್ಮನ ಗುಡಿಯಲ್ಲಿ ಹಣ್ಣು, ಕಾಯಿ. ಈ ಸಂದರ್ಭದಲ್ಲಿ ಪ್ಲೇಗಮ್ಮ ನನ್ನ ಎರಡನೆ ಅಕ್ಕನಿಗೂ ಅನುಗ್ರಹಿಸಿದಳು. ಪ್ಲೇಗು ಮಾತೆಯಲ್ಲಿ ಧಾರಾಳಕ್ಕೆ ಅಭಾವವೇ ? ಮೊದಲ ಅಕ್ಕ ಸತ್ತಳು, ಮೂರನೆ ಅಕ್ಕನಿಗೆ ತೊಡೆಯಲ್ಲಿ ಗಡ್ಡೆ ಕಾಣಿಸಿಕೊಂಡಿತು. ನನ್ನ ಸೋದರಮಾವ ನನ್ನ ತಾಯಿಯೊಂದಿಗೆ ಜಗಳವಾಡಿ ಮೂರು ವರ್ಷದ ಮಗುವಾಗಿದ್ದ ನನ್ನನ್ನು ಕರೆದುಕೊಂಡು ತಮ್ಮ ಊರಿಗೆ ಹೋಗಿಬಿಟ್ಟರು. ಹದಿನೈದೇ ದಿವಸಗಳಲ್ಲಿ ಮೂರೂ ಮಕ್ಕಳೂ ಪ್ಲೇಗು ದೇವತೆಯ ಬಳಿ ಹೋದರು. ಆಗ ನನ್ನ ತಾಯಿಗೆ ಮತಿಭ್ರಮೆ ಆಯಿತು. ನನ್ನ ತಂದೆಗೆ ಹಾಗೆಲ್ಲ ಬುದ್ಧಿ ಕೆಡಲಿಲ್ಲ, ತಾವಾಗಿ ಕೆಡಿಸಿಕೊಂಡರು—ಕುಡಿತಕ್ಕೆ ಬಲಿಯಾಗಿ.

ಇದನ್ನರಿತ ನನ್ನ ಸೋದರಮಾವ ಕೆಲಕಾಲದ ನಂತರ—ಪ್ಲೇಗು ತಾಯಿ ನಮ್ಮೂರನ್ನು ಬಿಟ್ಟು ಹೊರಟುಹೋದನಂತರ ನನ್ನನ್ನು ಕರೆತಂದು ನನ್ನ ತಾಯಿಗೆ ಕೊಟ್ಟರು. ಆಗ ನಾನು ಇಬ್ಬರಿಗೂ ಬಹು ಮೆಚ್ಚಿನ ಮುದ್ದು ಮಗು ವಾದೆ. ನನ್ನ ತಂದೆ ಆಗಲೇ ನನ್ನನ್ನು ಮುಟ್ಟಿದ್ದು, ಕೈಗೆತ್ತಿಕೊಂಡದ್ದು. ಪ್ರೀತಿ ಯಿಂದ ನನ್ನನ್ನು 'ರಾಜಾ' ಎಂದು ಕರೆದರು. ಇದೆಲ್ಲವೂ ಅಂತೆ—ನನ್ನ ತಾಯಿ ಆಗಾಗ್ಗೆ ಅಳುತ್ತ ಹೇಳಿದ ಕತೆ ಇಲ್ಲದಿದ್ದರೆ ನನಗೆ ಹೇಗೆ ಗೊತ್ತಾಗಬೇಕು?

ಹೌದು, ಇದು ನನಗೆ ನೆನಪಿದೆ. ಅಷ್ಟು ಸುಸ್ಪಷ್ಟವಾಗಿ ಅಲ್ಲ, ಆದರೂ ಕೊಂಚ ಮಸುಕು ಮಸುಕಾಗಿ ಸ್ಮೃತಿಪಥದಲ್ಲಿ ಉಳಿದಿದೆ. ನನಗಾಗ ಆರೇಳು ವರ್ಷಗಳಿರಬೇಕು, ಅಷ್ಟೆ.

ನನ್ನ ತಂದೆಯವರು ಅವಿದ್ಯಾವಂತರಲ್ಲ. ದೊಡ್ಡ ಅಧಿಕಾರದಲ್ಲಿದ್ದರು. ಮೂರು ಮಕ್ಕಳು ಸಾಲಾಗಿ ಸತ್ತೊಡನೆ ಅವರಿಗೆ ಜೀವನದಲ್ಲಿ ಜುಗುಪ್ಸೆಯಾ ಯಿತು, ಎಲ್ಲವೂ ಬೇಡೆನಿಸಿತು. ಅಕಾಲಿಕವಾಗಿ ಪಿಂಚಣಿಯಾಗಲು ಬರೆದು ಹಾಕಿಬಿಟ್ಟರು, ಮನೆಯಲ್ಲಿ ಕುಳಿತರು. ಅತೀವ ದುಃಖ. ಮೇಲೆ ಮಾಡಲು ಕೆಲಸವಿಲ್ಲ, ಮನದ ಸ್ವಾಸ್ಥ್ಯ ಕೆಡದೆ ಮತ್ತೇನಾದೀತು ? ಇದೆಲ್ಲದರ ಪರಿಣಾಮ ವಿಪರೀತ ಕುಡಿತ. ಮೊದಲೆಲ್ಲ ಬರೀ ರಾತ್ರಿ ಮಾತ್ರವೆ ಕುಡಿಯುತ್ತಿದ್ದರು— ನನಗೆ ಗೊತ್ತಿಲ್ಲವೆ? 'ರಾಜಾ! ಅಂಗಡಿಯಿಂದ ಮೂರು ಸೋಡಾ ತಾ ಅಪ್ಪಾ' ಎಂದು ನನಗೇ ಹೇಳುತ್ತಿದ್ದರು. ಅಂಗಡಿಗೆ ಹೋಗುವುದೆಂದರೆ ನನಗೆ ತುಂಬಾ ಖುಷಿ. ಅಂಗಡಿಯ ಹುಡುಗ ನನ್ನ ಬಾಯಿಗೊಂದು ಚಾಕೊಲೇಟ್ ಹಾಕಿ, ಕೆನ್ನೆ ಸವರಿ ಕಳಿಸುತ್ತಿದ್ದ. ಒಂದೊಂದು ಬಾರಿ ನಾನೇ ತನ್ನ ತಂದೆಯವರನ್ನು

"ಸೋಡಾ ತರಲೇ ಅಪ್ಪಾಜೀ ?"

ಎಂದು ಕೇಳಿದುದೂ ಉಂಟು. ಆಗ ನನ್ನ ತಾಯಿಯವರು ನನ್ನ ಮೇಲೆ ದುಸುಮುಸು ಮಾಡುತ್ತಿದ್ದರು ಅದೇಕೋ.

ಯಾರಾದರೂ ಸ್ನೇಹಿತರು ಬಂದರೆ ನನ್ನ ತಂದೆ ಮಧ್ಯಾಹ್ನವೇ ಕುಡಿಯು ತ್ತಿದ್ದರು. ಕುಡಿಯಬೇಕೆನಿಸಿದಾಗೆಲ್ಲ ಸ್ನೇಹಿತರನ್ನು ಕರೆಯಿಸಿಕೊಳ್ಳುತ್ತಿದ್ದರು. ಮೊದಲೆಲ್ಲ ಒಬ್ಬರು, ಇಬ್ಬರು. ಆನಂತರ ಸ್ನೇಹಿತರ ಸಂಖ್ಯೆ ಬೆಳೆಯಹತ್ತಿತು.

ಹತ್ತು ಹನ್ನೆರಡು ಜನ ಸೇರಿ ಮನೆಯಲ್ಲಿ ಕುಡಿಯಲಾರಂಭಿಸಿದರು ನನ್ನ ಮನೆ ಒಂದು ಬಾರ್ ಆಯಿತು. ಅವರಾಡುವ ಮಾತುಗಳು ಏನೇನೋ—ನನಗೆ ಅರ್ಥವಾಗುತ್ತಿರಲಿಲ್ಲ. ನನ್ನ ತಾಯಿ ಮಾತ್ರ ಕಿವಿಗೆ ಕೈ ಇಟ್ಟುಕೊಂಡು

"ಇದೇನು ಹೊಲಸು ಸಹವಾಸ ತಾಯೀ !"

ಎಂದು ತಮ್ಮಲ್ಲಿಯೇ ಪೇಚಾಡಿಕೊಳ್ಳುತ್ತಿದ್ದರು ಎಷ್ಟೋ ಬಾರಿ.

ನನಗೆ ಆಗ್ಲೆ ಒಂದೇ ಆಶ್ಚರ್ಯ—ನನ್ನ ತಂದೆಯವರ ಸ್ನೇಹಿತರನ್ನು ನನ್ನ ತಾಯಿ ಇದೇಕೆ ಅಷ್ಟು ದ್ವೇಷಿಸುತ್ತಾರೆ ?

"ರಾಜಾ ! ಒಂದಿಷ್ಟು ಉಪ್ಪಿನಕಾಯಿ ತಾ ಮರೀ !"

ಅದಾರೋ ನನ್ನ ತಂದೆಯವರ ಕೋಣೆಯಿಂದ ಕೂಗಿದರು. ನನ್ನ ತಾಯಿಗೆ ಹೇಳಿದೆ, ಅವರು ಕಿವಿಗೂ ಹಾಕಿಕೊಳ್ಳಲಿಲ್ಲ. ಹಿಂದೆಯೆ ಮತ್ತೊಮ್ಮೆ ಅದೇ ಕೂಗು, ಕೂಗಿದವರೂ ಅವರೇ. ನನ್ನ ತಾಯಿಗೆ ತಿಳಿಯದಂತೆ ನಾನೇ ಉಪ್ಪಿನಕಾಯಿ ತೆಗೆದುಕೊಂಡು ಹೋದೆ. ಕೋಣೆಯೊಳಕ್ಕೆ ಹೋದೆ, ಬರೀ ಸಿಗರೇಟಿನ ಹೊಗೆ ಮತ್ತು ಅದೇನೋ ಸೀಮೆ ಎಂಣೆಯ ದುರ್ವಾಸನೆ ಇಡಿಗಿದ್ದಿತು. ಉಸಿರು ಕಟ್ಟುವಂತಾಯ್ತು, ಉಪ್ಪಿನಕಾಯಿ ಅವರ ಕೈಗಿತ್ತು ಓಡಲು ಹವಣಿಸಿದೆ

"ಇಲ್ಲಿ ಬಾ ರಾಜಾ !"

ಎಂದು ಕೈ ಹಿಡಿದೆಳೆದರು ಆ ಅರೆಬಿಳಿ ತಲೆಯವರು. ನನ್ನ ತಂದೆ ಆಗಲೆ ಕಂಣು ಮುಚ್ಚುತ್ತಿದ್ದರು, ಆಗಾಗ ತೆರೆಯುತ್ತಿದ್ದರು.

"ಜಾಣ ಹುಡುಗಿ ನೀನು"

ಎಂದನ್ನುತ್ತ ನನ್ನ ಕೆನ್ನೆಗೊಂದು ಮುತ್ತು ಕೊಟ್ಟರವರು. ಅವರ ಮೀಸೆ ದಬ್ಬಣದಂತೆ ಚುಚ್ಚಿದವು. ಕೈಬಿಟ್ಟೊಡನೆ ಒಂದೇ ಓಟ. ಅಮ್ಮನ ಬಳಿ ಬಂದು ಹೇಳಿದೆ.

"ಇನ್ನು ಮೇಲೆ ಹಾಗೆಲ್ಲ ಆ ಕೋಣೆಯಲ್ಲಿ ಹೋಗಬೇಡ"

ಎಂದು ಹೇಳಿದರು ನನ್ನ ತಾಯಿ ಏಕೆ ಎಂದು ನಾನು ಕೇಳಿದೆ. ನನಗಾವ ಉತ್ತರವನ್ನೂ ಹೇಳಲಿಲ್ಲ ಅವರು. ಆದರೆ ಬಾಯಲ್ಲಿ ಏನೇನನ್ನೋ ವಟಗುಟ್ಟಿಕೊಂಡರು.

"........ಕತ್ತೆ ಗಂಡುಗಳು, ನ್ಯೆಮೇಲೆ ಪ್ರಜ್ಞೆಯಾದರೂ ಇರುತ್ತದೋ ಇಲ್ಲವೋ ಅವಕ್ಕೆ... "

ಹೀಗೆಯೆ ಏನೇನೋ ಬಾಯಂಗಳದಲ್ಲಿಯೆ ಅಂದುಕೊಂಡರು.

ನಿತ್ಯದಂತೆ ಅಂದೂ ಶಾಲೆಗೆ ಹೋದೆ. ನನ್ನ ಸ್ಥಳದಲ್ಲಿ ಕುಳಿತಿದ್ದೆ: ಅದೇನಾಯಿತೋ, ಇದ್ದಕ್ಕಿದ್ದಂತೆ ಎಲ್ಲ ಹುಡುಗಿಯರೂ ನನ್ನನ್ನು ನೋಡಿ ನಗಾಡಿದರು. ಹೀಗೇಕೆ ನಗುತ್ತಾರೆ ಎಂದು ನನಗೆ ಅಚ್ಚರಿ, ಹಿಂದೆಯೇ ಅದೊಂದು ಬಗೆಯ ಸಿಗ್ಗು. ನನ್ನ ಪಕ್ಕದಲ್ಲಿ ಕುಳಿತಿದ್ದ ಹುಡಿಗಿಯೊಬ್ಬಳು ಮುಖ ಕಿವುಚುತ್ತ ಎದ್ದುಹೋಗಿ ಬೇರೆ ಬೆಂಚಿನಲ್ಲಿ ಕುಳಿತಳು. ನನಗೊಂದೂ ಅರ್ಥವಾಗಲಿಲ್ಲ. ಪೆಚ್ಚಾಗಿ ಅವರಿವರ ಮುಖ ನೋಡಿದೆ. ನನ್ನ ಹಿಂದಿನ ಬೆಂಚಿನಲ್ಲಿ ಕುಳಿತಿದ್ದ ಹುಡಿಗಿಯೊಬ್ಬಳು—ಅವಳ ಹೆಸರು ಅದೇನೋ ಇತ್ತು, ಮರೆತುಹೋಗಿದೆ ಈಗ—ಮೆತ್ತಗೆ ಎದ್ದು ಹೋಗಿ ಮೇಡಂ ಅವರ ಕಿವಿಯಲ್ಲಿ ಏನನ್ನೋ ಹೇಳಿದಳು. ಕೂಡಲೇ ಆ ಮುದಿ ಮೇಡಂ ಪಾಠ ಮಾಡುವುದನ್ನು ನಿಲ್ಲಿಸಿ ನನ್ನ ಬಳಿ ಬಂದರು. ತಪ್ಪಿತಸ್ಥಳಂತೆ ಎದ್ದು ನಿಂತೆ—ಆದರೆ ನಾನು ಮಾಡಿದ ತಪ್ಪೇನು ಎಂಬುದೇ ನನಗೆ ತಿಳಿಯಲಿಲ್ಲ. ಮೇಡಂ ಬಹಳ ಸಿಟ್ಟಿನವರು. ನಮ್ಮನ್ನೆಲ್ಲ ಚೆನ್ನಾಗಿ ಹೊಡೆಯುತ್ತಿದ್ದರು. ನನಗೆ ಅಂಜಿಕೆಯಾಗಿ ಗಡಗಡ ನಡುಗಿಹೋದೆ.

"ನಾನೇನೂ ಮಾಡಿಲ್ಲ ಮೇಡಂ...."

ಎಂದು ಅಳುಮುಖಮಾಡಿ ಆರಂಭಿಸಿದೆ. ಮೇಡಂ ಏನೂ ಅನ್ನಲಿಲ್ಲ. ಆಡಲಿಲ್ಲ. ನನ್ನ ಹಿಂದು ಬಂದು ನೋಡಿದರು ಅಷ್ಟೆ. ಸಿಟ್ಟೂ ಇಲ್ಲ, ಸೆಡವೂ ಇಲ್ಲ. ಅದೊಂದು ಬಗೆಯ ವಾತ್ಸಲ್ಯದಿಂದ ನುಡಿದರು.

"ಬಾ ಸಾವಿತ್ರಿ ! ಮನೆಗೆ ಹೋಗೋಣ ಬಾ"

ನಯವಾಗಿ ಅಂದರು ನನಗೆ ಅದೇನಾಯಿತೋ ಏನೋ, ದಾರಿಯುದ್ದಕ್ಕೂ ಅಳುತ್ತಲೇ ಅವರನ್ನು ಹಿಂಬಾಲಿಸಿದೆ. ಅಂತೂ ಇಬ್ಬರೂ ನಮ್ಮ ಮನೆ ತಲುಪಿದೆವು. ಮೇಡಂ ನೇರವಾಗಿ ಒಳಕ್ಕೆ ಹೋಗಿ ನನ್ನ ತಾಯಿಯ ಕಿವಿಯಲ್ಲಿ ಏನನ್ನೋ ಹೇಳಿದರು, ನಡೆದರು. ಅದೇನು ಚಾಡಿ ಹೇಳಿದರೋ, ನನ್ನ ತಾಯಿ ನನ್ನನ್ನು ಮುಟ್ಟಲಿಲ್ಲ.

"ಬಾ ರಾಜಾ ! ಈ ಕೋಣೆಯಲ್ಲಿ ಕೂಡು. ಏನನ್ನೂ ಮುಟ್ಟಬೇಡ" ಎಂದೆಂದು ಒಂದು ಚಾಪೆ ನನ್ನೆಡೆ ಎಸೆದರು. ಮೂರು ದಿನಗಳು ಕೈದಿ ನಾನು. ಹೊರಕ್ಕೆ ಹೋಗುವಂತಿಲ್ಲ—ಆ ಹುಡುಗ ಕೊಡುತ್ತಿದ್ದ ಚಾಕೊಲೇಟ್ ತಪ್ಪಿಹೋಯಿತು. ಸ್ನಾನವಿಲ್ಲ, ಕುಳಿತಲ್ಲಿಯೇ ಊಟ. ಪಕ್ಕದ ಮನೆಯ ಹೆಂಗಳೆಯರು ಬಂದು ನನಗೆ ಆರತಿ ಮಾಡಿದರು.

"ಏನಮ್ಮಾ ಇದೆಲ್ಲ ?"

ಎಂದು ನನ್ನ ತಾಯಿಯನ್ನು ಕೇಳಿದೆ. ನನ್ನೆಲ್ಲ ಪ್ರಶ್ನೆಗಳಿಗೂ ಅವರದು ಒಂದೇ ಉತ್ತರ—ಮೌನ ಮತ್ತು ಆಗಾಗ ಅಷ್ಟಿಷ್ಟು ಅಳು.

ಅನಂತರ ನಾನು ಮಲಗಿದಾಗೆಲ್ಲ ನನ್ನ ತಾಯಿಯವರು ಅಪ್ಪನನ್ನು ಏನೇನೋ ಕೇಳುತ್ತಿದ್ದರು. ನನಗಿನ್ನೂ ನಿದ್ರೆ ಬಂದಿರಲಿಲ್ಲ, ಮಲಗಿದಲ್ಲಿಯೆ ಕೇಳಿಸಿಕೊಂಡೆ. ನನ್ನ ತಂದೆಯವರು ಹೇಳಿದುದು ಮಾತ್ರ ಸ್ಪಷ್ಟವಾಗಿ ಕೇಳಿಸಿತು.

"ಯಾವ ಬೋ....ಮಗನಾದರೂ ಹುಡುಕುತ್ತ ಬಂದು ಮಾಡಿಕೊಳ್ಳು ತ್ತಾನೆ ನನ್ನ ರಾಜಾನ್ನ"

ಕಾಲ ಉರುಳಿತು, ಅದರೊಟ್ಟಿಗೆ ತಂದೆಯವರ ಕೋಣೆಯಲ್ಲಿ ಬಾಟ್ಲಿಗಳೂ ಉರುಳಿದವು. ಮತ್ತೆ ಯಥಾಪ್ರಕಾರ ಅವರ ಕೋಣೆಯಲ್ಲಿ ಜನರ ಗುಂಪು, ಕುಡಿತ, ಸಿಗರೇಟಿನ ಹೊಗೆ, ಏನೇನೋ ಮಾತು. ನನ್ನ ತಾಯಿಯವರು ನನಗೆ ಕಟ್ಟಪ್ಪಣೆ ಮಾಡಿದ್ದರು—ಯಾರೇ ಕೂಗಲಿ, ಆ ಕೋಣೆಯೊಳಕ್ಕೆ ಹೋಗಕೂಡದೆಂದು.

"ರಾಜಾ, ಕೊಂಚ ಉಪ್ಪಿನಕಾಯಿ ತಾ ಮರೀ !"

ತಾಯಿಯವರು ಬೇಡ ಅಂದಿದ್ದರು, ಅದಕ್ಕಾಗಿಯೇ ಅಲ್ಲಿ ಹೋಗಬೇಕು ಎಂಬಾಶೆ ನನಗೆ. ಹೀಗೇಕೆ ? ಈ ಪ್ರಶ್ನೆಗೆ ಉತ್ತರ ನನ್ನಲಿಲ್ಲ, ಆದರೆ ಆಶೆ ಯಾದುದಂತೂ ನಿಜ. ಇದು ಸತ್ಯ.

ನನ್ನ ತಾಯಿ ಸ್ನಾನದ ಮನೆಯಲ್ಲಿದ್ದರು, ಮೆತ್ತಗೆ ಇಷ್ಟು ಉಪ್ಪಿನಕಾಯಿ ಹಿಡಿದು ನಡದೆ. ಆ ಅರೆಬಿಳಿ ಕೂದಲವರೇ ಕುಳಿತಿದ್ದರು, ನನ್ನ ತಂದೆ ಅಮಲಿ ನಲ್ಲಿ ಮಲಗಿ ಗೊರಕೆ ಕೊರೆಯುತ್ತಿದ್ದರು. ಉಪ್ಪಿನಕಾಯಿ ಪ್ಲೇಟಿನೊಂದಿಗೆ

ನನ್ನ ಕೈಯನ್ನೂ ಹಿಡಿದೆಳೆದು ತಬ್ಬಿಕೊಂಡರು ಅವರು. ಕೆನ್ನೆಗೆ ಅವರ ಮೀಸೆ ಚುಚ್ಚಿದಾಗ ಕಚಗುಳಿ ಇಟ್ಟಂತಾಗಿ ನನಗೆ ಅದೇಕೋ ಬಹು ಹಿತವೆನಿಸಿತು. ಅನಂತರ ಅವರು ನನ್ನ ಎದೆಯ ಮೇಲೆಲ್ಲಾ ಕೈಯಾಡಿದರು. ಯಾಕೆ? ನನಗೇನು ಗೊತ್ತು?

ಅವರು ಕರೆಯದೆಯೇ ಒಂದೊಂದು ಬಾರಿ ನಾನೇ ಉಪ್ಪಿನಕಾಯಿ ಹಿಡಿದು ಮೆತ್ತಗೆ ಕೋಣೆಗೆ ಹೋಗುತ್ತಿದ್ದೆ.

ನನ್ನ ತಾಯಿಯ ಆರೋಗ್ಯ ಕೆಟ್ಟಿತು. ಹಾಸಿಗೆಯಿಂದೇಳಲೂ ಸಾಧ್ಯ ವಾಗಲಿಲ್ಲ. ತಂದೆಯವರೂ ಕಿಡಿಕಿಡಿಯಾದರು.

"ಇದೊಂದು ದರಿದ್ರ ಬೇನೆಕೋಳಿ" ಎಂದು ಶಪಿಸುತ್ತ ನಮ್ಮ ಸೋದರ ಮಾವನಿಗೆ ಒಂದು ಪತ್ರ ಗೀಚಿ ಎಸೆದರು. ಮರುದಿನವೆ ನಮ್ಮ ಮಾವ ಊರಿಗೆ ಬಂದರು, ತಮ್ಮ ಅಕ್ಕನನ್ನು ಕರೆದೊಯ್ದು ಆಸ್ಪತ್ರೆಯಲ್ಲಿ ಸೇರಿಸಿ ಅವರ ಆರೈಕೆಗೆ ನಿಂತರು. ಆಗ ಮನೆ ಎಲ್ಲವೂ ನನ್ನದೇ, ನಾನೇ ಯಜಮಾನಿ. ಹೋಟೆಲಿಂದ ಡಬ್ಬಿಯೂಟ ಬರುತ್ತಿತ್ತು. ಉಂಡು ಹಾಯಾಗಿ ಮಲಗುತ್ತಿದ್ದೆ ದಿನವೂ ಒಂದು ಬಾರಿ ಆಸ್ಪತ್ರೆಗೆ ಹೋಗಿ ತಾಯಿಯವರನ್ನು ನೋಡಿಕೊಂಡು ಬರುವುದು ನನ್ನ ಕಾರ್ಯಕ್ರಮವಾಯಿತು. ಅವರು ಅಲ್ಲಿಯೂ ನನಗೆ ಅದೇ ಮಂತ್ರವನ್ನು ಹೇಳುತ್ತಿದ್ದರು—'ಆ ಕೋಣೆಯೊಳಕ್ಕೆ ಮಾತ್ರ ಹೋಗಬೇಡ ಸಾವಿತ್ರೀ!'

ನಮ್ಮ ತಂದೆಯವರ ಪಾನಕಪೂಜೆ ಯಥಾವತ್ತಾಗಿ ಸಾಗಿಯೇ ಇತ್ತು. ಕೆಲದಿನಗಳ ನಂತರ ಹಣದ ಅಡಚಣೆ ಆಯಿತೋ ಏನೋ, ಪಾಪ! ಆ ರೀತಿಯ ಕುಡಿತಕ್ಕೆ ಯಾವ ಕುಬೇರನ ಹಣ ಸಾಲಬೇಕು? ಮನೆಗೆ ಅವರಿವರ ಬರು ವುದೂ ಕಡಮೆಯಾಯಿತು. ಒಬ್ಬರೇ ಹುಚ್ಚನಂತೆ ಗೋಡೆ ನೋಡುತ್ತ ಕೂಡು ತ್ತಿದ್ದರು.

"ರಾಜಾ! ನಿನಗೆ ಆ ಮದನರಾಯನ ರೂಮು ಗೊತ್ತೇ?"

ಎಂದು ಕೇಳಿದರು.

"ಯಾವ ಮದನರಾಯ ಅಪ್ಪಾಜೀ?"

"ಅದೇ, ಆ ಬಿಳಿ ಕ್ರಾಪಿನವರು. ಆ ಇಂದ್ರಭವನದಿಂದ ಮೂರನೇ ಮನೆ. ಅಲ್ಲಿ ಹೋಗಿ ಅವರನ್ನು ಅರ್ಜೆಂಟಾಗಿ ಕರೆ ರಾಜಾ!"

ಒಂದೇ ಓಟ ಓಡಿದೆ, ಅದೇಕೋ ಬಹು ಸಂತೋಷವಾಯಿತು ನನಗೆ. ಅವರ ಮೀಸೆ ನನ್ನ ಕೆನ್ನೆಗೆ ಚುಚ್ಚಿದ ನೆನಪು ಆದಾಗ ಮೈ ಪುಲಕಿದಂತಾಗುತ್ತಿತ್ತು, ಮನಸ್ಸು ತಕತಕ ಕುಣಿಯುತ್ತಿತ್ತು. ನಾನು ಅವರ ಕೋಣೆಗೆ ಹೋದಾಗ ಮದನರಾಯರು ಆರಾಮ ಕುರ್ಚಿಯಲ್ಲಿ ಕುಳಿತು ಗ್ಲಾಸಿನಿಂದ ಅದೇ ಸೀಮೆ ಎಂಣೆಯನ್ನು ಗುಟುಕರಿಸುತ್ತಿದ್ದರು

"ಬಾ ರಾಜಾ!" ಎಂದು ಕೈ ಹಿಡಿದು ಸ್ವಾಗತಿಸಿ ಬಾಗಿಲು ಹಾಕಿ ಚಿಲಕ ಹಾಕಿದರು. ನನಗೆ ನನ್ನ ತಂದೆಯವರು ಹೇಳಿದುದು ಮರತೇ ಹೋಯಿತು. ಮದನರಾಯರು ತುಂಬಾ ಒಳ್ಳೆಯವರು ಪಾಪ! ನನ್ನ ಬಾಯಿಗೆ ಒಂದು ಚಾಕೊಲೇಟ್ ಹಾಕಿ ಕೆನ್ನೆಗೆ ಮುತ್ತಿಕ್ಕಿದರು. ಅದೆಷ್ಟು ಪ್ರೀತಿಯೋ ಅವರಿಗೆ ನನ್ನನ್ನು ಕಂಡರೆ? ತಮ್ಮ ಮಂಚದ ಮೇಲೆ ಕೂಡಿಸಿ ಪಕ್ಕದಲ್ಲೇ ಕುಳಿತರು.... ನಾನು ಅಲ್ಲಿಂದ ಹೋಗುವಾಗ ನನ್ನ ತಂದೆ ಕರೆದರೆಂದು ಹೇಳಿದೆ.

ಒಂದು ಸಲ ಆದುದು, ಎರಡನೆ ಸಲ ಆಗದೇ? ಎರಡನೆ ಸಲ ಆದುದು ಹತ್ತನೆ ಸಲ ಆಗದೇ? ಅಮ್ಮ ಮನೆಗೆ ಬಂದಮೇಲೂ ಏನೋ ನೆಪ ಹೇಳಿ ಆಗಾಗ್ಗೆ ಹೊರಬೀಳುತ್ತಿದ್ದೆ, ಮದನರಾಯರ ಕೋಣೆಗೆ ಹೋಗಿ ಬರುತ್ತಿದ್ದೆ.

ಕಾಲ ಹೇಗೆ ಉರುಳುವುದಿಲ್ಲ? ಹೀಗೂ ಕೆಲಕಾಲ ಉರುಳಿತು. ಒಂದು ದಿನ ನೀರಮನೆಯಲ್ಲಿ ಸ್ನಾನ ಮುಗಿಸಿ ಹೊರಟಿರುವಾಗ ನನ್ನ ತಾಯಿಯವರು ನನ್ನನ್ನು ಅದೊಂದು ಬಗೆಯಾಗಿ ನೋಡಿದರು. ಕೆಳಹೊಟ್ಟೆಯನ್ನು ದಿಟ್ಟಿಸಿ ನೋಡಿದರು. ಅವರು ನೋಡುತ್ತಿದ್ದ ರೀತಿ ನನ್ನನ್ನು ಅಂಜಿಸಿತು. ಅದೇಕೆ ಹಾಗೆ ನೋಡುತ್ತಾರೆ ಎಂಬುದೇ ಅರ್ಥವಾಗಲಿಲ್ಲ. ಆ ಕೂಡಲೆ ತಮ್ಮ ತಮ್ಮನಿಗೆ ನನ್ನಿಂದಲೇ ಕಾಗದ ಬರೆಸಿ ಹಾಕಿದರು. ಮರುದಿನವೆ ನನ್ನ ಮಾವ ಊರಿಗೆ ಬಂದರು. ಅಕ್ಕ, ತಮ್ಮ ರಾತ್ರಿ ಎಲ್ಲವೂ ಮಾತನಾಡಿದರು. ಅಮ್ಮ ಅತ್ತಳು. ಮಾವ ಸಮಾಧಾನ ಮಾಡಿದರು. ಹದಿನೈದೇ ದಿನಗಳಲ್ಲಿ ನನ್ನ ಮದುವೆ ನಿಶ್ಚಯವಾಯಿತು. ನನ್ನ ಮಾವನ ಮಗನಿಗೇ ನನ್ನನ್ನ ಕೊಡುವುದೆಂದು ನಿರ್ಧರಿಸಿದರು. ಅತ್ತೆ ಬಂದರು, ನಾರಾಯಣನೂ ಬಂದ—ಆಗೆಲ್ಲ ನಾನವ ನನ್ನು ನಾರಾಯಣ ಎಂದೇ ಕರೆಯುತ್ತಿದ್ದೆ. ನನ್ನ ಬಳಿಯಂತೂ ಒಂದು ಕಾಸೂ ಇಲ್ಲ ಎಂದು ನನ್ನ ತಂದೆ ಕೈಎತ್ತಿಬಿಟ್ಟರು. ಬಾವನ ಮೇಲೆ ಕೋಪ ನನ್ನ

ಮಾವನಿಗೆ. ಆದರೆ ಅಕ್ಕನ ಮೇಲೆ ಪ್ರಾಣ. ಎರಡೂ ಖರ್ಚನ್ನು ಭರಿಸಿ ಹನುಮಂತರಾಯನ ಗುಡಿಯಲ್ಲಿ ಲಗ್ನ ಆಯಿತು ಎಂದನಿಸಿದರು.

"ಪರೀಕ್ಷೆಯ ರಿಸಲ್ಟ್ ಬರುವವರೆಗೆ ನನಗೆ ಶೋಬನ ಬೇಡ"

ಎಂದಂದರು ನನ್ನ ಗಂಡ. ಶೋಬನ ಅಂದರೇನಮ್ಮಾ ಎಂದು ನನ್ನ ತಾಯಿಯನ್ನು ಕೇಳಿದೆ.! 'ಶ್ ! ಬಾಯಿ ಮುಚ್ಚು' ಎಂದಂದು ಕಂಣಿಂದಲೆ ನನ್ನನ್ನು ಸುಮ್ಮನೆ ಮಾಡಿದರವರು.

ಎಲ್ಲರೂ ಮಾವನ ಊರಿಗೇ ಹೋದೆವು. ಒಂದು ವಾರ ಕಳೆಯಿತು. ಅವರ ಪರೀಕ್ಷೆ ರಿಜಲ್ಟ್ ಬಂತು. ಪಾಸು ಎಂದು ಎಲ್ಲರೂ ಹಿರಿಹಿರಿ ಹಿಗ್ಗಿದರು. 'ನನ್ನ ಮಗಳ ಕಾಲಗುಣ ಹೇಗಿದೆಯೋ ನಾರಾಯಣ?' ಎಂದು ನನ್ನ ತಂದೆ ನನ್ನ ಗಂಡನನ್ನು ಗೇಲಿ ಮಾಡಿದರು.

ಶಾಸ್ತ್ರಿಗಳು ಬಂದರು, ಪಂಚಾಂಗ ನೋಡಿ ಮುಂದಿನ ಶನಿವಾರ ಶೋಬನ ಆಗಬಹುದು ಎಂದರು. ನನಗೆ ಒಂದೇ ಯೋಚನೆ, ಶೋಬನ ಅಂದರೇನು? ಅಮ್ಮನನ್ನು ಕೇಳಿದೆ, ಮುಚ್ಚೇ ಬಾಯಿ ಅಂದರು ಒಂದು ಸಲ ಅಪ್ಪನನ್ನು ಕೇಳಿದೆ. 'ಹಾಗೆಲ್ಲ ಮಾತನಾಡಬಾರದು ರಾಜಾ' ಎಂದಂದು ಬಿಟ್ಟರು. ನನಗೆ ಯೋಚನೆ ಆಯಿತು, ಎಲ್ಲರೂ ಸೇರಿ ಏನು ಮಾಡಿಬಿಡುತ್ತಾರೋ ಎಂದು. ಅತ್ತೆ ಒಳಗಡೆ ಇದ್ದರು. ಒಬ್ಬರೇ ಇದ್ದಾಗ ಮೆತ್ತಗೆ ಹೋಗಿ ಕೇಳಿದೆ. 'ಛಿ! ಹುಚ್ಚು ಹುಡಿಗಿ' ಎಂದಷ್ಟೆ ಅಂದು ನಡೆದು ಬಿಟ್ಟರು. ಆ ದಿನವೂ ಬಂತು. ಮಂತ್ರ, ಹೊಗೆ ಏನೆಲ್ಲ ಆಯಿತು. ಮಧ್ಯಾಹ್ನ ನಾರಾಯಣ ಒಬ್ಬನೇ ನೀರಮನೆಯಲ್ಲಿದ್ದ. ಕಾಲಿಗೆ ನೀರು ಕೊಡಲು ಹೋದಾಗ ಅವನನ್ನೇ ಕೇಳಿದೆ. ಗೊತ್ತಿಲ್ಲದುದನ್ನು ಕೇಳುವುದು ತಪ್ಪೆ?

"ಯಾವ ಕಾಲದ ಪೆದ್ದು ಹುಡುಗಿಯೇ ನೀನು?"

ಎಂದಂದು ನಗುತ್ತ ಹೊರನಡೆದ.

ರಾತ್ರಿ ನಮ್ಮಿಬ್ಬರನ್ನೂ ಕೋಣೆಯೊಳಕ್ಕೆ ಕಳಿಸಿ ಎಲ್ಲರೂ ಹೋದರು.

ನಾನು ಮತ್ತು ನಾರಾಯಣ—ನಾರಾಯಣ ಮತ್ತು ನಾನು. ಬಹು ಹೊತ್ತಿನನಂತರ ನಾರಾಯಣ ನನ್ನನ್ನು ಕೇಳಿದ.

"ಗೊತ್ತಾಯಿತೇನೇ, ಶೋಬನ ಅಂದರೆ?"

"ಇದೇನಾ ? ನಾನು ಏನೋ ತಿಳಿದಿದ್ದೆ. ಇದೇನು ಮಹಾ ? ನಾನು ಮದನರಾಯರು ಎಷ್ಟೋ ಸಲ ಹೀಗೆ ಇದ್ದೆವು"

ಎಂದು ಇದ್ದುದನ್ನು ಇದ್ದಂತೆಯೇ ಹೇಳಿದೆ.

ಆ ರಾತ್ರಿ ಧಿಡೀರನೆ ಬಾಗಿಲು ತಗೆದು ಹೊರ ಹೋದ ಗಂಡನ ಮುಖ ನಾನು ಮತ್ತೆ ನೋಡಲಿಲ್ಲ.

"ನಮ್ಮ ಮನೆತನದ ಮರ್ಯಾದೆ ಹಾಳುಮಾಡಿದ ಮುಂಡೆ ನನ್ನ ಮನೆಗೆ ಬರುವುದು ಬೇಡ"

ಎಂದಂದು ಕಿಡಿಕಿಡಿಯಾದ. ನನ್ನ ಕುಡುಕು ತಂದೆ, ಅಳುತ್ತಿದ್ದ ನನ್ನ ತಾಯಿಯೊಂದಿಗೆ ಊರಿಗೆ ಹೊರಟೇ ಹೋದರು. ಇತ್ತ ತಾಯಿ ಮನೆ ತಪ್ಪಿತು, ಅತ್ತ ಗಂಡನ ಮನೆ ಸಿಕ್ಕಲಿಲ್ಲ. ನನ್ನ ತಪ್ಪು ಏನೆಂಬುದೇ ನನಗೆ ಅರ್ಥವಾಗಲಿಲ್ಲ. ಕೆಟ್ಟ ಕೆಟ್ಟ ಬೈಗಳನ್ನು ತಿಂದು ಕಡೆಗೂ ಊರಿಗೆ ಬಂದೆ, ಮದನರಾಯರ ರೂಮಿನ ಬಾಗಿಲಲ್ಲಿ ನಿಂತೆ. ಅವರು ಆ ರೂಮನ್ನು ಆಗಲೇ ಬಿಟ್ಟು ಬೇರೆ ಅದೆಲ್ಲಿಗೋ ಹೋದರು ಎಂದು ತಿಳಿಯಿತು.

ಇದೆಲ್ಲವೂ ಬಹು ಹಳೆಯ ಕತೆ, ಎಷ್ಟೋ ವರ್ಷಗಳ ಹಿಂದಿನ ಕತೆ· ಮರೆತುಹೋದ ಕತೆ. ಈಗ ನಾನೇನು ? ಒಬ್ಬ ಹಳೆಯ ಹಳಸಿದ ಸೂಳೆ. ಸೂಳೆಯರಿಗೆ ಮಾತ್ರ ದೇವರಿಲ್ಲವೆ ? ಹೊಟ್ಟೆಯಲ್ಲಿದ್ದ ಮಗು ಹೆಂಣು—ಅದೇ ಮುದಿ ಸೂಳೆಗೆ ಪಿಂಚಿನಿ. ಅವಳನ್ನು ಸಿಂಗರಿಸಿ ಬಾಗಿಲಲ್ಲಿ ಕೂಡಿಸಿ ಹಿಂದು ನಿಲ್ಲು ವುದೇ ನನ್ನ ತಪಸ್ಸು.

ಬೀದಿಯಲ್ಲಿ ಹೋಗುತ್ತ ಅದಾವನೋ ಬೋಳು ತಲೆಯ ಮುದುಕ ಇತ್ತ ನೋಡಿ ಬಾಯಲ್ಲಿಯೆ ಶಪಿಸಿದ.

"ಈ ಹಾಳು ಮುಂಡೆಯರು ಎಲ್ಲಿಂದ ಬರುತ್ತಾರೋ ?"

ದಿಟ್ಟಿಸಿ ಮುಖ ನೋಡಿದೆ, ಅದೇ ಮದನರಾಯ ! ಕತ್ತಿನಲ್ಲಿ ತುಳಸೀ ಮಣಿ, ಸತ್ಯಸಾಯಿ ಆಶ್ರಮದಲ್ಲಿ ಅವನ ಭಾಷಣ ಅಂದು.

ಕೆಟ್ಟವಳು ನಾನೊಬ್ಬಳೆ ? ಆದರೆ ಇದರಲ್ಲಿ ನನ್ನದೇನು ಸ್ವಾಮೀ ತಪ್ಪಿದೆ ? ನನ್ನ ಹೊರತು ಉಳಿದರೆಲ್ಲರದೂ ತಪ್ಪಿದೆ. ಅನುಭವಿಸುವವಳು ಮಾತ್ರ ನಾನು !

# ಮಂತ್ರಿ ಪರಿಹಾರ ನಿಧಿ

ಸಹೋದರರೇ !........ಅಲ್ಲಲ್ಲ........ಮಹಾಸೋದರರೇ ! ಮತು ಬರವೆಂಬ ಭೀಕರ ಮತ್ತು ಭಯಂಕರ ಬ್ರಹ್ಮ ರಾಕ್ಷಸನ ಬಾಯಿಗೆ ಸಿಕ್ಕು ಬವಣೆಗೀಡಾ ಗಿರುವ ಬಿಜಾಪುರ ಜಿಲ್ಲೆಯ ಬೀದರ ತಾಲೂಕಿನ ಬಡಪಾಯಿ ಬಂಧುಗಳೇ !

ನಾನಿಲ್ಲಿ ನಿಮ್ಮ ಮುಂದು ಸುದೀರ್ಘ ಭಾಷಣ ಮಾಡಲು ನಿಂತಿಲ್ಲ.... ಅಲ್ಲಲ್ಲ....ಕುಳಿತಿಲ್ಲ. ಹೌದು, ನಾನೀಗ ಕುಳಿತೇ ಭಾಷಣ ಮಾಡುತ್ತಿದ್ದೇನೆ. ಈ ಇದಕ್ಕಾಗಿ, ಅಂದರೆ ನಿಲ್ಲುವ ಬದಲಾಗಿ ಕುಳಿತು ಭಾಷಣ ಮಾಡುತ್ತಿರುವುದ ಕ್ಕಾಗಿ–ಅಂದರೆ ಸಭೆಗೆ ತತ್ರಾಪಿ ನಿಮ್ಮಂತಹ ಹಸಿದವರ ಸಭೆಗೆ ಸಲ್ಲಬೇಕಾದ ಗೌರವ ಕೊಡಲು ನಿಲ್ಲಲಾರದೆ ಕುಳಿತೇ ಭಾಷಣ ಮಾಡುತ್ತಿರುವುದಕ್ಕಾಗಿ ಪ್ರಾಸ್ತಾವಿಕವಾಗಿ, ಅರ್ಥಾತ್ ಕ್ಷಮಾಯಾಚನ ರೂಪವಾಗಿ ಒಂದೆರಡು ಮಾತು ಗಳನ್ನು ನಾನಿಲ್ಲಿ ಹೇಳಬೇಕಾದುದು ಅವಶ್ಯಕ ಅನಿಸಬಹುದು. ಮಂತ್ರಿಯಾದ ನನಗನಿಸದಿದ್ದರೂ ಪ್ರಜೆಯಾದ ನಿಮಗೆ ಅನಿಸಬಹುದು. ಆದುದರಿಂದ ನಿಮ ಗಾಗಿ ಕೇವಲ ಒಂದೆರಡೇ ಮಾತಿನಲ್ಲಿ, ಅಂದರೆ ಸೂಕ್ಷ್ಮವಾಗಿ ನಿಮಗೆ ಈ ವಿಷಯ ವನ್ನು ಆದಿಯಲ್ಲಿಯೇ–ಅಂದರೆ ಆರಂಭದಲ್ಲಿಯೇ–ಅಂದರೆ ಪ್ರಾರಂಭದಲ್ಲಿಯೇ– ಅಂದರೆ ಮಧ್ಯದಲ್ಲಿ ಮತ್ತು ಕೊನೆಯಲ್ಲಿ ಅಲ್ಲದೆ ಸುರುವಿನಲ್ಲಿಯೇ ಹೇಳಬಯಸು ತ್ತೇನೆ, ತಿಳಿಸಬಯಸುತ್ತೇನೆ, ಅನುಕ್ರಮವಾಗಿ, ಸಾಂಗಿತವಾಗಿ, ವಿವರವಿವರ

ವಾಗಿ, ಆದರೂ ನಿಮ್ಮ ಊಟದ ಸಮಯವನ್ನು ಹಾಳು ಮಾಡದೆ ಒಂದೇ ಮಾತಿ ನಲ್ಲಿ ವಿಶದೀಕರಿಸುತ್ತೇನೆ.

ಏಕೆ ? ಇದು ಅವಶ್ಯಕ. ಅವಶ್ಯಕ ಹೌದು, ಆದರೆ ಯಾರಿಗೆ ? ಇದು ನನಗಲ್ಲ. ಆದರೂ ನಿಮಗೆ ಅವಶ್ಯಕ ಮತ್ತು ಅದಕ್ಕೂ ಹೆಚ್ಚಾಗಿ ಅತ್ಯವಶ್ಯಕ. ಆದುದರಿಂದ ನಾನಿದನ್ನು ಹೇಳಲೇಬೇಕು. ಹೇಳದಿದ್ದರೆ ವಿಧಿ ಇಲ್ಲ, ಹೇಳಿಯೇ ಹೇಳುತ್ತೇನೆ. ಏಕೆ ? ನಾನು ಮಂತ್ರಿ, ನಿಮ್ಮ ಮಂತ್ರಿ, ಪ್ರಜೆಗಳ ಮಂತ್ರಿ. ಮಂತ್ರಿಯಾದವನು ತನ್ನನ್ನು ಮೆಚ್ಚಿದ–ಅಲ್ಲ ತನ್ನ ಮೆಚ್ಚುಗೆಯ ಪ್ರಜೆಗಾಗಿ ಎಲ್ಲ ತ್ಯಾಗಕ್ಕೂ ಸದಾ ಸಿದ್ಧನಾಗಿರಲೇ ಬೇಕು. ಈ ತ್ಯಾಗಕ್ಕೆ, ನಾನೇಕೆ ನಿಂತು ಮಾತನಾಡುತ್ತಿಲ್ಲ–ಅಂದರೆ ನಾನೇಕೆ ಕುಳಿತು ಮಾತನಾಡುತ್ತಿದ್ದೇನೆ ಎಂಬು ದನ್ನು ಸಭಿಕರಾದ ನಿಮಗೆ ಸಕಾರಣವಾಗಿ ವಿವರಿಸುವ ಈ ಮಹಾ ತ್ಯಾಗಕ್ಕೆ ನಾನು ಕದ್ದಭಂಕಣ–ಅಲ್ಲ, ಬದ್ಧಕಂಕಣನಾಗಿದ್ದೇನೆ–ಮತ್ತೂ ಮತ್ತೂ ಈ ಶ್ರೇಷ್ಠತಮ ತ್ಯಾಗಕ್ಕೆ ಸದಾ ಸರ್ವದಾ ಮತ್ತು ಅನುಗಾಲವೂ ಮತ್ತು ಯಾವಾ ಗಲೂ ಸಿದ್ಧನಾಗಿದ್ದೇನೆ. ಯಾಕಂದರೆ ಪ್ರಜೆಗಳಿಗಾಗಿ ತ್ಯಾಗ ಮಾಡುವುದರಲ್ಲಿ ಮಂತ್ರಿಯಾದ ನನಗೆ ಮಹದಾನಂದವಿದೆ, ಅತೀವ ಸಂತೋಷವಿದೆ, ಮತ್ತೂ ಮತ್ತೂ....ಮತ್ತೂ ಇನ್ನೂ ಏನೇನೋ ಇದೆ.

ಅಕ್ಕತಂಗಿಯರೇ ! ಮತ್ತು ಅಕ್ಕತಂಗಿಯರ ಗಂಡ, ಮಕ್ಕಳೇ ! ಮತ್ತು ಅತ್ತೆಮಾವಂದಿರೇ ! ನಾನೇಕೆ ಈಗ ನಿಂತು ಮಾತನಾಡುತ್ತಿಲ್ಲ ? ಇದಕ್ಕಿರುವ ಒಂದೇ ಒಂದು ಮತ್ತು ಏಕಮಾತ್ರ ಕಾರಣವೇನೆಂದರೆ ನಾನು ಕುಳಿತೇ ಮಾತ ನಾಡುತ್ತಿದ್ದೇನೆ. ಇದಕ್ಕಾಗಿ ತಾವು ದಯವಿಟ್ಟು ಕರತಾಡನ ಮಾಡಬೇಕು.

(ಸಭೆಯಲ್ಲಿ ಅಲ್ಲಲ್ಲಿ ಕರತಾಡನ)

ಸಂತೋಷ. ನೀವು ಕರತಾಡನ ಮಾಡಿ ಸಂತೋಷ ಸೂಚಿಸಿದುದಕ್ಕಾಗಿ ನಾನು ನಿಮಗೆ ಋಣಿ. ಯಾಕಂದರೆ ಸಂತೋಷಾತ್ ಪ್ರಾಜ್ಞತೇ ಪಂಡಿತಃ ಎಂದು ಕನ್ನಡ ಟೀಕಾಕಾರರಾದ ತ್ಯಾಗರಾಜರು ಎಂದೋ ಕಾಮಶಾಸ್ತ್ರದಲ್ಲಿ ನುಡಿದಿದ್ದಾರೆ. ಆದಕಾರಣ ನಾನು ಪ್ರಾಜ್ಞ ಮತ್ತು ಕುಳಿತುಕೊಂಡು ಭಾಷಣ ಮಾಡುತ್ತಿದ್ದೇನೆ. ಆದರೆ ಏಕೆ ? ಇದನ್ನು ನಿಮಗೆ ವಿವರಿಸಿ ಮನದಟ್ಟು ಮಾಡು ವವರೆಗೂ ನನ್ನ ಭಾಷಣವನ್ನು ನಾನು ಆರಂಭಿಸುವಂತಿಲ್ಲ. ಆರಂಭಿಸುವ

ಮಾತು ಹಾಗಿರಲಿ ಪ್ರಾರಂಭವನ್ನು ಕೂಡಾ ಮಾಡುವಂತಿಲ್ಲ. ಅದಕ್ಕಾಗಿ ಈ ಇದನ್ನು ನಿಮಗೆ, ಅಂದರೆ ನನ್ನ ಪ್ರಜಾಬಂಧುಗಳಿಗೆ ಹೇಳುತ್ತೇನೆ ಮತ್ತು ಹೇಳಿಬಿಡುತ್ತೇನೆ. ಮತ್ತು ಹೇಳಿ ಮುಗಿಸಿಬಿಡುತ್ತೇನೆ.

ಹೌದು, ನಾನು ಕುಳಿತು ಮಾತನಾಡುತ್ತಿದ್ದೇನೆ. ಆದರೆ ಏಕೆ? ನಿಂತು ಮಾತಾಡುತ್ತಿದ್ದೇನೆ. ಏಕೆ? ಇದಕ್ಕೆ ಕಾರಣವೇನು? ಮೂಲ ಕಾರಣ ವೇನು? ಮುಖ್ಯ ಕಾರಣವೇನು? ಇದು ನಿಮಗೆ ಮುಖ್ಯವಾದ ಪ್ರಶ್ನೆ. ಮೂಲಭೂತವಾದ ಪ್ರಶ್ನೆ ಮತ್ತು ಎಲ್ಲಕ್ಕೂ ಹೆಚ್ಚಾಗಿ ನಿಮಗೆ ಸಾವು ಬದುಕಿನ ಪ್ರಶ್ನೆ ಎಂಬುದನ್ನು ನಾನು ಬಲ್ಲೆ. ನಾನು ಅರಿತಿದ್ದೇನೆ. ನನಗೆ ಗೊತ್ತಿದೆ. ನನಗೆ ತಿಳಿದಿದೆ ಮತ್ತು ನನ್ನ ಗಮನದಲ್ಲಿದೆ. ನಾನೇಕೆ ಈಗ ಮಾತನಾಡದೆ ನಿಂತಿದ್ದೇನೆ—ಅಲ್ಲಲ್ಲ—ನಾನೇಕೆ ಈಗ ನಿಲ್ಲದೆ ಮಾತನಾಡುತ್ತಿದ್ದೇನೆ, ಕುಳಿತೇ ಮಾತನಾಡುತ್ತಿದ್ದೇನೆ? ಇದು ನಿಮ್ಮ ಹಿತಕ್ಕಾಗಿ, ನಿಮ್ಮ ಸುಖಸಂತೋಷಕ್ಕಾಗಿ ಮತ್ತು ಮುಖ್ಯವಾಗಿ ನಿಮ್ಮ ಆನಂದಕ್ಕಾಗಿ. ಹೇಗೆ ಎಂಬುದನ್ನು ಈಗ ಇಲ್ಲಿ ವಿವರಿಸುತ್ತೇನೆ, ನಿಮಗಾಗಿ ತಿಳಿಸುತ್ತೇನೆ.

ಮೊಟ್ಟಮೊದಲಾಗಿ ನನಗೆ ಡಾಕ್ಟರು ಹೇಳಿದ್ದಾರೆ. ನಾನು ಕುಳಿತೇ ಭಾಷಣ ಮಾಡಬೇಕು, ನಿಂತು ಭಾಷಣ ಮಾಡಕೂಡದೆಂದು ನಮ್ಮ ಸರಕಾರಿ ಡಾಕ್ಟರು ನನ್ನಲ್ಲಿ ವಿನಂತಿ ಮಾಡಿಕೊಂಡಿದ್ದಾರೆ. ಅವರ ಅಂದರೆ ಆ ಸರಕಾರಿ ಡಾಕ್ಟರರ ವಿನಂತಿಗೂ ಒಂದು ಕಾರಣ ಉಂಟು. ಕೆಲ ದಿನಗಳ ಹಿಂದು ಅಂದರೆ ನಾನು ಮಂತ್ರಿಯಾದ ನಂತರ ನನ್ನ ಆರೋಗ್ಯದಲ್ಲಿ ಕೊಂಚ, ಕೊಂಚವೇಕೆ ಬಹಳವೇ ಅನ್ನಿ ತೊಂದರೆ ಆಯಿತು. ಆಗ ಕೂಡಲೆ ಡಾಕ್ಟರರನ್ನು ಕರೆಯಿಸಿ ಕೊಂಡು ಪರೀಕ್ಷೆ ಮಾಡಲು ಹೇಳಿದೆ ಪೂರ್ಣ ಪರೀಕ್ಷೆ ಮಾಡಿ ಅವರು 'ನಿಮ್ಮ ಹೃದಯ....' ಎಂದಷ್ಟೇ ಅಂದರು ನಾನು ಆ ಕೂಡಲೆ ಕುಸಿದೇ ಬಿದ್ದೆ. ಏಕೆ? ನನಗೂ ಹೃದಯವೇ? ಅದೂ ಮಂತ್ರಿಯಾದ ಮೇಲೂ! ನನಗೆ ಹೃದಯ ವೆಲ್ಲಿಂದ ಬಂತು? ಹೇಗೆ ಬಂತು? ಏಕೆ ಬಂತು? ನನ್ನನ್ನು ಅನೇಕರು 'ಹೃದಯ ಹೀನ' ಎಂದಂದುದು ನನಗೆ ಚೆನ್ನಾಗಿ ಜ್ಞಾಪಕವಿದೆ. ನೆನಪಿದೆ, ಸ್ಮರಣೆಯಲ್ಲಿದೆ, ಚಿತ್ತಫಲಕದ ಮೇಲೆ ಭದ್ರವಾಗಿ ಮೂಡಿದೆ ಮತ್ತು ನಾನಿದನ್ನು ಮರೆತಿಲ್ಲ, ಮರೆಯುವುದಿಲ್ಲ. ಬರೀ ಇಷ್ಟೇ ಅಲ್ಲದೆ, ಅವರಿವರು ಅನ್ನಬೇಕಾದ

ಆವಶ್ಯಕತೆ ಏನಿದೆ ? ನನಗೇ ಗೊತ್ತಿದೆ, ನನಗೆ ಹೃದಯವಿಲ್ಲ ಎಂಬುದು. ಇಲ್ಲದ ಹೃದಯವನ್ನು ಆ ಡಾಕ್ಟರು ಅದು ಹೇಗೆ ಪತ್ತೆಮಾಡಿದರೋ ನಾನರಿಯೆ. ಇರಲಿ, ಮುಂದು ಕೇಳಿರಿ.

ನಾನು ನಿಂತು ಮಾತನಾಡಬಾರದು ಮಾತ್ರವಲ್ಲ, ಕುಳಿತು ಕೂಡಾ ಹೆಚ್ಚು ಮಾತಾಡಬಾರದು ಎಂದು ನನ್ನಲ್ಲಿ ಡಾಕ್ಟರರು ವಿನಂತಿಮಾಡಿಕೊಂಡಿದ್ದಾರೆ. ಮಂತ್ರಿಯಾದ ಮೇಲೂ ಮಾತಾಡದಿರಲು ಸಾಧ್ಯವೇ ? ನಮ್ಮ ರಾಷ್ಟ್ರಪಿತರಾದ, ನಮ್ಮ ಸ್ವಾತಂತ್ರ್ಯದಾತರಾದ, ನಮ್ಮ ಅಚ್ಚುಮೆಚ್ಚಿನ ಮುಖಂಡರಾದ ಮಹಾತ್ಮಾ ಗಾಂಧೀ ಬಾಪೂಜಿಯವರು ಆಗಾಗ ಮೌನವ್ರತ ಮಾಡುತ್ತಿದ್ದರು. ಅದು ಅವರಿಗೆ ಸಾಧ್ಯವಿತ್ತು, ಏಕೆ ? ಅವರು ಒಬ್ಬ ಡೆಪ್ಯುಟಿ ಮಿನಿಸ್ಟರ್ ಕೂಡಾ ಆಗಲಿಲ್ಲ. ಹಾಗೆಯೇ ಸತ್ತರು. ಆದಕಾರಣದಿಂದ ನಾನು ಮಾತಾಡಲೇಬೇಕು.

## ಏಕೆ ಹೆದರಿರಿ ?

ನನ್ನ ಹೃದಯದ ಮೇಲೆ ದುರ್ಮಾಂಸ ಬೆಳೆದಿದೆಯೆಂದೂ, ಆದಕಾರಣ ನಾನು ಒಂದೇ ಊಟ ಮಾಡಬೇಕೆಂದೂ, ಬರೀ ಅಷ್ಟೇ ಅಲ್ಲದೆ ರಾತ್ರಿ ಉಪವಾಸ ಮಾಡಬೇಕೆಂದೂ ಸಲಹೆ ನೀಡಿದ್ದಾರೆ. ಬರ ಬಿದ್ದಿರುವ ಈ ಭಾಗದ ಜನವಾದ ನೀವು ಅದು ಏಕೆ ಉಪವಾಸಕ್ಕೆ ಹೆದರುತ್ತೀರೋ ನನಗಂತೂ ಅರ್ಥವಾಗುತ್ತಿಲ್ಲ. ಪ್ರತಿ ರಾತ್ರಿಯೂ ತಪ್ಪದೆ ಅಚೂನನವಾಗಿ—ಅಲ್ಲ, ಅನಚೂನವಾಗಿ ಅಲ್ಲ, ಅನೂಚಾನವಾಗಿ ಉಪವಾಸ ಮಾಡುತ್ತೇನೆ. ಉಪವಾಸ ಅಂದರೆ ಉಪವಾಸ-ಊಟ ಇಲ್ಲವೇ ಇಲ್ಲ ಬೆಳಗಿನಲ್ಲಿ ಕೊಂಚ ಟಿಫಿನ್ ಮಾಡಿ ಮಧ್ಯಾಹ್ನ ಸುಮಾರು ಮೂರು ಮೂರೂವರೆ ಘಂಟೆಗೆ ಪಗಡ್‌ದಸ್ತಾಗಿ ಉಂಡು ಮಲಗುತ್ತೇನೆ. ಮಧ್ಯಾಹ್ನ ಒಳ್ಳೆಯ ಊಟ ಬೇಕೇಬೇಕು. ಏಕೆಂದರೆ ರಾತ್ರಿ ಖಟ್ಟಾ ಉಪವಾಸ. ಕೇವಲ ಸ್ವಲ್ಪವೇ ಸ್ವಲ್ಪ ಅಂದರೆ ಐದೇ ಐದೇ ದೊಡ್ಡ ದೊಡ್ಡ ಚಪಾತಿ, ಆಲೂಗಡ್ಡೆ ಮತ್ತು ಈರುಳ್ಳಿ (ಅದನ್ನೇ ನೀವು ಇಲ್ಲೆಲ್ಲ ಉಳ್ಳಾಗಡ್ಡಿ ಎಂದು ಕರೆಯುತ್ತೀರಿ) ಪಲ್ಲೆ ತಿಂದು, ಮೂರು ಮೊಸಂಬಿ, ನಾಲ್ಕು ಆಪಲ್, ಒಂದಿಷ್ಟು ಕಾಬೂಲ್ ದ್ರಾಕ್ಷಿ ತಿಂದು, ಒಂದು ದೊಡ್ಡ ತಂಬಿಗೆ ಹಾಲು ಕುಡಿದು

ಉಪವಾಸದಿಂದ, ನಿರಾಹಾರದಿಂದ, ಹಾಗೆಯೇ ಬರೀ ಹೊಟ್ಟೆಯಿಂದ ಮಲಗುತ್ತೇನೆ. ಹೀಗಾಗಿ ನನ್ನ ಮಾತಿನ ತೂಕ ಕಡಿಮೆ ಆಗಿದೆ—ಅಲ್ಲಲ್ಲ—ನನ್ನ ತೂಕ ಕಡಿಮೆಯಾಗಿದೆ. ಅಂತೂ ನಾನು ನಿಂತು ಮಾತಾಡುವಂತಿಲ್ಲ. ಅದಕ್ಕಾಗಿ ನೀವು ನನ್ನನ್ನು ತಪ್ಪು ತಿಳಿಯುವುದಿಲ್ಲವೆಂದು ಭಾವಿಸುತ್ತೇನೆ. ಇದಕ್ಕೆ ನೀವು ಒಪ್ಪಿಗೆ ಸೂಚಿಸಿ ಒಂದು ಬಾರಿ ಕರತಾಡನಮಾಡಿ ನೀವೇ ಚುನಾಯಿಸಿದ ಸರಕಾರವನ್ನು ಗೌರವಿಸಬೇಕು. ಹೂಂ, ಚಪ್ಪಾಳೆ ಹೊಡೆಯಿರಿ.

(ಮೆತ್ತಗೆ ಕರತಾಡನ ಸಪ್ಪಳ)

(ಕೋಪದಿಂದ)

ಚಪ್ಪಾಳೆ ಹೊಡೆಯಲಿಕ್ಕೂ ತ್ರಾಣ ಇಲ್ಲವೇ ನಿಮಗೆ? ಹೌದು ಮರೆತಿದ್ದೆ. ಇದು ಬರಪೀಡಿತ ಪ್ರದೇಶ. ಆಗಲಿ, ಪರವಾ ಇಲ್ಲ. ಸದ್ಯದ ವಿಷಯಕ್ಕೆ ಬರೋಣ. ಮೊಟ್ಟ ಮೊದಲನೆಯದಾಗಿ, ಓಂ ಪ್ರಥಮವಾಗಿ, ಅಂದರೆ ಆರಂಭದಲ್ಲಿಯೇ, ಸುರುವಿನಲ್ಲಿಯೇ ಅಂದರೆ ನನಗೆ ತಿಳಿಯಿತೋ ಇಲ್ಲವೋ—ಅಲ್ಲಲ್ಲ—ನಿಮಗೆ ತಿಳಿಯಿತೋ ಇಲ್ಲವೋ—ಹೀಗಂದರೆ ಬಿಗಿನಿಂಗ್‌ನಲ್ಲಿಯೇ ನಾನೊಂದು ಮಾತನ್ನು ನಿಮಗೆ ಅಪ್ಪಣೆ ಕೊಡಲು ಇಚ್ಛಿಸುತ್ತೇನೆ, ಬಯಸುತ್ತೇನೆ. ಅದೇನೆಂದರೆ ನಾನು ನಿಮ್ಮ ಮುಂದು ಸುದೀರ್ಘ ಭಾಷಣಮಾಡುವುದಿಲ್ಲ. ಏಕೆ? ಏಕೆ? ನೀವೇ ಹೇಳಿ....ನಿಮಗೆ ಗೊತ್ತಿಲ್ಲ. ನಾನು ಹೇಳುತ್ತೇನೆ, ನನಗೆ ಗೊತ್ತಿದೆ. ಏಕೆ? ನಾನು ಮಂತ್ರಿ.

ಹಸಿದವರ ಮುಂದು ಹರಿಕಥೆ ಮಾಡುವವನು ಮೂರ್ಖ. ಅಲ್ಲಲ್ಲ ಮಹಾಮೂರ್ಖ. ಅಂತಹ ಮೂರ್ಖ ನಾನಲ್ಲ. ನಾನು ಎಂತಹ ಮೂರ್ಖನೂ ಅಲ್ಲ, ಏಕೆ? ನಿಮಗೇ ಗೊತ್ತಿದೆ, ನಾನೀಗ ಮಂತ್ರಿ. ಮಂತ್ರಿ ಅಂದರೆ ಸಚಿವರರು. ಈ ಏಕಮೇವ ಕಾರಣದಿಂದಲೇ ನಾನು ಮೂರ್ಖನಲ್ಲ ಎಂಬುದು ಸಾಬೀತು ಆಗಿಹೋಯಿತು. ರುಜುವಾತು ಆಗಿಹೋಯಿತು. ಖಾತ್ರಿ ಆಗಿಹೋಯಿತು. ಶತಸ್ಸಿದ್ಧವಾಗಿ ಹೋಯಿತು. ನಾನು ಮೂರ್ಖನಾಗಿರುವುದರಿಂದ ನಾನೀಗ ಮಂತ್ರಿ ಅಲ್ಲ—ಅಲ್ಲಲ್ಲ—ನಾನೀಗ ಮಂತ್ರಿಯಾಗಿರುವುದರಿಂದ ನಾನು ಮೂರ್ಖನಲ್ಲ. ಈ ಮಾತನ್ನು ನೀವು ಒಪ್ಪಲೇಬೇಕು. ಒಪ್ಪುತ್ತೀರಿ, ಒಪ್ಪಿದ್ದೀರಿ ಎಂಬುದು ನನಗೆ ಖಾತ್ರಿ ಇದೆ. ನಾನು ಮೂರ್ಖನಲ್ಲ ಎಂಬ

ಮಾತನ್ನು ನೀವು ಒಪ್ಪಿದುದಕ್ಕೆ ಸೂಚನೆಯಾಗಿ ಈ ತಕ್ಷಣ ಎಲ್ಲರೂ ಒಂದುಬಾರಿ ಕರತಾಡನ ಮಾಡಿರಿ. ಆನಂತರವೇ ನನ್ನ ಭಾಷಣ ಆರಂಭ. ಹೂಂ, ಚಪ್ಪಾಳೆ ಹೊಡೆಯಿರಿ.

(ಚಪ್ಪಾಳೆ ಬಿದ್ದುವು. ಒಂದು ದಿಕ್ಕಿನಿಂದ ಮಾತ್ರ ಇಲ್ಲ)

## ಏಕೆ ಕರತಾಡನವಿಲ್ಲ?

(ಇತ್ತ ತಿರುಗಿ) ಈ ಬದಿಯಲ್ಲಿ ಕುಳಿತಿರುವ ನನ್ನ ಜಾಣಬಂಧುಗಳು ಕರತಾಡನ ಮಾಡಲಿಲ್ಲ. ಯಾಕೆ? ಯಾಕೆ, ಎಂಬ ಪ್ರಶ್ನೆಗೆ ನನ್ನಲ್ಲಿ ಉತ್ತರ ಸಿದ್ಧವಾಗಿದೆ. ಇಂಗ್ಲೀಷಿನಲ್ಲಿ ಒಂದು ಗಾದೆ ಮಾತಿದೆ. ಅದೇನೆಂದರೆ 'Consent is half silence' (ಸಭೆಯಲ್ಲಿ ಗುಜುಗುಜು, ಚಿಕ್ಕದಾಗಿ ನಗು) ನಾನು ಇಂಗ್ಲೀಷಿನಲ್ಲಿ ಹೇಳಿದೆನೆಂದು ನೀವು ಗಾಬರಿಯಾಗಬೇಡಿ. ನನಗೆ ಕನ್ನಡವೂ ಬರುತ್ತದೆ. ಕನ್ನಡ ನನ್ನ ಮಾತೃಭಾಷೆ. ಆದರೆ ಇಂಗ್ಲೀಷು ನನ್ನ ಪಿತೃಭಾಷೆ. ನನಗೆ ಹೈಸ್ಕೂಲಿನಲ್ಲಿ ಇಂಗ್ಲೀಷಿನಲ್ಲಿ ನೂರಕ್ಕೆ ನೂರಾಹತ್ತು ಮಾರ್ಕು ಬಂದಿದ್ದವು. ನಾನು ಮೊದಲಿನಿಂದಲೂ ಪ್ರೈವೇಟ್ ಟ್ಯೂಷನ್ ಸ್ಟೂಡೆಂಟ್. ಅಲ್ಲದೆ ನನ್ನ ವಿದ್ಯಾಭ್ಯಾಸವೆಲ್ಲವೂ ಇಂದಿರಾ ಗಾಂಧಿಯವರಂತೆ ಕೇವಲ ಕನ್‌ವೀನಿಯಂಟ್‌ನಲ್ಲಿಯೇ ಆಯಿತು. ಆದರೂ ಇಂಗ್ಲೀಷ್ ಬಾರದ ಪಾಮರ ಕನ್ನಡಿಗರಿಗಾಗಿ ಸೋದರ ಸೋದರಿಯರಿಗಾಗಿ 'Consent is half silence' ಎಂಬ ಇಂಗ್ಲಿಷ್ ಗಾದೆ ಮಾತನ್ನು ಕನ್ನಡೀಕರಿಸಿ ಹೇಳುತ್ತೇನೆ. ಅದೇನೆಂದರೆ ಮಾತು ಬೆಳ್ಳಿ, ಮೌನ ಬಂಗಾರ. ಆದಕಾರಣ ನೀವು ತಟ್ಟದೆ ಮೌನವಾಗಿದ್ದೀರಿ.

## ಅಭೂತಪೂರ್ವ ಸಂಕಟ

ಈಗ ನಾನು ಮುಖ್ಯ ಪ್ರಶ್ನೆಗೆ ಬರುತ್ತಿದ್ದೇನೆ. ನಿಮ್ಮ ಮುಖ್ಯ ಪ್ರಶ್ನೆ ಯಾವುದು? ಬರಗಾಲ! ಬರಗಾಲದ ಅಭೂತಪೂರ್ವ ಸಂಕಟಕ್ಕೆ ಬಲಿಯಾಗಿರುವ ನಿಮಗೆ ಬರಗಾಲ ಅಂದರೇನು ಎಂದು ತಿಳಿಸಿ ಹೇಳಿ ನಿಮಗೆ ಬರಗಾಲದ ಪರಿಚಯ ಮಾಡಿಕೊಡುವುದು ಪ್ರಜಾಪಾಲಕನಾದ, ಮಂತ್ರಿವರೇಣ್ಯನಾದ,

ಸಚಿವನಾದ ನನ್ನ ಕರ್ತವ್ಯ ; ಆದ್ಯ ಕರ್ತವ್ಯ, ಮೊದಲ ಕರ್ತವ್ಯ, ಮೊಟ್ಟ ಮೊದಲ ಕರ್ತವ್ಯ. ಮತ್ತೂ....ಮತ್ತೂ ಇದು ನನ್ನ ಡ್ಯೂಟಿ, ಯಾಕೆಂದರೆ ಇದು ನನ್ನ ಡೂಟಿ.

ಮಹಾ ಬರಗಾಲ ಪೀಡಿತ ಬಂಧುಗಳೇ ! ಬರಗಾಲ ಅಂದರೇನು ? ಬರಗಾಲ ಅಂದರೆ ಬರಬಿದ್ದಿರುವಂತಹ ಕಾಲ. ಹೌದೋ ಅಲ್ಲವೋ, ಹೌದು ಎಂಬುದಾದರೆ ದಯಮಾಡಿ ಚಪ್ಪಾಳಿ ಹೊಡೆಯಿರಿ (ಯಾರೂ ಹೊಡೆಯಲಿಲ್ಲ—ಒಬ್ಬರೇ ಹೊಡೆದರು).

ಪರವಾ ಇಲ್ಲ, ನಿಮ್ಮೆಲ್ಲರ ಪರವಾಗಿ ನಿಮ್ಮ ಜಿಲ್ಲೆಯ ಡೆಪ್ಯುಟಿ ಕಮಿಷನರ್ ಹೊಡೆದರು. ಸಾಕು, ಅವರು ನಿಮ್ಮ ಪಾಲಕರು. ಪೋಷಕರು ಮತ್ತು ನಿಮ್ಮೆಲ್ಲರ ಅಧಿಕ ಪ್ರತಿನಿಧಿಗಳು—ಅಲ್ಲ—ಅಧಿಕೃತ ಪ್ರತಿನಿಧಿಗಳು. ಅವರು ಹೊಡೆದರೆ ನೀವು ಹೊಡೆದಂತೆಯೇ. ಇರಲಿ, ಬರ ಏಕೆ ಬಿದ್ದಿತು ಇದು ಮುಖ್ಯ ಪ್ರಶ್ನೆ ಮತ್ತು ನಮ್ಮ ನಿಮ್ಮ ಮುಂದಿರುವ ಅತಿ ಮುಖ್ಯ ಪ್ರಶ್ನೆ.

ಈ ಪ್ರಶ್ನೆಗೆ ಉತ್ತರ ಕಂಡುಹಿಡಿಯಲು ಒಂದು ಪಂಚವಾರ್ಷಿಕ ಯೋಜನೆಯನ್ನು ಸಿದ್ಧಗೊಳಿಸುವವನಿದ್ದೇನೆ. ಈ ಕಾರ್ಯಕ್ಕಾಗಿ ಶೀಘ್ರದಲ್ಲಿಯೇ, ಅಂದರೆ ಎಂಟು ಹತ್ತು ವರ್ಷಗಳೊಳಗಾಗಿಯೇ—ಒಂದು ಸ್ಥಾಯೀ ಸಮಿತಿ—ಸ್ಥಾಯೀ ಸಮಿತಿ ಅಂದರೆ ನಿಮಗೆ ತಿಳಿಯಿತೋ ಇಲ್ಲವೋ ? ಸ್ಥಾಯಿ ಸಮಿತಿ ಅಂದರೆ ಎಕ್ಸ್‌ಪರ್ಟ್ ಕಮಿಟಿ—ಅದನ್ನು ಮಾಡುವವನಿದ್ದೇನೆ. ಆ ಕಮಿಟಿಗೆ ನಾನೇ ಅಧ್ಯಕ್ಷ ಆ ಕಮಿಟಿಯ ಸದಸ್ಯರಿಗೆ ಸಂಚರಿಸಲು ಕಾರುಗಳು ಬೇಕು. ಆ ಕಾರುಗಳನ್ನು ತಯಾರುಮಾಡಲು ಇನ್ನೊಂದು ಸ್ಥಾಯೀ ಎಕ್ಸ್‌ಪರ್ಟ್ಸ್ ಸಮಿತಿಯ ಕಮಿಟಿಯನ್ನು ನಿರ್ಮಿಸಬೇಕು. ಅದರ ಅಧ್ಯಕ್ಷ ನನ್ನ ಭಾವ ಮೈದುನನೇ ಇದ್ದಾನೆ. ಅವನನ್ನು ಶೀಘ್ರದಲ್ಲಿಯೇ ಉಂಗಾಂಡಕ್ಕೆ ಟ್ರೇನಿಂಗ್ ಕಳಿಸಲಿದ್ದೇನೆ. ಅಲ್ಲಿ ಅವನು ಹದಿನೈದೇ ವರ್ಷಗಳು ಟ್ರೇನಿಂಗ್ ಮಾಡಿಕೊಂಡು ಮರಳಿ ಬಂದನಂತರ ಮುಂದಿನ ಕಾರ್ಯ ಆರಂಭ.

ಅದಿರಲಿ. ಮಹಾ ಬರಪೀಡಿತ ಬಂಧುಗಳೇ ! ನಾನೀಗ ಏನು ಹೇಳುತ್ತಿದ್ದೆ. ಹಾಂ ನೆನಪಾಯಿತು ಗುಲಬರ್ಗಾ ಜಿಲ್ಲಾ ಬೀದರ್ ತಾಲ್ಲೂಕಿನ ಬಿಜಾಪುರ ಗ್ರಾಮದಲ್ಲೀಗ ಬರಬಿದ್ದಿದೆ. ಬರ ಹೇಗೆ ಬಿತ್ತು, ಏಕೆ ಬಿತ್ತು

ಎಂಬುದನ್ನು ಯೋಚಿಸುತ್ತ ಕೂಡುವುದು ಮೂರ್ಖತನ ಮತ್ತು ಶತಮೂರ್ಖತನ. ಆದರೆ ಎಲ್ಲಿಂದ ಬಿತ್ತು ? ಎಂಬುದನ್ನು ನಾವೀಗ ತನಿಖೆ ಮಾಡಬೇಕು. ಇದಕ್ಕಾಗಿ ಇನ್ನೊಂದು ಸಪ್ತ ವಾರ್ಷಿಕ ಯೋಜನೆ ಅಗತ್ಯ. ಅದಕ್ಕೊಂದು ಎಟ್ಸ್‌ಪರ್ಟ್—ಅಲ್ಲಲ್ಲ—ಎಕ್ಸ್‌ಪರ್ಟ್ ಕಮಿಟಿ ಮಾಡಬೇಕು. ಅದರ ಅಧ್ಯಕ್ಷ ನನ್ನ ಅಳಿಯನೇ. ಅವನೂ ಶೀಘ್ರದಲ್ಲಿಯೇ ಆಫ್ರಿಕಾಕ್ಕೆ ಹೋಗಿ ಟ್ರೇನಿಂಗ್ ಪಡೆಯಬೇಕು. ಈಗಾಗಲೇ ಅವನು ಹೊರಡುವುದರಲ್ಲಿದ್ದ. ಆದರೆ ನನ್ನ ಮಗಳ—ಅಂದರೆ ಅವನ ಹೆಂಡತಿಯ ಏಳನೆ ಹೆರಿಗೆ ಸನಿಯ ಬಂದಿದೆ. ಸನಿಯ ಅಂದರೆ ಕೇವಲ ಒಂಬತ್ತೇ ತಿಂಗಳಿದೆ. ಅದಾದನಂತರ—ಅದು ಅಂದರೆ ಯಾವುದು ?—ಹೂಂ, ಅದು ಅದಾದನಂತರ ಹೋಗುತ್ತಾನೆ. ಆ ವಿಷಯ ಹಾಗಿರಲಿ. ಈಗ ?

ಬರದಿಂದ ಭರ್ಜರಿತರಾದ—ಅಲ್ಲಲ್ಲ—ಜರ್ಜರಿತರಾದ ಬಂಧು ಭಗಿನಿಯರೇ, ಸೋದರ ಸೋದರಿಯರೇ ಅರ್ಥಾತ್ ಅಣ್ಣತಮ್ಮಂದಿರೇ ! ಈಗ ನಾನು ಮಹತ್ವದ ವಿಷಯವನ್ನು ಕುರಿತು ಮಾತನಾಡುವವನಿದ್ದೇನೆ. ಈ ಮಾತು ಮುಗಿದನಂತರವೇ ನಾನು ನನ್ನ ಭಾಷಣವನ್ನು ಪ್ರಾರಂಭ ಮಾಡಲಿಚ್ಛಿಸುತ್ತೇನೆ.

(ಸಭೆಯಲ್ಲಿ ಯಾರೋ ನಕ್ಕಂತಾಯಿತು)

## ನಗುವ ವಿಷಯವಲ್ಲ

ಇದು ನಗುವ ವಿಷಯವಲ್ಲ. ನಗುವುದು ಮಹಾ ಪಾಪ ! ಏಕೆಂದರೆ ನಮ್ಮ ದೇವರ ಸಮಾನರಾದ ಪೂಜ್ಯ ಬಾಪೂಜಿಯವರು ಏನು ಹೇಳುತ್ತಿದ್ದರು. ಅವರು ನನ ಮುಂದೆಯೇ ಹೇಳಿದ್ದರು Laugh and grow fat ಎಂದು. ಆದರಿಂದಲೇ ನಾನಿಷ್ಟು ದಪ್ಪ ಆಗಿದ್ದೇನೆ. ದಪ್ಪ ಆದುದರಿಂದ ಈಗ ಒಂದು ಊಟ ಬಿಡಬೇಕಾಗಿ ಬಂದಿದೆ. ಅದಿರಲಿ, ನಾನೇನು ಹೇಳುತ್ತಿದ್ದೆ ? ಹಾಂ, ನೆನಪಾಯಿತು. ಮಹತ್ವದ ವಿಷಯ ! ಯಾವುದಾ ಮಹತ್ವದ ವಿಷಯ ? ಬರದಿಂದ ಅನ್ನಾನ್ನ ಗತಿಕರಾಗಿ ಸಾಯುತ್ತಿರುವ ನಿಮಗೆ ಹಸಿವು ಎಂಬುದರ ಬಗ್ಗೆ ಎರಡು ಮಾತುಗಳನ್ನು ಹೇಳಿ ಅದರ ಪರಿಚಯ ಮಾಡಿಕೊಡಬೇಕಾದುದು

ಮಂತ್ರಿಯಾದ ನನ್ನ ಕರ್ತವ್ಯ. ಹಸಿವೂ ! ಹಸಿವು ಅಂದರೆ ಏನು ? ಅದರ ಅರ್ಥವೇನು ? ಮತ್ತೂ ತಾತ್ಪರ್ಯವೇನು ? ಆ ಶಬ್ದದ ಉಗಮ ಎಲ್ಲಿಂದ ? ಹಸಿವು ಶಬ್ದದ ವಿತ್ಪತ್ತಿ ಏನು, ಮತ್ತು ವ್ಯುತ್ಪತ್ತಿ ಏನು ? ಮುಖ್ಯವಾಗಿ ನೀವು ಇದನ್ನು ಅರ್ಥ ಮಾಡಿಕೊಳ್ಳಲೇ ಬೇಕು. ಅದೇನೆಂದರೆ ವಿತ್ಪತ್ತಿ ಬೇರೆ, ವ್ಯುತ್ಪತ್ತಿ ಬೇರೆ, ಮತ್ತು ಉತ್ಪತ್ತಿ ಬೇರೆ. ಈ ಮೂರೂ ಒಂದೇ ರೀತಿಯ ಶಬ್ದಗಳ ಅಂತರ್ಗತ ಅರ್ಥವನ್ನು ನೀವು ಮಾಡಿಕೊಳ್ಳದಿದ್ದರೆ ನಿಮಗೆ ನಾನು ಹೇಳುವುದು ಪೂರ್ತಿಯಾಗಿ, ಪೂರ್ಣವಾಗಿ ಮತ್ತು ಸಂಪೂರ್ಣವಾಗಿ ಅರ್ಥವಾಗ ಲಾರದು. ಅದನ್ನು ಆಮೇಲೆ ಸಾವಕಾಶವಾಗಿ ನಿಮಗೆ ವಿವರಿಸುತ್ತೇನೆ. ಮೊದಲು ಹಸಿವು ಎಂದರೇನು ಎಂಬುದನ್ನು ತಿಳಿಯಲಿಕ್ಕೆ ಪ್ರಯತ್ನ ಮಾಡಿರಿ.

## ಡಿಕ್ಷನರಿ ನೋಡಿ

ನಮ್ಮ ಮೈಸೂರಿನ ಅಂದಿನ ಘನ ಸರಕಾರ-ಅಲ್ಲಲ್ಲ-ನಮ್ಮ ಘನ ಮೈಸೂರಿನ ಅಂದಿನ ಸರಕಾರ ತಮ್ಮ ಆಜ್ಞೆ ನಂಬರು ಇ-100-201-ಯೂನಿ 153-31-13 ದಿನಾಂಕ 15 ಜುಲೈ 1933ರಲ್ಲಿ ಇಂಗ್ಲಿಷ್ ಕನ್ನಡ ಡಿಕ್ಷನರಿ ಒಂದನ್ನು ತಯಾರು ಮಾಡಲು ಸಂಪಾದಕ ಸಮಿತಿಯೊಂದನ್ನು ನಾಮಕರಣ ಮಾಡಲು ಮಹದಪ್ಪಣೆ ಮಾಡಿತು. ಆ ಆರ್ಡರಿನ ಮೇರೆಗೆ ಸಿದ್ಧವಾದ ಇಂಗ್ಲಿಷ್-ಕನ್ನಡ ನಿಘಂಟು ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಿಸ ಲ್ಪಟ್ಟಿತು. ಅದರ ಎರಡನೆ ಮುದ್ರಣವೂ 1965ರಲ್ಲಿ ಹೊರಬಿದ್ದಿದೆ. ಅದರ ಬೆಲೆ ಕೇವಲ ಮೂವತ್ತೇ ರೂಪಾಯಿ ಮಾತ್ರ ಅದನ್ನು ತಾವೆಲ್ಲರೂ ಕೊಳ್ಳಲೇ ಬೇಕು. ಮನೆಮನೆಗೂ ಆ ನಿಘಂಟು ಇರಲೇ ಬೇಕು. ಕೇವಲ ಮನೆ ಮನೆ ಗಳಿಗೆ ಮಾತ್ರವೇ ಏಕೆ ? ಮನೆಯಲ್ಲಿ ಎಷ್ಟು ಜನರಿದ್ದಾರೋ ಅಷ್ಟು ಪ್ರತಿಗಳು ಬೇಕೇ ಬೇಕು. ಏಕೆ ? ಹಸಿವು ಎಂಬುದು ಕೇವಲ ಮನೆಯ ಯಜಮಾನನಿ ಗಷ್ಟೇ ಆಗುವುದಿಲ್ಲ. ಪ್ರತಿಯೊಬ್ಬರಿಗೂ-ಅಂದರೆ ಮುದುಕನಿಂದ ಹಿಡಿದು ಮಗುವಿನವರೆಗೂ-ಎಲ್ಲರಿಗೂ ಹಸಿವು ಆಗಿಯೇ ಆಗುತ್ತದೆ. ಆ ನಿಘಂಟಿನಲ್ಲಿ ಹಸಿವು ಎಂಬ ಶಬ್ದಕ್ಕೆ ಅರ್ಥವೇನಿದೆ ? ಬರಗಾಲ ಪೀಡಿತರಾದ ನೀವು ಇದನ್ನು

ತಿಳಿಯಬೇಡವೆ ? ಆ ನಿಘಂಟಿನಲ್ಲಿ 'ಹಂಗರ್' ಎಂಬ ಇಂಗ್ಲಿಷ್ ಶಬ್ದವೊಂದಿದೆ. ಹಂಗರ್ ಅಂದರೆ ಹಸಿವು, ಏಕೆಂದರೆ ಹಸಿವು ಅಂದರೆ 'ಹಂಗರ್'. ಆ ಪದಕ್ಕೆ ನಿಘಂಟು ಸಮಿತಿಯಲ್ಲಿದ್ದ ವಿದ್ಯನ್ಮಣಿಗಳು ಈ ರೀತಿಯಾಗಿ ಅರ್ಥ ಅನ್ನುವಂಥಾದ್ದನ್ನು ಕೊಡುವಂಥವರಾಗಿದ್ದಾರೆ. ಹಸಿವು ಅಂದರೆ ಆಹಾರವಿಲ್ಲದ್ದರಿಂದಾಗುವ ಒಂದು ಬಗೆಯ ಸಂಕಟ, ಬಳಲಿಕೆ, ಹಸಿವು, ಕ್ಷುತ್ತು. ಇಷ್ಟಂತೂ ಆಯಿತು. ಆದರೆ :

ಸಂಕಟ ಅಂದರೇನು ? 1894ನೇ ಇಸವಿಯಲ್ಲಿ ಮಂಗಳೂರು ಬೇಸಲ್ ಮಿಷನ್ ಬುಕ್ ಮತ್ತು ಟ್ರ್ಯಾಕ್ಟ್ ಡಿಪೋಜಿಟರಿಯಿಂದ ಪ್ರಕಟವಾದ ರೆವರೆಂಡ್ ಎಫ್. ಕಿಟ್ಟೆಲ್ (ಬಿ. ಜಿ. ಇ. ಎಂ.) ಸಾಹೇಬರ್ ಕನ್ನಡ–ಇಂಗ್ಲಿಷ್ ಡಿಕ್ಷನರಿಯ 1482ನೆ ಘಟ್ಟದಲ್ಲಿ ಸಂಕಟ ಎಂಬ ಶಬ್ದಕ್ಕೆ ಕೊಟ್ಟಿರುವ ಅರ್ಥವನ್ನು ನೀವು ತಪ್ಪದೆ ನೋಡಬೇಕು, ಆಗ ನಿಮ್ಮ ಎಲ್ಲ ಸಂದೇಹಗಳೂ ಒಂದೇ ಬಾರಿಗೆ ಪರಿಹಾರವಾಗಿ ಹೋಗುತ್ತವೆ. ರೆವರೆಂಡ್ ಕಿಟ್ಟೆಲ್ ಸಾಹೇಬರು ಸಂಕಟ ಎಂಬ ಶಬ್ದಕ್ಕೆ ಏನು ಅರ್ಥವನ್ನು ಹೇಳಿದ್ದಾರೆ. ಗೊತ್ತೇ ? ಇಲ್ಲಾ ಇಲ್ಲಾ, ನಿಮಗದು ಗೊತ್ತಿಲ್ಲ. ಆದರೆ ನನಗೆ ಗೊತ್ತಿದೆ. ಯಾಕಂದರೆ ನಾನು ಮಂತ್ರಿ, ನೀವು ಸರ್ವಸಾಮಾನ್ಯ ಯಃಕಶ್ಚಿತ್ ಪ್ರಜೆ. ನನಗೂ ನಿಮಗೂ ಅದೇ ಭೇದ. ನಾನು ಹೇಳುತ್ತೇನೆ. ಕೇಳಿ-ಸಂಕಟ ಅಂದರೆ ಏನೆಂದರೆ ಸಂಗಟ. ಏನು ಸುಮ್ಮನೆ ಕುಳಿತಿದ್ದೀರಿ ? ತಕ್ಷಣ ಕೈ ತಟ್ಟಿರಿ. ಅದೂ ನಿಮಗೆ ತಿಳಿಯುವುದಿಲ್ಲವೆ ?

## ಸಾಯುವ ಸಂಕಟ

(ಒಬ್ಬಿಬ್ಬರು ಚಪ್ಪಾಳೆ ತಟ್ಟುತ್ತಾರೆ)

ಈಗ ನಿಮಗೆ ಬರ ಅಂದರೇನು, ಹಸಿವು ಅಂದರೇನು, ಸಂಕಟ ಅಂದರೇನ್ ಎಂಬುದು ಸಂಪೂರ್ಣವಾಗಿ ಅರ್ಥವಾಯತು. ಸರಿ, ಮುಂದಿನ ವಿಷಯಕ್ಕೆ ಹೋಗೋಣ. ಮುಂದಿನ ವಿಷಯವನ್ನು ಹೇಳಿ ಆ ನಂತರ ನಾನು ನನ್ನ ಪುಟ್ಟ ಭಾಷಣವನ್ನು ಪ್ರಾರಂಭಿಸುತ್ತೇನೆ.

ನಮ್ಮಲ್ಲಿ ಸಾಯುವ ಸಂಕಟ ಎಂಬ ಪದ ಪ್ರಯೋಗ ಒಂದುಂಟು. ಹಾಗಂದರೇನು ? ಅದರ ಅನುಭವ ನಿಮಗಿಲ್ಲ. ಯಾಕಂದರೆ ನೀವಿನ್ನೂ ಸತ್ತಿಲ್ಲ. ಆದರೆ ಬರದ ಕಾರಣವಾಗಿ ಹಸಿವಿನಿಂದ ನಿಮ್ಮಲ್ಲಿ ಕೆಲವರು ಸತ್ತಿದ್ದಾರೆ. 'ಕೆಲವಂ ಬಲ್ಲವರಿಂದ ಕಲ್ತು' ಎಂದು ಪುರಂದರದಾಸರು ಎಂದೋ ಹಾಡಿದ್ದಾರೆ. ಇದೇ ಮಾತನ್ನು ಅಕ್ಕಮಾದೇವಿಯವರೂ ಹೇಳಿದ್ದಾರೆ. ಆದಕಾರಣ ಸಾಯುವ ಸಂಕಟ ಅಥವಾ ಸಾಯುವ ಸಂಗಟ ಅಂದರೇನೆಂಬುದನ್ನು ನೀವು ಆ ಬಲ್ಲ ಕೆಲವರಿಂದ ಕೇಳಿ ತಿಳಿದುಕೊಳ್ಳಬೇಕೆಂದು ಮಂತ್ರಿಯಾದ ನಾನು ಪ್ರಜೆಯಾದ ನಿಮಗೆ ಅಪ್ಪಣೆ ಕೊಡಿಸುತ್ತೇನೆ. ಯಾಕೆಂದರೆ ಈ ರೀತಿ ಅಪ್ಪಣೆ ಕೊಡಿಸಬೇಕಾದುದು ಮಂತ್ರಿಯಾದ ನನ್ನ ಕರ್ತವ್ಯ. ನನಗೆ ನನ್ನ ಕರ್ತವ್ಯದ ಬಗ್ಗೆ ಬಹಳ ನಿಷ್ಠೆ.

ಆ ಮಾತು ಹಾಗಿರಲಿ ಈಗ ನಿಮ್ಮ ಹಸಿವೆಯ ಮಾತು ಬಂದಾಗ ಇಲ್ಲೊಂದು ವಿಷಯವನ್ನು ಹೇಳಲೇಬೇಕಾಗಿದೆ. ನಿಮ್ಮ ಹಸಿವೆಗೆ ಕಾರಣರಾರು ಗೊತ್ತೇನು ? ಇದೆಲ್ಲವೂ ವಿರೋಧಿ ಪಕ್ಷದವರ ಕೈವಾಡ. ಇವರು ಹೋದ ಹೋದಲ್ಲೆಲ್ಲ ಸಭೆಗಳಲ್ಲಿ ನಿಮ್ಮ ಹಸಿವೆಯ ಬಗ್ಗೆ ಮಾತಾಡುತ್ತಾರೆ. ಇದು ಖಂಡನೀಯ ಮತ್ತು ಲಾಂಛನಾಸ್ಪದವಾದ ಸಂಗತಿ. ನಮ್ಮ ದೊಡ್ಡ ಪತ್ರಿಕೆಗಳು ಅವರ ಭಾಷಣವನ್ನು ಹಾಗೆ ಹಾಗೇ ಪ್ರಕಟಿಸುತ್ತವೆ. ಅದನ್ನು ಓದಿದ ಕೂಡಲೇ, ನಿಮಗೆ ಹಸಿವೆಯು ನೆನಪಾಗುತ್ತದೆ. ನಿಮ್ಮ ಹಸಿವೆಗೆ ವಿರೋಧಿ ಪಕ್ಷದವರೇ ಕಾರಣ ಎಂಬುದು ಈಗಾದರೂ ನಿಮಗೆ ಖಾತ್ರಿಯಾಯಿತೆ ? ಆದಕಾರಣ ಅವರನ್ನು ಹತ್ತಿರ ಸೇರಿಸಬೇಡಿ. ಮತ್ತು ಪತ್ರಿಕೆಗಳನ್ನು ಓದಬೇಡಿ. ಆಗ ನಿಮಗೆ ಹಸಿವಿಯ ತೊಂದರೆಯೇ ಇಲ್ಲ. ಆಯಿತು, ನೀವು ಹಸಿವಿನಿಂದ ಉಪವಾಸ ಇರುತ್ತೀರಿ ಎಂದೇ ತಿಳಿಯೋಣ. ಉಪವಾಸ ಇದ್ದರೆ ಮಾತ್ರ ಏನಾಯಿತು ? ನಮ್ಮದು ಗಾಂಧೀ ನಾಡು ಎಂದು ಹೆಸರಾಗಿದೆ. ನೀವೆಲ್ಲ ಪೂಜ್ಯ ಗಾಂಧೀಜಿಯವರ ಮಕ್ಕಳಲ್ಲವೆ ? ಈಗ ನಿಮ್ಮನ್ನು ನಾನೊಂದು ಪ್ರಶ್ನೆಯನ್ನು ಕೇಳಬಯಸುತ್ತೇನೆ. ನಿಮಗೇ ಗೊತ್ತಿರುವಂತೆ ಗಾಂಧೀಜಿಯವರು ಎಷ್ಟು ಸಲ ಉಪವಾಸ ವ್ರತ ಕೈಗೊಳ್ಳಲಿಲ್ಲ ? ಜೇಲಿನಲ್ಲಿದ್ದಾಗಲೇ ಅವರು ಎಷ್ಟೋ ದಿನಗಳು ಉಪವಾಸ ಮಾಡಿದರು. ಹಾಗಿರುವಾಗ ಅವರ ಮಕ್ಕಳಾದ ನೀವು ಸರ್ವ

ಸ್ವತಂತ್ರರಾಗಿದ್ದೂ, ಜೇಲಿನ ಹೊರಗಡೆ ಇದ್ದೂ ಉಪವಾಸ ಮಾಡಲು ಅಂಜು ತ್ತೀರಿ. ಇದು ನಿಜಕ್ಕೂ ನಾಚಿಕೆಗೇಡು, ಅಪಮಾನದ ಸಮಾಚಾರ, ತಲೆ ತಗ್ಗಿಸಬೇಕಾದ ವಿಷಯ.

**ಅಭ್ಯಾಸ ಬದಲಿಸಿ**

ಇನ್ನೊಂದು ಮುಖ್ಯವಾದ ಅಂಶವಿದೆ. ಅದನ್ನು ಮೊದಲು ಹೇಳಿ ಅನಂತರವೇ ನಾನು ನನ್ನ ಈ ಭಾಷಣವನ್ನ ಪ್ರಾರಂಭಿಸುವವನಿದ್ದೇನೆ. ಅದು ಏನೆಂದು ತಿಳಿಯಲು ನೀವು ಕುತೂಹಲರಾಗಿದ್ದೀರಿ ಎಂಬುದನ್ನು ನಾನು ಬಲ್ಲೆ. ಅದೇನೆಂದರೆ ಇದು. ನಮ್ಮ ಪ್ರಧಾನಿಯವರಾದ ಇಂದಿರಾಗಾಂಧಿಯವರೂ ಇದೇ ಮಾತನ್ನೆ ಹೋದಲ್ಲೆಲ್ಲ ಹೇಳುತ್ತಿದ್ದಾರೆ. ಯಾವುದಾ ಮಾತು ? ನಾನೇ ಅವರಿಗೆ ಹೇಳಿದ್ದೆ. ಅದೇನಂದರೆ ನಮ್ಮ ಜನ–ಅಂದರೆ ನೀವು–ಕೂಡಲೆ ನಿಮ್ಮ ಆಹಾರದ ಅಭ್ಯಾಸವನ್ನು ಬದಲಿಸಿಕೊಳ್ಳಲೇ ಬೇಕು. ಇದು ಮಾತ್ರ ಎಲ್ಲಿ ಬದುಕಬೇಕಾದ ಜನತೆಗೆ ಅತ್ಯವಶ್ಯಕ. ನಿಮ್ಮಲ್ಲಿರುವ ಒಂದು ದೊಡ್ಡ ರೋಗ ವೆಂದರೆ ನಿಮಗೆ ಜೋಳದ ರೊಟ್ಟಿಯೇ ಬೇಕು. ಏಕೆ ಬೇಕು ಎಂದು ನಾನು ನಿಮ್ಮನ್ನು ಕೇಳುತ್ತೇನೆ. ಇಂದು ಜಗತ್ತಿನಲ್ಲಿ ಜೋಳದ ರೊಟ್ಟಿಯನ್ನೇ ತಿಂದು ಬದುಕುವ ಜನ ಎಷ್ಟಿದ್ದಾರೆ ಎಂದು ತಿಳಿದಿರಿ ? ಅಮೆರಿಕಾ, ರಷ್ಯಾ, ಲಂಡನ್, ಕರಾಚಿ, ಕೊಯಬತ್ತೂರು, ಟೆಹರಾನ್ ಮುಂತಾದ ದೇಶಗಳಲ್ಲಿರುವ ಜನ ಜೋಳದ ರೊಟ್ಟಿಯನ್ನೇ ತಿಂದು ಬದುಕಿದ್ದಾರೇನು ? ಆದ ಕಾರಣ ನೀವು ಆ ಹಾಳು ಜೋಳದ ರೊಟ್ಟಿಯನ್ನು ಬಿಟ್ಟುಬಿಡಿರಿ. ಲಕ್ಷಣವಾಗಿ ಮೈಸೂರ್ ಪಾಕ್, ಪೇಟಾಹಲ್ವ, ಕೇಸರಿ ಬಾತ್ ಮುಂತಾದುವನ್ನು ತಿಂದು ಬದುಕಲು ಯತ್ನಿಸಬೇಕು. ಯಾಕಂದರೆ ನಮ್ಮ ದೇಶದ ಇಂದಿನ ಪರಿಸ್ಥಿತಿಯಲ್ಲಿ ಬರಗಾಲ ಬಿದ್ದು ಜನತೆ ಉಪವಾಸ ಸಾಯುತ್ತಿರುವಾಗ ನಾವು ನಮ್ಮ ಆಹಾರ ಪದ್ಧತಿ ಗಳನ್ನು ಬದಲು ಮಾಡಲೇಬೇಕು. ಇದರಲ್ಲಿ ಏನು ತಪ್ಪಿದೆ ? ನಮ್ಮ ಪುರಾಣ ಗಳಲ್ಲಿ ಏನು ಹೇಳಿದೆ ? ಇದೇ ರೀತಿಯು ಬರಬಿದ್ದಾಗ ಮಹಾಬ್ರಾಹ್ಮಣನಾದ ವಿಶ್ವಾಮಿತ್ರ ಏನು ಮಾಡಿದ ? ಹೊಲೆಯನ ಮನೆಯಿಂದ ನಾಯಿಯ ಮಾಂಸ ವನ್ನು ಕದ್ದು ತಿನ್ನಲಿಲ್ಲವೇ ? ಯಾಕಂದರೆ ಷೇಕ್‌ಪಿಯರ್ ಒಂದು ಕಡೆ ಹೀಗೆ

ಹೇಳಿದ್ದಾನೆ - ಜೀವಂ ಭದ್ರಾಣಿ ಪಶ್ಯತಿ! ಏನಾದರೂ ತಿಂದು ಬದುಕಬೇಕು. ನಿಮ್ಮ ಪ್ರಶ್ನೆ ಮುಗಿದುಹೋಯಿತು.

## ದನಗಳ ಪ್ರಶ್ನೆ

ಇನ್ನು ನಿಮ್ಮ ದನಗಳ ಪ್ರಶ್ನೆ. ಆಹಾರ ಪದ್ಧತಿ ದನಗಳಿಗೂ ಬದಲಾಗಲೇಬೇಕು. ನಿಮ್ಮ ಎತ್ತು, ಎಮ್ಮೆಗಳಿಗೆ ಪರಿಸ್ಥಿತಿಯನ್ನು ವಿವರಿಸಿ ಹೇಳಬೇಕು. ಮಂತ್ರಿಯಾದ ನಾನು ನಿಮಗೆ ಹೇಗೆ ಹೇಳುತ್ತೇನೋ, ನೀವೂ ಹಾಗೆಯೇ ದನಗಳಿಗೆ ಹೇಳಿರಿ ನಾನೇ ನಾಳೆ ದನಗಳ ಸಭೆಯೊಂದನ್ನು ಕರೆದು ಈ ವಿಷಯವನ್ನು ಹೇಳುವವನಿದ್ದೆ. ಆದರೆ ದುರ್ದೈವ ವಶಾತ್–ಅಲ್ಲಲ್ಲ–ಸುದೈವ ವಶಾತ್ ನಾಳೆ ಬೆಂಗಳೂರಲ್ಲಿ ನನ್ನ ಸಹ ಮಂತ್ರಿಗಳ ಮನೆಯಲ್ಲಿ ಒಂದು ಮದುವೆಯ ಅದ್ಧೂರಿ ಊಟ ಇದೆ. ಸಹಸ್ರಾರು ಜನಕ್ಕೆ ಊಟ ಇದೆ, ಇಡೀ ಬೆಂಗಳೂರಿಗೇ ಕಣ್ಣು ಕುಕ್ಕುವಂತಹ ದೀಪಾಲಂಕಾರ ಇದೆ. ಅದಕ್ಕಾಗಿ ನಾನು ಹೋಗಲೇಬೇಕಾಗಿದೆ. ಏಕೆಂದರೆ ನಾಳೆ ಅವರ ಮಂತ್ರಿ ಪದವಿ ಹೋದರೆ ಅವರು ಇಷ್ಟು ಬೃಹತ್ ರೂಪದಲ್ಲಿ ಊಟ ಏರ್ಪಡಿಸುತ್ತಾರೆಯೆ? ಇಲ್ಲ, ಇಲ್ಲಾ, ಯಾಕೆ? ಮಾಜಿ ಮಂತ್ರಿಗಳಿಗೆ ಉಡುಗೊರೆ ಕೊಡುವಷ್ಟು ಮೂರ್ಖರಾರೂ ನಮ್ಮ ದೇಶದಲ್ಲಿಲ್ಲ. ನಮ್ಮ ರಾಷ್ಟ್ರದಲ್ಲಿಲ್ಲ, ನಮ್ಮ ನಾಡಲ್ಲಿಲ್ಲ.

ಈ ಕಾರಣದಿಂದಾಗಿ ನೀವು ನಿಮ್ಮ ಜಾನುವಾರುಗಳ ಆಹಾರವನ್ನು ಮೊದಲು ಬದಲು ಮಾಡಿರಿ ನಿಮ್ಮ ಎಮ್ಮೆ, ಹಸುಗಳಿಗೆ ಜಿಲೇಬಿ ಕೊಡಿರಿ. ಯಾಕೆ ತಿನ್ನುವುದಿಲ್ಲ ನೋಡಿಯೇ ಬಿಡುತ್ತೇನೆ. ನಿಮ್ಮ ಧಾರವಾಡದಲ್ಲಿಯೇ ಬೇಕಾದಷ್ಟು ದೂಸ್‌ಪೇಡಾ ಸಿಕ್ಕುತ್ತದೆ. ದನಗಳಿಗೆ ಅದನ್ನು ತಿನಿಸಿರಿ, ನೀವು ಮೇವನ್ನು ತಿನ್ನಿರಿ ಈಗ ಇಬ್ಬರ ಆಹಾರ ಪದ್ಧತಿಯಲ್ಲೂ ಬದಲಾವಣೆ ಆದಂತಾಯಿತು.

ಕಡೆಯದಾಗಿ ಈ ಒಂದು ಮಾತನ್ನು ಹೇಳಿ ಇನ್ನು ನನ್ನ ಚಿಕ್ಕ ಭಾಷಣವನ್ನು ಪುರಾಮಾಡುತ್ತೇನೆ. ಬರಬಿದ್ದಾಗ ಜನ ಕೂಳಿಲ್ಲದೆ ಸಾಯುವುದು ಸಹಜ. ಸತ್ತರೇನಾಯಿತು? ಜಾತಸ್ಯ ಮರಣಂ ಧ್ರುವಂ–ಅಂದರೆ ಏನು? ಜಾತಸ್ಯ ಅಂದರೆ ಉತ್ತಮ ಜಾತಿಯವನಾದ, ಧ್ರುವಂ ಅಂದರೆ ಧ್ರುವನೂ

ಕೂಡಾ, ಮರಣಂ ಅಂದರೆ ಸತ್ತ. ಆದಕಾರಣ ಸಾಯುವುದರಲ್ಲಿ ಏನೂ ತಪ್ಪಿಲ್ಲ. ಇನ್ನೊಂದು ಮಾತು-ಉಂಡವರೂ ಸಾಯುತ್ತಾರೆ, ಉಣ್ಣದವರೂ ಸಾಯುತ್ತಾರೆ. ಹೀಗೆಂದ ಮೇಲೆ ಸಾಮಾನ್ಯ ಪ್ರಜೆಗಳಾದ ನೀವೂ ಉಣ್ಣ ಬೇಕೇಕೆ? ಸಾಯುವುದೇ ನಿಶ್ಚಯ ಅಂದಮೇಲೆ ನೀವು ಉಣ್ಣುವುದು ವ್ಯರ್ಥ ವಲ್ಲವೇ ? ಮಂತ್ರಿಗಳ ಮಾತು ಬೇರೆ, ಅವರು ಉಂಣಲೇಬೇಕು—ಯಾಕಂದರೆ ಅವರು ಭಾಷಣ ಮಾಡಬೇಕು. ಆದಕಾರಣ ನೀವು ಸಾವಿಗೆ ಅಂಜಬೇಕಿಲ್ಲ. ಸತ್ತರೆ ಮಾತ್ರ ಏನು ? ಮತ್ತೆ ಹುಟ್ಟುತ್ತೀರಿ. ಪುನರಪಿ ಜನನಂ, ಪುನರಪಿ ಮರಣಂ ಎಂದು ಕ್ರೈಸ್ತ ಮತವನ್ನು ಸ್ಥಾಪನೆ ಮಾಡಿದ ಶರಣ ಜಾರ್ಜ್ ಬರ್ನಾಡ್ ಷಾ ಒಂದು ಕಡೆ ಹೇಳಿದ್ದಾನೆ.

**ಅವಶ್ಯಕತೆ ಇಲ್ಲ**

ಊಟದ ವಿಷಯ ಮುಗಿಯಿತು. ಇನ್ನು ಬೆಳಕು. ಎಲೆಕ್ಟ್ರಿಕ್ ಕರೆಂಟ್‌ನಲ್ಲಿ ಕೇವಲ ಸೇಕಡಾ ಇಪ್ಪತ್ತೈದು ಖೋತಾ ಮಾಡಿದುದಕ್ಕೇ ನೀವು ಬೊಬ್ಬೆ ಹಾಕುತ್ತೀರಿ. ಇದು ಶುದ್ಧ ತಪ್ಪು. ನೀವೆಲ್ಲರೂ ನಮ್ಮ ಹಿಂದಿನ ಕಾಲದ—ಅಂದರೆ ಪುರಾತನ ಕಾಲದ—ಅಂದರೆ ಸನಾತನ ಕಾಲದ, ಅಲ್ಲಲ್ಲ ಸನಾತನ ಕಾಲದ ಋಷಿಗಳಂತೆ ಸ್ವಯಂಪ್ರಕಾಶವನ್ನು ಬೆಳೆಸಿಕೊಳ್ಳಬೇಕು. ಆಗ ನಿಮಗೆ ಈ ದೀಪದ ಅವಶ್ಯಕತೆಯೇ ಇಲ್ಲ.

ನಾನು ದೀರ್ಘ ಭಾಷಣವನ್ನು ಮಾಡುವದಿಲ್ಲ. ಏಕೆಂದರೆ ನನಗೆ ಮೊದಲಿನಿಂದಲೂ ಆ ಅಭ್ಯಾಸವೇ ಇಲ್ಲ. ಅಲ್ಲದೆ ಮಾಡಕೂಡದೆಂದು ನನ್ನ ಡಾಕ್ಟರು ನನ್ನಲ್ಲಿ ವಿನಂತಿಯನ್ನು ಮಾಡಿಕೊಂಡಿದ್ದಾರೆ. ಆದಕಾರಣ ನಾನು ದೀರ್ಘ ಭಾಷಣವನ್ನು ಮಾಡಲಿಲ್ಲ ಎಂದು ನೀವು ಮನಸ್ಸಿಗೆ ಬೇಸರಮಾಡಿ ಕೊಳ್ಳುವುದು ಬೇಡ.

ಈಗ ನಾನು ಒಂದು ಮಹತ್ವದ ವಿಷಯವನ್ನು ನಿಮ್ಮ ಮುಂದು ಇಡಲು ಇಚ್ಛಿಸುತ್ತೇನೆ. ಅದೇನೆಂದರೆ ಇದು. ಈಗ ಬರ ಬಂದಿದೆ, ಇಂದಿಲ್ಲ ನಾಳೆ ಹೋಗು ತ್ತದೆ. ಯಾಕಂದರೆ ತೂಗುವ ತೊಟ್ಟಿಲು ನಿಲ್ಲಲೇ ಬೇಕು. ಇದರ ಬಗ್ಗೆ ನಾವು ತಲೆ ಕೆಡಿಸಿಕೊಳ್ಳಬೇಕಿಲ್ಲ. ಆದರೆ ಈ ಬರ ಮೇಲಿಂದ ಮೇಲೆ ಬರಬಾರದು.

ಮುಂದಿನ ವರ್ಷವೂ ಇದೇರೀತಿ ಬರಬಿದ್ದರೆ ನೀವೇನು ಮಾಡಬಲ್ಲಿರಿ ? ಆಗ ಹಣಕ್ಕಾಗಿ ಯಾರ ಬಳಿ ಓಡಾಡುವುದು ? ಈ ಬಗ್ಗೆ ಯೋಚಿಸಿ ನಾನು ಹೊಸ ದೊಂದು ಯೋಜನೆ ಮಾಡಿದ್ದೇನೆ. ಮುಂದಿನ ಬರಕ್ಕಾಗಿ ಮಂತ್ರಿ ಪರಿಹಾರ ನಿಧಿಗಾಗಿ ಈಗಿಂದಲೆ ಹಣಸಂಗ್ರಹ ಕಾರ್ಯವನ್ನು ಆರಂಭಿಸುವವನಿದ್ದೇನೆ. ಅದಕ್ಕಾಗಿ ನೀವು—ಅಂದರೆ ನೀವೆಲ್ಲರೂ ಕೊಡುಗೈ ದೊರೆಗಳಾಗಿ ಧಾರಾಳವಾಗಿ ಹಣವನ್ನು ಕೊಡಬೇಕು. ಹೂಂ ಕೊಡಿರಿ.

(ಮಂತ್ರಿಗಳು ಕೈ ಚಾಚುವರು)

(ಮಂತ್ರಿಗಳ ಹೆಂಡತಿ ನಿದ್ರೆಯಿಂದೆಚ್ಚತ್ತು) ಸುಮ್ಮನೆ ಮಲಗಿರಿ, ಹಾಗ್ಯಾಕೆ ಕೈ ತಿವೀತೀರಿ.

(ಮಂತ್ರಿಗಳಿಗೆ ಎಚ್ಚರವಾಯಿತು.)

# ತಥ್ ಸಿಗರೇಟು !

ಸಿಗರೇಟಿನಲ್ಲಿ ಎರಡು ಮಹತ್ವದ ಗುಣಗಳಿವೆ—ಜೇಬಿನಲ್ಲಿದ್ದರೆ ಸೇದು ಅನ್ನುತ್ತದೆ. ಇಲ್ಲದಿದ್ದರೆ ತೆಕ್ಕೊ, ಸೇದು ಅನ್ನುತ್ತದೆ. ಚಿಕ್ಕ ಮಗುವಿನಂತೆ ಮಹಾ ಹಟಮಾರಿ ಅದು. ಕೊಟ್ಟರೆ ಸುಮ್ಮನಾಗುತ್ತದೆ, ಬೈದರೆ ಗೊಣಗುಟ್ಟುತ್ತದೆ, ಹೊಡೆದರೆ ? ಅತ್ತು ಮಲಗುತ್ತದೆ. ಎದ್ದೊಡನೆ ಮತ್ತೆ ಅದೇ ಹಾಡು—ಬೇಕು ಬೇಕು. ಸಿಗರೇಟಿಗೆ ಸ್ಮರಣಾಶಕ್ತಿ ಅತ್ಯದ್ಭುತ, ಮರೆವು ಎಂಬುದೇ ಇಲ್ಲ.

ಸಿಗರೇಟಿನ ಬಗ್ಗೆ ಸಾಹಿತ್ಯ ಎಷ್ಟಿದೆ ? ಮಾರ್ಕ್‌ಟ್ವೈನ್ ಹೇಳುತ್ತಾನೆ—ನಾನೆಂದೂ ಒಂದು ಬಾರಿಗೆ ಒಂದು ಸಿಗಾರ್‌ಕಿಂತಲೂ ಹೆಚ್ಚು ಸೇದುವುದಿಲ್ಲ ಎಂದು ನಿರ್ಧರಿಸಿದ್ದೇನೆ. ಸಿಗರೇಟು ಸಂಪೂರ್ಣ ಸಂತೃಪ್ತಿಯನ್ನು ಕೊಡುತ್ತದೆ, ಹಿಂದೆಯೇ ಇನ್ನೊಂದನ್ನು ಹಚ್ಚು ಅನ್ನುತ್ತದೆ. ಜಗತ್ತಿನಲ್ಲಿ ಕಾಣುವ ಸಾವು ನೋವುಗಳಿಗೆಲ್ಲ ಕಾರಣರಾದವರು ಸಿಗರೇಟ್ ಸೇದದವರೇ—ನೀರೋ ಧೂಮ ಪಾನ ಮಾಡುತ್ತಿರಲಿಲ್ಲ, ಲೇಡಿ ಮ್ಯಾಕ್‌ಬತ್ ಕೂಡಾ ಅಷ್ಟೇ. ಇದರ ನೀತಿ ಏನೆಂದರೆ.... ಮಾರ್ಕ್‌ಟ್ವೈನ್ ಇನ್ನೊಂದು ಮಾತನ್ನು ಹೇಳಿದ್ದಾನೆ. ನಾನು ಧೂಮಪಾನದ ಬಗ್ಗೆ ಒಂದು ನಿಯಮವನ್ನು ಇಟ್ಟುಕೊಂಡಿದ್ದೇನೆ. ನಿದ್ರೆಯಲ್ಲಿ ಎಂದೂ ಸೇದಿಲ್ಲ. ಎಚ್ಚೆತ್ತಾಗ ಬಿಟ್ಟಿಲ್ಲ. ಲಿನ್‌ಯುಟಂಗ್‌ನ ಉಕ್ತಿ ಒಂದಿದೆ—ಧೂಮಪಾನ ಮಾಡುವ ಗಂಡಂದಿರನ್ನು ಸಹಿಸುವ ಹೆಂಡಂದಿರಿದ್ದಾರೆ, ಸುಖೀ

ದಾಂಪತ್ಯದ ಕುರುಹು ಇದಲ್ಲವೇ ? ಧೂಮಪಾನ ಮಾಡುವವನು ಸನ್ಯಾಸಿ ಯಂತೆ ಧ್ಯಾನಿಸುತ್ತಾನೆ, ಉಪಕಾರಿಯಂತೆ ವರ್ತಿಸುತ್ತಾನೆ ಎಂದಿದ್ದಾನೆ ಲಿಟ್ಟನ್. ಸಿಗರೇಟಿಗೆ ಬೂದಿ, ಗುಲಾಬಿಗೆ ಮುಳ್ಳು ಇರಬಾರದಿತ್ತೇನೋ ಎಂದೊಬ್ಬ ಕವಿ ಪೇಚಾಡುತ್ತಾನೆ. ನನ್ನ ಕೀರ್ತಿ, ನನ್ನ ಸಂಪತ್ತು ಯಾವುದೂ ಹೋಗಲಾರ ದಷ್ಟು ದೂರ, ಅಷ್ಟು ಎತ್ತರ ನನ್ನ ಸಿಗರೇಟಿನ ಹೊಗೆ ಸುರುಳಿ ಸುರುಳಿಯಾಗಿ ಹೋಗುತ್ತದೆ ಎಂದೊಬ್ಬ ಕವಿ ಹೆಮ್ಮೆಪಟ್ಟುಕೊಳ್ಳುತ್ತಾನೆ. ಕಿಪ್ಲಿಂಗ್ ಚುಟ್ಟಾ ವನ್ನು ಹೆಂಣಿನೊಂದಿಗೆ ಹೋಲಿಸುತ್ತಾ ಹೀಗೆಂದಿದ್ದಾನೆ—ಹೆಂಣು ಬರೀ ಹೆಂಣು ಮಾತ್ರ, ನನ್ನ ಸಿಗಾರ್ ಹೊಗೆಯೂ ಹೌದು ! ಹೆಂಣಿಗೆ ಮನಶ್ಶಾಂತಿಯನ್ನು ಕೊಡಲು ಕಂಣೀರು ಸಾಕು, ಆದರೆ ಗಂಡಿಗೆ ಸಿಗಾರೇ ಬೇಕು. ಧೂಮಪಾನ ಅನೇಕರ ಗೆಳೆಯ—ಗೆಳೆಯರಿಲ್ಲದವರಿಗೆ ದೇವರು, ಧೂಮಪಾನವನ್ನು ತೆಗಳಿ ಬರೆದವರಿಗೂ ಕೊರತೆ ಇಲ್ಲ—ದುಃಖವಾದಂತೆಲ್ಲ ಸಿಗರೇಟು ಬೇಕೆನಿಸುತ್ತದೆ—ಸಿಗರೇಟು ಸೇದಿದಂತೆಲ್ಲ ದುಃಖ ಹೆಚ್ಚುತ್ತದೆ. ಕೈಲೊಂದು ಪುಸ್ತಕ, ಬಾಯ್ಲೊಂದು ಸಿಗರೇಟು, ನನ್ನ ಬಡ ಕೋಣೆಯೇ ನನ್ನ ರಾಜಗೃಹ ಎಂದು ಹಾಡಿದವರೂ ಇದ್ದಾರೆ. ಹೀಗೆಯೇ ಸಿಗರೇಟಿನ ಬಗ್ಗೆ ಹೇಳುತ್ತ ಹೋದರೆ ಮುಖ್ಯವಾಗಿ ಹೇಳಬೇಕಾದುದೇ ಮರೆತು ಹೋಗುವ ಸಂಭವವಿದೆ.

ನನ್ನೊಬ್ಬ ಗೆಳೆಯ ಬಹು ಹೆಮ್ಮೆಯಿಂದೊಮ್ಮೆ ಜಂಬ ಕೊಚ್ಚಿಕೊಂಡ.

"ನಾನು ಸಿಗರೇಟನ್ನು ಬಿಟ್ಟೆ"

"ಇದೇ ಮೊದಲ ಸಲ ತಾನೇ ? ನಾನು ನಿನ್ನಕಿಂತಲೂ ಬಹು ದೊಡ್ಡ ತ್ಯಾಗಿ ಕಣಯ್ಯಾ ! ನಾನು ಹತ್ತು ಬಾರಿ ಬಿಟ್ಟಿದ್ದೇನೆ"

ಎಂದು ನಾನು ಉತ್ತರಿಸಿದಾಗ ಪೆಚ್ಚಾದ. ಹಿಂದೆಯೇ ಗೊಣಗಿದ.

"ನಾನೂ ಹಾಗೆಯೇ ಮಾಡಲು ಪ್ರಯತ್ನಿಸುತ್ತೇನೆ"

ಬಹು ಬೇಗ ಈ ಹಾಳು ಸಿಗರೇಟು ಅಭ್ಯಾಸವಾಯಿತು. ಬಹು ಬೇಗ ಅಂದರೆ ಯಾವಾಗ ? ಯಾರೂ ಬಾಯಲ್ಲಿ ಸಿಗರೇಟು ಇಟ್ಟುಕೊಂಡೇ ಹುಟ್ಟು ವುದಿಲ್ಲ ಎಂಬ ಮಾತು ಸತ್ಯ, ಈ ಬಗ್ಗೆ ಸಾಕ್ಷಿ ಹೇಳಲು ಅನೇಕ ಸೂಲಗಿತ್ತಿ ಯರೂ ಮುಂದು ಬಂದಾರು. ಆದರೆ ಚಿಕ್ಕಂದಿನಲ್ಲಿಯೇ ಸುರುವಾಯಿತು.

ನದಿಯು ಉಗಮದಂತೆ ಸಿಗರೇಟ್ ಅಭ್ಯಾಸದ ಆರಂಭವೂ ಬಹು ಕಿರಿದು. ಯಾರ ಗಮನಕ್ಕೂ ಬರುವುದೇ ಇಲ್ಲ. ಕಡೆಗೊಂದು ದಿನ ಹೆಮ್ಮರವಾಗಿ ಬೆಳೆದು ಭೂತಾಕಾರವಾಗಿ ನಿಲ್ಲುತ್ತದೆ. ಆಗ ಅದನ್ನು ಇದಿರಿಸುವ ಶಕ್ತಿ ಯಾವ ಭೋಗಿಗೂ ಇಲ್ಲ—ಯೋಗಿಗೂ ಇಲ್ಲ

ನೀನು ನಿನ್ನ ಮೊಟ್ಟಮೊದಲ ಸಿಗರೇಟನ್ನು ಎಂದು ಸೇದಿದಿ? ಎಂದಾ ರಾದರೂ ಕೇಳಿದರೆ ನನ್ನಲ್ಲಿ ಸಿದ್ಧವಾದ ಉತ್ತರವಿಲ್ಲ. ಯಾವ ಮೊಟ್ಟಮೊದಲ ಸಿಗರೇಟು ಎಂದೇ ಕೇಳಬೇಕು. ಅಂತೂ ಸಿಗರೇಟು ಸೇದುವ ಜನ ಎಲ್ಲೆಲ್ಲಿಯೂ ಇದೆ. ಕೆಲವರಿಗೆ ಇಂತಹ ಸಿಗರೇಟೇ ಆಗಬೇಕು. ಇನ್ನು ಕೆಲವರು ಹಾಗಲ್ಲ—ಯಾವ ಸಿಗರೇಟು ಆದರೂ ಸರಿಯೇ—ಆದರೆ ಅದು ಬೇರೆಯವರದು ಆಗಿರ ಬೇಕು. ಆಗಲೇ ಅದು ರುಚಿ, ಇದರಲ್ಲಿ ಏನೂ ತಪ್ಪಿಲ್ಲ. ಎಲ್ಲರೂ ಸೇದಲು ಆರಂಭಿಸಿದುದು ಅನ್ಯರ ಸಿಗರೇಟಿನಿಂದಲೇ!

ಅನೇಕ ಹೆಂಡಿರಂತೆ ನನ್ನ ಹೆಂಡತಿಯೂ ಸಿಗರೇಟು ದ್ವೇಷಿ. ನೀವು ಸಿಗರೇಟು ಸೇದುವುದನ್ನು ಬಿಡಬೇಕು ಎಂದು ಕೊಂಚ ದೃಢವಾಗಿಯೇ ಹೇಳಿದ ಳೊಮ್ಮೆ.

"ಅದೊಂದೇ ಅಲ್ಲ. ನಾನು ಬಿಡಬೇಕಾದುವು ಬಹಳ ಇವೆ ಆದರೆ ಅವಕ್ಕೂ ಒಂದು 'ಸೀನಿಯಾರಿಟಿ' ಎಂಬುದಿದೆ. ಕಡೆಯಲ್ಲಿ ಬಂದುವು ಮೊದಲು ಮೊಮ್ಮಕ್ಕಳು, ನಂತರ ಮಕ್ಕಳು, ಅನಂತರ ಹೆಂಡತಿ, ಅನಂತರ ಸಿಗರೇಟು"

"ಪರವಾ ಇಲ್ಲ. ಸೇದಿಕೊಳ್ಳಿ"

ಎಂಬ ಅನುಗ್ರಹ ವಾಕ್ಯ ತಾನಾಗಿ ಹೊರಬಂತು.

ಚಿಕ್ಕವರು ಧೂಮಪಾನ ಮಾಡಕೂಡದು ಎಂದು ಹೇಳದ ಹಿರಿಯರೇ ಇಲ್ಲ. ಆದರೆ ಈ ಚಿಕ್ಕವರದೊಂದೇ ಪ್ರಶ್ನೆ—ಹಿರಿಯರೇ ಸೇದದಿದ್ದರೆ ಈ ಚಿಕ್ಕವರು ಹೇಗೆ ಸೇದುತ್ತಿದ್ದರು? ಈ ಉಪದೇಶ ಅನಾದಿ ಕಾಲದಿಂದಲೂ ಹಿರಿಯರಿಂದ ಚಿಕ್ಕವರಿಗೆ ಬಂದಿದೆ. ಅದೇ ಚಿಕ್ಕವರು ದೊಡ್ಡವರಾದಾಗ ತಮ್ಮ ಚಿಕ್ಕವರಿಗೆ ಇದೇ ಮಾತನ್ನು ಹೇಳಿ ಅವರಿಂದ ಬೆಂಕಿಪೆಟ್ಟಿಗೆ ಪಡೆಯುತ್ತಾರೆ.

ಈ ಒಂದು ಅಭ್ಯಾಸ ನನ್ನನ್ನು ಆಗಾಗ ಇಬ್ಬಂದಿಯಲ್ಲಿ ಹಾಕಿದುದೂ ಉಂಟು. ಎಂಟು ಮಿತ್ರರು ಸೇರಿ ಮುಂಬಯಿಗೆ ಹೋಗಿದ್ದೆವು. ನನ್ನ ಕೆಲ

ಗೆಳೆಯರಿಗೆ ಸಿನೆಮಾ ನೋಡುವ ಹುಚ್ಚು. ಬಹುಮತವನ್ನು ಗೌರವಿಸಿ ನಾನೂ ಅವರೊಂದಿಗೆ ಹೊರಟೆ, ಸಾಲಾಗಿ ಕುರ್ಚಿಗಳಲ್ಲಿ ಕುಳಿತೆವು. ನಾನೇನಮ್ಮ ಗುಂಪಿಗೆ ಕಡೆ, ನನ್ನ ಪಕ್ಕದಲ್ಲೊಂದು ಅಪರಿಚಿತ ಹೆಂಣು—ಅದು ಮುಂಬಯಿ!

ಆಗಿನ್ನೂ ನಾಟಕ, ಸಿನೆಮಾ ಥಿಯೇಟರುಗಳಲ್ಲಿ ಈ ಹಾಳು ಮಡಿವಂತಿಕೆ ಇರಲಿಲ್ಲ—ಅವೇನು ದೇವಾಲಯ ಕೆಟ್ಟುಹೋದುವೇ? ಬಾರ್‌ಗಳಲ್ಲಿ ಥಿಯೇಟರ್‌ಗಳಲ್ಲಿ ಧೂಮಪಾನಕ್ಕೆ ನಿಷೇಧವೆಂಬುದಾದರೆ ಇನ್ನು ಸಿಗರೇಟು ಬದುಕುವುದೆಂತು? ನನಗೋ, ಗಂಟೆಗೊಮ್ಮೆ ಸಿಗರೇಟು ಹಚ್ಚುವ ಚಟ. ಪಕ್ಕದಲ್ಲಿ ಕುಳಿತಿರುವ ಮಹಿಳೆಗೆ ಇದು ಸಹನೆಯೇ? ಆಕೆಯ ಗಂಡ ಧೂಮಪಾನ ಪ್ರೇಮಿಯೇ? ಆಕೆಗೆ ಮದುವೆಯಾಗಿದೆಯೇ? ನನ್ನೀ ಪ್ರಶ್ನೆಗಳಿಗೆ ಉತ್ತರ ಹೇಳುವವರಾರು? ಆಕೆಯೇ ಹೇಳಬೇಕು—ಅಪರಿಚಿತ ಹೆಂಣನ್ನು ಹೀಗೆಲ್ಲ ಕೇಳುವುದೇ? ನನ್ನ ಮಿತ್ರರೊಬ್ಬರನ್ನು ಈ ಕುರ್ಚಿಗೆ ಬರಲು ವಿನಂತಿ ಮಾಡಿಕೊಂಡೆ. ಅವರು ಒಪ್ಪುತ್ತಾರೆಯೇ? ಅವರಿಗೆ ಹೆಂಣು ಅಂದರೆ 'ಅಲರ್ಜಿ!'

"ಥೂ! ನೀನೇ ಕೂಡು" ಅಂದರು.

ದೇವರೇ ಗತಿ ಎಂದು ಉಸಿರು ಬಿಗಿಹಿಡಿದು ಕುಳಿತೆ. ಎಷ್ಟು ಸಮಯ? ಕತ್ತಲಾಯಿತು, ಪಿಕ್ಚರ್ ಇನ್ನೂ ಆರಂಭವಿಲ್ಲ, ಏನೋ ಅದು ಇದು ತೋರಿಸುತ್ತಿದ್ದರು.

ಇದಕ್ಕಿದ್ದಂತೆ ಪಕ್ಕದಲ್ಲಿ ಬೆಳಕು! ನನ್ನ ಬದಿ ಕುಳಿತಿದ್ದ ಮಹಿಳಾಮಣಿ ಕಡ್ಡಿಕೆರೆದು ಸಿಗರೇಟು ಹತ್ತಿಸಿದಳು. ಬದುಕಿದೆ ಎಂದಂದುಕೊಂಡೆ. ಸೀತಾ, ಸಾವಿತ್ರಿಯರ ನಾಡಾದ ನಮ್ಮ ಪವಿತ್ರ ಭಾರತದಲ್ಲಿ ಇಂತಹ ಮಹಾಮಹಿಳೆ! ಸಿನೆಮಾ ಮುಗಿಯುವ ಒಳಗಾಗಿ ನಮ್ಮಿರ್ವರ ಮಧ್ಯೆ ಒಂದು ಬೆಂಕಿಪೆಟ್ಟಿಗೆ ಎಂಟು–ಹತ್ತುಬಾರಿ ಓಡಾಡಿತು, ಧನ್ಯನಾದೆ ಎಂದುಕೊಂಡೆ. ಹೊರ ಬಂದ ಮೇಲೆ ಗೆಳೆಯರೊಬ್ಬರು 'ಪಿಕ್ಚರ್ ಹೇಗಿತ್ತು?' ಎಂದು ಕೇಳಿದರು.

"ಕತ್ತಲಲ್ಲಿ ಸರಿಯಾಗಿ ಕಾಣಲಿಲ್ಲ, ಬೆಳಕು ಬಂದೊಡನೆ ಇಲ್ಲವೇ ಇಲ್ಲ"

ಸಿಗರೇಟು ದ್ವೇಷಿ ಮಿತ್ರರೊಬ್ಬರು ಸಿಕ್ಕಿದರು.

"ನೀವು ಬಹಳ ಸಿಗರೇಟು ಸೇದುತ್ತೀರಿ" ಎಂಬುದವರ ಪಲ್ಲವಿ. ಕಡಿಮೆ ಮಾಡಿ ಎಂದವರ ಉಪದೇಶ. ನನ್ನ ಪರಿಸ್ಥಿತಿಯನ್ನು ಅವರಿಗೊಮ್ಮೆ ವಿವರಿಸಿದೆ.



ಬದಿಯಲ್ಲಿದ್ದ ಮಹಿಳಾಮಣಿ ಸಿಗರೇಟ್ ಹತ್ತಿಸಿತು – ಸಧ್ಯ ಬದುಕಿದೆ !

"ಮಿತ ಎಂಬುದನ್ನು ನಾನರಿಯೆ, ಎಲ್ಲದರಲ್ಲೂ ಅಷ್ಟೇ. ಪೂರ್ತಿ ಬಿಡ ಬಲ್ಲೆ, ಇಲ್ಲವೇ ಪೂರ್ತಿ ಮಾಡಬೇಕು"

"ಸಿಗರೇಟು ಏನನ್ನುತ್ತದೆ ಗೊತ್ತೆ ? ಒಂದು ತುದಿಗೆ ಬೆಂಕಿ, ಇನ್ನೊಂದು ತುದಿಗೆ ಮೂರ್ಖ ಎಂದನ್ನುತ್ತದದು ಏನೇ ಆಗಲಿ, ನಾನು ನಿಮ್ಮ ಸಿಗರೇಟನ್ನು ಬಿಡಿಸುತ್ತೇನೆ"

ಎಂದು ಬಹು ಆತ್ಮವಿಶ್ವಾಸದಿಂದ ಹೇಳಿಕೊಂಡರು. ನಾನಾವುದಕ್ಕೆ ಬೇಡ ವೆಂದಿದ್ದೇನೆ ?

"ಪ್ರಯತ್ನ ನಿಮ್ಮದು, ಫಲ ನನ್ನದು" ಎಂದಂದೆ

ಆ ದಿನ ಬಂದೇ ಬಂತು—ನನ್ನ ಗೆಳೆಯರ ಮನೆಯಲ್ಲಿ ಒಂದು ಮಧ್ಯಾಹ್ನ ಸಮಾರಂಭದ ಏರ್ಪಾಟು. ಮೂವರು ಅತಿಥಿಗಳು, ನನ್ನ ಮಿತ್ರರ ಸಡಗರವೇ ಸಡಗರ.

ಚಹಾ ಸಮಾರಂಭ ಅಂದರೆ ಬರೀ ಚಹಾ ಇರುತ್ತೆಯೇ ? ಎರಡೆರಡು ಸಿಹಿ, ಒಂದು ಖಾರ. ಚಹಾ. ಇದ್ದಕ್ಕಿದ್ದಂತೆ ನನ್ನ ಮಿತ್ರರು ಇಪ್ಪತ್ತು ಸಿಗರೇಟಿನ ಒಂದು ಗೋಲ್ಡ್‌ಫ್ಲೇಕು ಪ್ಯಾಕನ್ನು ನನ್ನ ಮುಂದು ಎಸೆದರು.

ಸಿಗರೇಟೊಂದನ್ನು ಹೊರ ತೆಗೆಯುತ್ತ

"ಇವರು ನನ್ನ ಸಿಗರೇಟನ್ನು ಬಿಡಿಸುವವರು"

ಎಂದಂದು ಚಿಕ್ಕದಾಗಿ ನಕ್ಕೆ.

"ಈಗಲೆ ಹೊತ್ತಿಸಬೇಡಿ, ಒಂದು ನಿಮಿಷ ನಿಲ್ಲಿ"

ಎಂದಂದು ಒಳಕ್ಕೆ ಹೋದರು. ಸಿಗರೇಟಿನ ಶವ ಸಂಸ್ಕಾರ ಮಾಡಲು ಸಿದ್ಧರಾಗಿ ಕೈಲಿ ಬೆಂಕಿಕಡ್ಡಿ ಹಿಡಿದು ಕಾದು ಕುಳಿತೆವು.

ಕೈಲೊಂದು ಗಾಜಿನ ಜಗ್ಗು ; ಅದರಲ್ಲಿ ನೀರು. ಬರಿ ಗ್ಲಾಸುಗಳನ್ನು ಹಿಡಿದು ಬಂದರು ಮಿತ್ರರು.

"ಇದನ್ನು ಮೊದಲು ಕೊಂಚ ಬಾಯಿಮುಕ್ಕಳಿಸಿ ಉಗಿದುಬಿಡಿ. ಅನಂತರ ಸಿಗರೇಟು ಹಚ್ಚಿ, ಆ ಮಜಾ ನೋಡಿ"

ಆ ನೀರಲ್ಲಿ ಏನು ಬೆರೆತಿದೆಯೋ ನಮಗೇನು ಗೊತ್ತು ? ನನ್ನಿತರ ಗೆಳೆಯರು ಅನುಮಾನಿಸಿದರು.

"ಏನೇ ಇದ್ದರೂ ಫಾಲಿಡಾಲಂತೂ ಇರಲಾರದು" ಎಂದು ನಾನಂದೆ.

"ನಿಮಗೇಕೆ ಅನುಮಾನ ?"

ಎಂದವರೇ ನನ್ನ ಅತಿಥೇಯ ಮಿತ್ರರು ತಾವೇ ಮುಂದಾದರು. ಕಾಲು ಗ್ಲಾಸಿನಷ್ಟು ನೀರನ್ನು ಬಾಯಿಗೆ ಸುರಿದು ಮುಕ್ಕಳಿಸಿ ಉಗಿದರು. ನಾವೆಲ್ಲರೂ ಅವರನ್ನೇ ಅನುಸರಿಸಿದವು. ಆ ನೀರು ಕೊಂಚ ಒಗರು ಒಗರಾಗಿತ್ತು ನಾಲಗೆಗೆ.

"ಹೂಂ, ಈಗ ಸಿಗರೇಟು ಹಚ್ಚಿರಿ."

ಎಲ್ಲರೂ ಒಂದೇ ಬಾರಿಗೆ ಸಿಗರೇಟಿಗೆ ಬೆಂಕಿ ಇಟ್ಟೆವು, ಮರುಕ್ಷಣವೇ ಥೂ ! ಎಲ್ಲರ ಸಿಗರೇಟೂ ನೆಲಕ್ಕೇ. ಬಾಯಿಯೆಲ್ಲವೂ ಹೊಲಸು, ನಾಲಗೆಯ ಮೇಲೆ ಹೊಗೆ ಹೋದರೆ ಅದೇನೋ ಅಸಹ್ಯ !

"ಏನಿದೆಯಯ್ಯ ಆ ನೀರಲ್ಲಿ ?"

"ಏನೂ ಇಲ್ಲ ಕೊಂಚ ಪಟೆಗ ಕರಗಿಸಿದ್ದೇನೆ ಅಷ್ಟೆ"

ಬಹು ಹೊತ್ತು ಸಿಗರೇಟು ಎಳೆಯುವುದೇ ಸಾಧ್ಯವಾಗಲಿಲ್ಲ. ಬಾಯಿ ತೊಳೆದು ತೊಳೆದು ಬೇಜಾರಾಯಿತು.

ಇದು ಒಳ್ಳೆಯ ಉಪಾಯ ಎಂದೆನಿಸಿತು. ಅಂದೇ ಒಂದು ರೂಪಾಯಿ ಕೊಟ್ಟು ಪಟೆಗ ತರಿಸಿದೆ. ಮಾರುದಿನ ಬೆಳಿಗ್ಗೆ ಅದರ ಸಾಧನೆ. ಪಟೆಗದ ನೀರು ಬಾಯಿ ಮುಕ್ಕಳಿಸಿದೆ, ಕೆಲ ಸಮಯದನಂತರ ಸಿಗರೇಟ್ ಹತ್ತಿಸಿದೆ, ಮೊದ ಮೊದಲು ಕೊಂಚ ಹೇಗೆ ಹೇಗೋ ಅನಿಸಿತು. ಅನಂತರ ಅದರ ರುಚಿಯೇ ಬೇರೆ ಎಂದನಿಸಿತು. ಕ್ರಮೇಣ ಇದೇ ಅಭ್ಯಾಸ. ಪಟಕದ ನೀರಿಲ್ಲದಿದ್ದರೆ ಸಿಗರೇಟಿನ ಸುಖವೇ ಇಲ್ಲ. ಬರೀ ಸಿಗರೇಟಿನ ಚಟ ದೂರವಾಯಿತು. ಪಟೆಗದ ನೀರು ಮತ್ತು ಸಿಗರೇಟು ಬೇಕೇ ಬೇಕು.

ನನ್ನ ಮಿತ್ರ ಮನೆಗೆ ಬಂದಾಗ ಕೇಳಿದ.

"ಹೇಗಿದೆ ಈಗ, ನಿನ್ನ ಸಿಗರೇಟ್ ಅಭ್ಯಾಸ ?"

ಪಟಕದ ಪೊಟ್ಟಣ, ಸಿಗರೇಟು ಡಬ್ಬಾ ಎರಡೂ ತಂದು ಮುಂದಿಟ್ಟೆ ದೇವರೇ ಗತಿ ಎಂದು.

ಎಷ್ಟು ವರ್ಷಗಳು ನಾನು ತಪಸ್ಸು ಮಾಡಿದುದು, ಆ ಪಟೆಗದ ನೀರಿನ ಅಭ್ಯಾಸದಿಂದ ಪಾರಾಗಲು ? ಏನೇ ಆಗಲಿ, ಥೂ ಸಿಗರೇಟು ಎಂದಂದೇ

ಸಿಗರೇಟು ಹಚ್ಚುವ ಅಭ್ಯಾಸ ಈಗ. ಸಿಗರೇಟು ಸಾಮಾನ್ಯ ವಸ್ತುವೇ? ಅದೊಂದು ಮಹಾ ತತ್ವಜ್ಞಾನಿ. ಅದು ಜನತೆಗೆ ಕಲಿಸುವ ಪಾಠ ಸಾಮಾನ್ಯವೇ ?

ತ್ಯಾಗವನು ಮಾಡೆಂದು ಅವರಿವರ ಉಪದೇಶ |
ರೋಗವದು ಉಪದೇಶಕರ ತ್ಯಾಗವೆಷ್ಟೋ ? ||
ಭೋಗಪಡುವವರು ಯಾರೊ, ಸುಟ್ಟು ತಾ ಭಸ್ಮ |
ಸಿಗರೇಟು ನೀನಾಗು ಕೇಳು ತಿಂಮ |

# ಅಲ್ಲಾಕೀ ಮೆಹರ್ಬಾನಿ

"ಅಲ್ಲಾಕೀ ಮೆಹರ್ಬಾನಿ"

ಎಂದು ಬಾಯಲ್ಲಿಯೇ ಅನ್ನುತ್ತ ರಹಿಮಾನ್ ಕೈ ಚಾಚಿದ, ಸೇಠನ ಅಡಿಗೆ ಆಳು ಚಹಾ ತಂದುಕೊಟ್ಟಾಗ. ಕೂಲಿ ತಾನು ಗಳಿಸಿದ್ದು, ಪುಕ್ಕಟೆ ಬಂದ ಚಹಾ ಅಲ್ಲಾ ಕೊಟ್ಟದ್ದು.

ದಿನಗೂಲಿಯ ಮೇಲೆ ರಹಿಮಾನನ ಗಳಿಕೆ. ಹೊಸದಾಗಿ ಬಂಗಲೆಗಳು ಎಲ್ಲಿ ಏಳುತ್ತವೆ? ಯಾವ ಶ್ರೀಮಂತರ ಮನೆಗಳಲ್ಲಿ ಮದುವೆಗಳಾಗುತ್ತವೆ? ಇದೇ ಸಿಗಾ ರಹಿಮಾನನಿಗೆ. ಪ್ರತಿಯೊಂದು ಎಕ್ಸ್‌ಟೆನ್ಸನ್‌ಗೂ ಹೋಗುತ್ತಿದ್ದ. ಬೆಳಿಗ್ಗೆ ಬೈಸಿಕಲ್ ಏರಿದರಾಯಿತು. ಇಂದಿರಾನಗರದಿಂದ ಹಿಡಿದು ನಿಜಲಿಂಗಪ್ಪ ಟವನ್‌ವರೆಗೂ ಬರೀ ಪ್ರದಕ್ಷಿಣೆ. ಅಂತೂ ಅದು ಹೇಗೋ ಪತ್ತೆ ಮಾಡುತ್ತಿದ್ದ, ವಾರಗಳ ಮುಂಚೆಯೇ ಯಜಮಾನರನ್ನು ಕಂಡು ಸಲಾಂ ಮಾಡಿ ಬಹು ದೈನ್ಯ ದಿಂದ ಹೇಳಿಕೊಳ್ಳುತ್ತಿದ್ದ.

"ಗೋಡೆ ಪೇಂಟಿಂಗು, ಬಾಗಿಲ ಪಾಲೀಸು ನಾನೇ ಮಾಡ್ತೀನಿ ಯಜ ಮಾನ್! ದುಸರಾ ಆದ್ಮೀಕು ಹೇಳ್ಬ್ಯಾಡಿ."

ಇದು ತನ್ನ ಪರಿಚಯವನ್ನು ತಾನೇ ಮಾಡಿಕೊಳ್ಳುವ ಪದ್ಧತಿ.

"ಎಷ್ಟಯ್ಯಾ ನಿಂಗೆ ಕೊಡಬೇಕು?"

ಎಂದು ಸಾಹುಕಾರರು ಕೇಳಿದರೆ, ಅದಕ್ಕೆ ರಹಿಮಾನನ ಉತ್ತರ ಏನು?

"ಅಲ್ಲಾಕೀ ಮೆಹರ್ಬಾನಿ! ದಣಿ ಕೊಟ್ಟದ್ದು, ನಾ ತಂಗಡದ್ದು ನಿನ್ಗೆ ಖುಸಿ ಬಂದಷ್ಟು ಕೊಡಿ ಯಜಮಾನ್. ಅಲ್ಲಾಕೀ ಮೆಹರ್ಬಾನಿ."

ರಹಿಮಾನ್ ಬಾಯಿ ತೆರೆದರಾಯಿತು, ಅಲ್ಲಾಕೀ ಮೆಹರ್ಬಾನಿ ಎಂಬ ಪಲ್ಲವಿ ಇಲ್ಲದೆ ಮಾತೇ ಇಲ್ಲ. ಅವನು ಯಾವ ಹಾಡನ್ನೇ ಹಾಡಲಿ, 'ಅಲ್ಲಾಕಿ ಮೆಹರ್ಬಾನಿ' ಎಂಬುದು ಅದರ ಪಲ್ಲವಿ, ಅನುಪಲ್ಲವಿ ಮತ್ತು ಅಂಕಿತ ಕೂಡ. ಇದನ್ನರಿತಿದ್ದ ಕೆಲವು ಹುಡುಗರು ರಹಿಮಾನನನ್ನು ಕಂಡೊಡನೆಯೆ

"ಬಂದನಯ್ಯಾ ಅಲ್ಲಾಕೀ ಮೆಹರ್ಬಾನಿ"

ಎಂದು ತನ್ಮತನ್ಮಲ್ಲಿಯೇ ಮಾತನಾಡಿಕೊಂಡು ಗೇಲಿ ಮಾಡುತ್ತಿದ್ದರು, ನಗಾಡುತ್ತಿದ್ದರು. ರಹಿಮಾನನ ಗಮನ ಮಾತ್ರ ಇತ್ತ ಇಲ್ಲವೇ ಇಲ್ಲ.

ಮಾತಿಗೊಮ್ಮೆ ದೇವರನ್ನು ನೆನೆಯಲು ರಹಿಮಾನನೇನು ಮುದುಕನೇ? ಎಂದೂ ಕೇಳಿದವರುಂಟು. ವೃದ್ಧಾಪ್ಯಕ್ಕೂ ದೇವರಿಗೂ ಬಿಡದ ಗಂಟು ಎಂಬುದವರ ಅಭಿಪ್ರಾಯ ಇದು ಅಷ್ಟೇನೂ ತಪ್ಪೂ ಅಲ್ಲ. ಆದರೆ ಮುಪ್ಪಡರಿದಾಗಲೂ ದೇವರಿಲ್ಲ ಅನ್ನುವವರಿಲ್ಲವೆ? ಇರಬಹುದು. ಇರಬಹುದು ಏಕೆ? ಇದ್ದೇ ಇದ್ದಾರೆ. ಹಿಂದೂ ಇದ್ದರು, ಇಂದೂ ಇದ್ದಾರೆ, ಮುಂದೂ ಇರುತ್ತಾರೆ. ಏಕೆಂದರೆ ಮೊದಲು ನಾಸ್ತಿಕರು ಹುಟ್ಟಿದರು. ಆನಂತರ ದೇವರು ಹುಟ್ಟಿದ ದೇವರು ಸತ್ತನಂತರವೂ ನಾಸ್ತಿಕರು ಇದ್ದೇ ಇರುತ್ತಾರೆ. ಹೋಗಲಿ ಬಿಡಿ, ಇದು ವಾದಗ್ರಸ್ತ ವಿಷಯ. ರಹಿಮಾನನ ಕತೆಗೆ ಬರೋಣ.

ರಹಿಮಾನನಿಗಿನ್ನೂ ವಯಸ್ಸು ಇಪ್ಪತ್ತೂ ದಾಟಿಲ್ಲ. ಮೆಕ್ಕೆಜೋಳದ ತೆನೆಗೆ ಅಂಟಿಕೊಂಡಿರುವ ಕೆಂಪು ಕೂದಲಿನಂತಹ ಗಡ್ಡ ರಹಿಮಾನನದು. ಮೀಸೆ ಮೂಡಿತ್ತು. ಗಡ್ಡ ಇನ್ನೂ ಬಂದೇನೆನ್ನುತ್ತಿತ್ತು. ಅಲ್ಲಿಷ್ಟು ಇಲ್ಲಿಷ್ಟು ಗಡ್ಡದ ಕೂದಲು. ರಹಿಮಾನ ದಾಡಿಗೆ ಮಾತ್ರ ಎಂದೂ ಕತ್ತಿ ತಾಗಿಸಲಿಲ್ಲ

ಅದಾರೋ ಹಿರಿಯರೊಬ್ಬರು—ಅವನಿದ್ದ ಗಲ್ಲಿಯಲ್ಲಿಯೇ ಇರುತ್ತಿದ್ದವರು—ರಹಿಮಾನನನ್ನು ಕೇಳಿಯೇಬಿಟ್ಟರು.

"ಇನ್ನೂ ಮುಚ್ಛೀನೇ ಬರೋಬ್ಬರ್ ಬಂದಿಲ್ಲ, ಈಗಾಗಲೇ ದಾಡಿ ಯಾಕೋ ಬಿಡ್ತೀದಿ? ಮಕ್ಕಾ ಮದೀನಾಕ್ಕೆ ಹೋಗಿ ಬಂದಮೇಲೆ ಐತೇ ಐತೆ."

"ಅಲ್ಲಾಕೀ ಮೆಹರ್ಬಾನಿ"

ಎಂದುತ್ತರಿಸಿ ತಲೆಬಾಗಿ ನಡದೇಬಿಟ್ಟ ರಹಿಮಾನ್.

ಎಷ್ಟೇ ಕೆಲಸ ಇರಲಿ, ದಿನಕ್ಕೆ ಐದು ಬಾರಿ ನಮಾಜು ಆಗಲೇಬೇಕು. ಎಂಟು ಹತ್ತು ಮೈಲಿಗಳ ದೂರವಿದ್ದರೂ ಬೈಸಿಕಲ್ ಮೇಲೆ ಮಜೀದಿಗೆ ಹೋಗಿ ಸಮಯಕ್ಕೆ ಸರಿಯಾಗಿ ನಮಾಜು ಬೀಳಲೇಬೇಕು. ಜುಮ್ಮಾ ದಿನದಂದು ತಂಣೀರಿನ ಸ್ನಾನ ತಪ್ಪುವಂತಿಲ್ಲ.

"ನೂರಮೂರು ಡಿಗ್ರಿ ಜ್ವರ ಇದೆ ಮಹರಾಯಾ ! ಇವತ್ತು ಸ್ನಾನ ಮಾತ್ರ ಬೇಡ."

ಎಂದೊಮ್ಮೆ ಮಂಗಳೂರು ಡಾಕ್ಟರು ಹೇಳಿದರು ರಹಿಮಾನನಿಗೆ.

"ಇವತ್ತು ಝುಳಕ ಬಿಡಾಕಾಯ್ತದಾ ಸಾಮಿ ? ಜುಮ್ಮಾ ಹೈನಾ ?"

"ನಿನ್ನ ಜುಮ್ಮಾಕ್ಕೆ ಬೆಂಕಿ ಬಿತ್ತು. ಸ್ನಾನ ಮಾಡಿದರೆ ಸನ್ನಿ ಮುಚ್ಚಿಕೊಳ್ಳಲಿಕ್ಕೆ ಸಾಕು"

ಎಂದೂ ಹೆದರಿಸಿದರು ಆ ಡಾಕ್ಟರು. ರಹಿಮಾನ ಹೆದರಿದನೇ ?

"ಅಲ್ಲಾಕೀ ಮೆಹರ್ಬಾನಿ !"

ಎಂದಂದು ನಡೆದೇಬಿಟ್ಟ ರಸ್ತೆ ನಲ್ಲಿಗೆ.

ಅನುಕೂಲವಿದ್ದಿದ್ದರೆ ರಹಿಮಾನ ಪ್ರತಿನಿತ್ಯವೂ ಸ್ನಾನ ಮಾಡುತ್ತಿದ್ದ—ಅವನ ದುರ್ದೈವ ! ಅವನಿದ್ದ ಗಲ್ಲಿಯಲ್ಲಿ ಒಬ್ಬ ಕಾರ್ಪರೇಟರನ ಮನೆಯೂ ಇರಬೇಡವೆ ?

ಬರೀ ಸ್ನಾನ, ನಮಾಜು, ದಾಡಿ ಮಾತ್ರವಲ್ಲ. ಕಟ್ಟುನಿಟ್ಟಾಗಿ ರೋಜಾ ಆಚರಿಸುತ್ತಿದ್ದ.

ಅವನ ಗಳಿಕೆ ಅವನ ಪುಟ್ಟ ಸಂಸಾರಕ್ಕೆ ಸಾಕಾಗುತ್ತಿತ್ತು—ಅವನ ಸಂಸಾರ ಅಂದರೆ ಅವನು ಮತ್ತು ಅವನ ತಾಯಿ. ಇಬ್ಬರ ಹೊಟ್ಟೆಗೆಲ್ಲ ಎಷ್ಟು ಬೇಕು ? ದುಂದುಗಾರಿಕೆಗೆ ಎಂದೂ ಹೋದವನಲ್ಲ. ಇದರಿಂದಾಗಿ ಕೈಲಿ ನಾಲ್ಕು ಕಾಸು ಉಳಿಯುತ್ತಿತ್ತು, ಕರವಸ್ತ್ರದಲ್ಲಿ ಕಟ್ಟಿ ಪೈಜಮಾದ ಲಾಡಿಗೆ ಸಿಕ್ಕಿಸಿಕೊಳ್ಳುತ್ತಿದ್ದ. ಅದೇ ಅವನ ಸೇವಿಂಗ್ಸ್ ಬ್ಯಾಂಕು.

ಅಡಚಣೆ ಇದ್ದಾಗ ಅಕ್ಕಪಕ್ಕದವರಾರಾದರೂ ಬಂದು ಕೈಗಡ ಕೇಳಿದಾಗ

ಇಲ್ಲ ಅನ್ನಲಿಲ್ಲ, ಥಟ್ಟನೆ ತೆಗೆದು ಕೊಟ್ಟುಬಿಡುತ್ತಿದ್ದ. ಅವರೆಲ್ಲ ಬಡವರು, ನಿಯತ್ತಿಗೆ ಕಟ್ಟುಬೀಳುವ ಜನ. ಹೇಳಿದ ದಿನಕ್ಕೆ ಸರಿಯಾಗಿ ಮರಳಿ ತಂದು ಕೊಟ್ಟುಬಿಡುತ್ತಿದ್ದರು. ಲಚ್ಮಯ್ಯನೂ ರಹಮಾನದ ಬಳಿ ಸಾಲ ಪಡೆದಿದ್ದ. ಮಾತು ಕೊಟ್ಟಂತೆ ಮುಂದಿನ ತಿಂಗಳ ಪಹಿಲಾ ತಾರೀಖಿಗೆ ಸರಿಯಾಗಿ ಅವನ ಕೈಗಿಟ್ಟು ಮೇಲೆ ಇಪ್ಪತ್ತು ಪೈಸೆ ತೆಗೆದ.

ರಹಿಮಾನ ಹುಬ್ಬೇರಿಸಿ

"ಏ ಕ್ಯಾ ?"

ಎಂದು ಕೇಳಿದ

"ತೆಕ್ಕೊ ಇರ್ಲಿ, ಬಡ್ಡಿ ಅದು"

"ನಮ್ದು ಖುರಾನ್‌ದೊಳಗೆ ಬ್ಯಾಜ್ ಖಾನಾ ಹರಾಮ್ ಹೈ"

ಎಂದಂದ ರಹಿಮಾನ್ ಆ ಇಪ್ಪತ್ತೈದು ಪೈಸೆ ಕೈಯಿಂದಲೂ ಮುಟ್ಟಲಿಲ್ಲ.

ರಹಿಮಾನನದು ಸೌಮ್ಯ ಸ್ವಭಾವ, ಇದರಿಂದಾಗಿ ಎಲ್ಲ ವರ್ಗಗಳಲ್ಲಿಯೂ ಅವನಿಗೆ ಗೆಳೆಯರು. ಅನೇಕ ಶ್ರೀಮಂತ ಮಿತ್ರರೂ ಇದ್ದರು.

ಸಾಹುಕಾರ ಅಜೀಜ್‌ಸೇಠನ ಮಗ ಬಹು ದಿಲ್‌ದಾರ್ ಆದ್ಮಿ ಎಂದು ಊರಲ್ಲೆಲ್ಲ ಹೆಸರಾಗಿದ್ದ. ಹೊಸ ಕಾರನ್ನು ಡ್ರೈವ್ ಮಾಡಿಕೊಂಡು ಬರುವಾಗ ಇದಿರಿನಲ್ಲಿ ರಹಿಮಾನ್ ಸಿಕ್ಕಿದ. ಚಿಕ್ಕ ಸೇಠನ ಕಾರಲ್ಲಿ ಮೂರು ನಾಲ್ಕು ಗೆಳೆಯರಿದ್ದರು. ಕಾರು ನಿಲ್ಲಿಸಿ ಕರೆದ.

"ಆವ್ ರಹಿಮಾನ್ ಭೈ !"

ರಹಿಮಾನನಿಗೇನೂ ಕೆಲಸವಿಲ್ಲ, ಸುಮ್ಮನೆ ಅಲೆದಾಡುತ್ತಿದ್ದ.

"ಅಲ್ಲಾಕೀ ಮೆಹರ್ಬಾನಿ"

ಎಂದನ್ನುತ್ತ ಕಾರಿನಲ್ಲೇರಿ ಕುಳಿತ. ಸೇಠನ ಕಾರು ಅಲ್ಲಲ್ಲಿ ಸುತ್ತಾಡಿ ಕಟ್ಟಕಡೆಗೆ ಒಂದು ಬಾರ್ ಮುಂದು ಬಂದು ನಿಂತಿತು. ಎಲ್ಲರೂ ಒಳಬಂದರು, ಅವರೊಡನೆ ರಹಿಮಾನನೂ ಬಂದ. ಎಲ್ಲರಂತೆ ತಾನೂ ದುಂಡು ಮೇಜಿಗೆ ಕುಳಿತ. ಅವನಿಗೇನು ಗೊತ್ತು ಮುಂದೇನಾಗಲಿದೆ ಎಂಬುದು ? ಇದವನ ಪ್ರಥಮ ಪ್ರವೇಶ !

ವ್ಹಿಸ್ಕಿ ಬಾಟಿಲ್ ಮೇಜಿಗೆ ಬಂತು. ಮೇಜಿಗೆ ಬಂದವಳು ಮೋಜಿಗೆ ಬರದಿರುತ್ತಾಳೆಯೆ? ಗ್ಲಾಸಿನಲ್ಲಿಯೂ ಬಂತು.

ತನ್ನ ಮುಂದಿದ್ದ ಗ್ಲಾಸನ್ನು ಮೂಸುತ್ತ, ಮುಖ ಕಿವುಚಿ ರಹಿಮಾನ್ ಕೇಳಿದ ಇದೇನೆಂದು. ಚಿಕ್ಕ ಸೇಠು ಹೇಳಿದ.

"ಇದು ವ್ಹಿಸ್ಕಿ. ಕುಡಿದು ಮಜಾ ನೋಡು"

"ಛತ್ ! ದಾರು ಪೀನ ಹರಾಂ ಹೈ"

ಎಂದವನೆ ಎದ್ದೇ ನಿಂತ. ಅದು ದಾರು ಅಲ್ಲ, ವ್ಹಿಸ್ಕಿ ಎಂದು ಎಲ್ಲರೂ ಪರಿಪರಿಯಾಗಿ ಹೇಳಿದರ. ರಹಮಾನ ಮುಟ್ಟಿದನೇ? ಅವನ ಮನಸ್ಸು ಕೊಂಚವಾದರೂ ಡೋಲಾಯಮಾನ ಆಯಿತೇ?

"ನಮಾಜ್ ಟೇಮು ಆತು"

ಎಂದವನೆ ಹೊರಬಂದು ಮಜೀದಿಗೆ ನಾಗಾಲೋಟ ಓಡಿದ.

ಅನೇಕರ ತಲೆಯಲ್ಲಿ ಇದೊಂದೇ ಪ್ರಶ್ನೆ—ಈ ಚಿಕ್ಕ ವಯಸ್ಸಿಗೇ ರಹಮಾನ ಹೀಗೇಕಾದ? ಇಂತಹ ಧಾರ್ಮಿಕ ಪ್ರವೃತ್ತಿ ಅದು ಹೇಗೆ ಹುಟ್ಟಿತು?

ಈ ಗುಟ್ಟು ಇಬ್ಬರಿಗೇ ಗೊತ್ತು—ರಹಮಾನನಿಗೆ ಮತ್ತು ಅವನ ತಾಯಿಗೆ.

ರಹಮಾನನ ತಂದೆ ಸತ್ತಾಗ ರಹಮಾನ ಇನ್ನೂ ನಾಲ್ಕು ವರ್ಷದ ಮಗು. ಬಹು ಕಷ್ಟಪಟ್ಟು ಕೂಲಿ ನಾಲಿ ಮಾಡಿ ಮಗನನ್ನು ಜೋಪಾನ ಮಾಡಿದ್ದಳು ಬೂಬವ್ವ. ಗಂಡನ ಅವಿವೇಕದಿಂದ ಬೂಬವ್ವ ಸಾಕಷ್ಟು ಮನನೊಂದಿದ್ದಳು. ತನಗಿರುವ ಒಬ್ಬನೇ ಒಬ್ಬ ಮಗನೂ ತಂದೆಯಂತೆ ಕೆಟ್ಟವನಾಗುವುದು ಬೇಡ ಎಂಬುದೇ ಆಕೆಯ ಏಕಮೇವ ಮಹದಾಶೆ. ರಹಮಾನನಿಗೆ ಬುದ್ಧಿ ಬಂದನಂತರ ಒಂದು ದಿನ ಮಗನನ್ನು ಕೂಡಿಸಿಕೊಂಡು ತನ್ನ ವ್ಯಥೆಯ ಕಥೆಯನ್ನು ಆದ್ಯಂತವಾಗಿ ಹೇಳಿದಳು.

"ದೇಖೋ ಬೇಟಾ! ನಿಂದು ತಂದೆ ಸೈತಾನ್! ಒಂದು ದಿನಾನೂ ಮಜೀದಿಗೆ ಹೋಗಲಿಲ್ಲಾ, ನಮಾಜು ಬೀಳ್ಲಿಲ್ಲಾ. ನೀನು ಮಾತ್ರ ಅಚ್ಛಾ ಬೇಟಾ ಆಗು, ಅಲ್ಲಾಕೀ ಮೆಹರ್ಬಾನಿ! ನಿನ್ತಂದೇದು ಹೆಸರು ಮರೆಸಿಬಿಡು"

ಮಾಯಣಾಡುತ್ತಿದ್ದ ರಹಮಾನನ ಎಳೆ ಮನಸ್ಸಿನಮೇಲೆ ತಾಯಿ ಹೇಳಿದುದು ಬಹು ಭದ್ರವಾಗಿ ಮೂಡಿತು. ಜೀವನದಲ್ಲೆಂದೂ ನಮಾಜನ್ನು ಮಾತ್ರ ತಪ್ಪಿಸಲಿಲ್ಲ.

ಮಜೀದಿನಿಂದ ಮನೆಗೆ ಬರುತ್ತಿದ್ದಾಗ ಒಂದು ಬಾರಿ ನಡು ರಸ್ತೆಯಲ್ಲಿ ಅದೇನೋ ತಳತಳ ಹೊಳೆಯುತ್ತಿದ್ದುದು ಅವನ ಕಣ್ಣಿಗೆ ಬಿತ್ತು. ಸನಿಯಕ್ಕೆ ಹೋಗಿ ಕೈಗೆತ್ತಿಕೊಂಡ—ರೂಪಾಯಿ.

"ಹರಾಮಾ ಪೈಸಾ! ನಮಗ್ಯಾಕು"

ಎಂದಂದಿತು ರಹಮಾನನ ಪ್ರಾಮಾಣಿಕ ಮನಸ್ಸು. ಸುತ್ತಲೂ ನೋಡಿದ. ಮುಂದು ಆದಾರೋ ಹೋಗುತ್ತಿದ್ದರು. ಅವರ ಬಳಿ ಓಡಿ ಈ ರೂಪಾಯಿ ನಿಮ್ಮದೇನೆಂದು ಕೇಳಿದ. ಎಲ್ಲರೂ ನನ್ನದಲ್ಲ, ನನ್ನದಲ್ಲ ಅಂದರು. ತನ್ನದಲ್ಲದ ರೂಪಾಯಿಯನ್ನು ಏನು ಮಾಡಬೇಕೆಂಬುದೇ ತೋಚಲಿಲ್ಲ ಆ ನಮಾಜೀ ಬುದ್ಧಿಗೆ.

ಕಿವಿಯಲ್ಲಿ ಸೈತಾನ್ ಅದೇನು ಉಸಿರಿತೋ ?

ರೂಪಾಯಿಯನ್ನು ಜೇಬಿಗೆ ಬಿಟ್ಟ ರಹಮಾನ್.

"ಅಲ್ಲಾಕೀ ಮೆಹರ್ಬಾನಿ" ಎಂದಂದಿತು ಅವನ ಬಾಯಿ.

ಸೈತಾನನ ಪ್ರವೇಶ ಆದರೆ ಸಾಕು, ಮುಂದಿನ ದಾರಿ ಬಹು ಸುಗಮ. ಅವರಿವರ ಮನೆಗಳಿಗೆ ಪೇಂಟಿಂಗ್ ಮಾಡಲು ಹೋದಾಗ ಕೈಗೆ ಸಿಕ್ಕ ಚಿಕ್ಕ ಪುಟ್ಟ ಸಾಮಾನುಗಳನ್ನು ಮೆತ್ತಗೆ ಜೇಬಿಗೆ ಬಿಟ್ಟ. ಯಾರದೋ ಫೌಂಟಿನ್ ಪೆನ್ ಹೋಯಿತು. ಮತ್ತಾರದೋ ರಿಸ್ಟ್ ವಾಚ್ ಹೋಯಿತು. ಯಾರಾದರೂ ರಹಮಾನನನ್ನು ಅನುಮಾನಿಸಿದರೇ ?

"ಗರೀಬ್ ಆದರೂ ಷರೀಫ್ ಲಡ್ಕಾ ರಹಮಾನ್."

ಒಂದು ಮಧ್ಯಾಹ್ನ ರಹಮಾನ್ ನಮಾಜು ಬೀಳಲು ಮಜೀದಿಗೆ ಬಂದ. ಒಳಬಾಗಿಲಲ್ಲಿಯೇ ದರ್ಶನವಾಯಿತು—ಹೊಸ ಚಪ್ಪಲ್, ಪಾಲಿಸ್ ಹಚ್ಚಿದ ಬೂಟು, ಬಣ್ಣ ಬಣ್ಣದ ಚಡಾವು. ಯಾವು ಚೆನ್ನಾಗಿವೆ ? ಬರಿಗಾಲಿನ ರಹಮಾನನಿಗೆ ಚೆಂದ ಯಾವುದು, ಅಲ್ಲ ಯಾವುದು ?

ಒಳ ಬಂದು ನಮಾಜು ಬಿದ್ದ, ಆದರೆ ಅವನ ಮನಸ್ಸೆಲ್ಲವೂ ಹೊರಗಿದ್ದ

ಮೆಟ್ಟುಗಳ ಮೇಲೆಯೇ. ರಹಮಾನ ಚಪ್ಪಲಚಿತ್ತನಾದ. ಎಲ್ಲರಕಿಂತಲೂ ಮುಂಚಿತವಾಗಿಯೇ ನವಾಜು ಮುಗಿಸಿದ್ದ. ದುಡುದುಡು ಹೊರಬಂದ. ಮೈ ಮೇಲಿದ್ದ ವಲ್ಲಿಯನ್ನು ಹಾಸಿ ಎಲ್ಲ ಪಾದರಕ್ಷೆಗಳನ್ನೂ ಕಟ್ಟಿಕೊಂಡು ಭುಜಕ್ಕೇರಿಸಿ ಓಡಿ ಬಿಟ್ಟ—ಅಲ್ಲಾಕೀ ಮೆಹರ್ಬಾನಿ ಎಂಬುದನ್ನು ಮಾತ್ರ ಅನ್ನಲು ಮರೆಯಲಿಲ್ಲ.

ಒಂದು, ಎರಡು ಜೊತೆಗಳಾಗಿದ್ದರೆ ದಕ್ಕುತ್ತಿದ್ದುವೋ ಏನೋ? ಎಲ್ಲರ ಪಾದರಕ್ಷೆಗಳೂ ಪರಾರಿ! ಬೈಸಿಕಲ್ ಏರಿ ಬಂದು ನಡುದಾರಿಯಲ್ಲೇ ರಹಮಾನನನ್ನು ಹಿಡಿದುಬಿಟ್ಟರು. ಅವೇ ಮೆಟ್ಟುಗಳಿಂದ ರಹಮಾನನಿಗೆ ಪೂಜೆಯಾಯಿತು—ಇದು ಮಾತ್ರ ಮುಲ್ಲಾನ ಮೆಹರ್ಬಾನಿ?

"ಇವರಪ್ಪ ಮಜೀದಿಗೆ ಬರದಿದ್ದರೂ ಹೀಗೆಲ್ಲ ಮಾಡುತ್ತಿರಲಿಲ್ಲ. ಅವನೇ ಲಕ್ಷಪಾಲು ಮೇಲು"

ಎಂದಂದುಬಿಟ್ಟಿತು ಊರಿನ ಜನ.

# ಸರ್ವಧರ್ಮ ದೇವಾಲಯ

ತಿಂಮ ಬಡವ ಅಂದರೆ ಕಡುಬಡವ. ದುಡಿದರೆ ಅನ್ನ, ಇಲ್ಲದಿದ್ದರೆ ಸೊನ್ನೆ. ಆದರೆ ದುಡಿಸಿಕೊಳ್ಳುವ ದಣಿಯೇ ಇಲ್ಲವಲ್ಲಾ ? "ಕೆಲಸ ಖಾಲಿ ಇಲ್ಲಾ" ಎಂಬ ಬೋರ್ಡುಗಳು ಆ ಬಡಪಾಯಿಯ ಪಾಲಿಗೆ ಪರಮಾತ್ಮನಂತೆ ಸರ್ವವ್ಯಾಪಕತ್ವ ಪಡೆದಿದ್ದುವು. ದುಡಿಯಂಬೇಕೆಂಬ ಮೈಗೆ ದುಡಿತವಿಲ್ಲ, ಹಸಿದ ಹೊಟ್ಟೆಗೆ ಇನ್ನು ಅನ್ನವೆಲ್ಲಿ ? ತನ್ನ ಗೇಣು ಹೊಟ್ಟೆಯನ್ನು ತುಂಬಿಕೊಳ್ಳಲು ಅವರಿವರ ಮುಂದು ಕೈಯೊಡ್ಡಿ ನಿಲ್ಲುವಂತಹ ಅಭಿಮಾನಶೂನ್ಯ ಭಂಡನಲ್ಲ ತಿಂಮ. ಅವರಿವರಿಗೆ ಮೋಸ ಮಾಡಿ, ಅಥವಾ ದೇವರ ಹೆಸರಿನಲ್ಲಿಯೋ ಧರ್ಮದ ಹೆಸರಿನಲ್ಲಿಯೋ ಸಲ್ಲದ ಕೃತ್ಯಗಳನ್ನು ಮಾಡಿ ಹಣಗಳಿಸುವ ನೀಚತನವಂತೂ ಅವನಲ್ಲಿ ಸುತರಾಂ ಇಲ್ಲ. ತಾನು ಗಳಿಸಬೇಕು, ಆಗಲೇ ಅದು ತನ್ನದು. ಹೀಗಾಗಿ ಒಂದೂಟಕ್ಕೂ ಮಾರ್ಗವಿಲ್ಲದೆ ಬರೀ ನೀರನ್ನೇ ಅನ್ನವೆಂದು ಭಾವಿಸಿ ಅದರಿಂದಲೇ ಹೊಟ್ಟೆ ತುಂಬಿಸಿಕೊಂಡು ಮಲಗಿದ ರಾತ್ರಿಗಳೂ ಉಂಟು ಅವನ ಜೀವನದಲ್ಲಿ. ಭಾವನೆ ಮನಸ್ಸಿನದಾಯಿತು, ಬುದ್ಧಿಯದಾಯಿತು. ಹೊಟ್ಟೆ ಇದನ್ನೆಲ್ಲ ಕೇಳುತ್ತೆಯೆ ? ಈ ಡಿಪಾರ್ಟ್‌ಮೆಂಟೇ ಬೇರೆ, ಪ್ರಕೃತಿಯ ಸರಕಾರದಲ್ಲಿ.

ಪ್ರತಿಯೊಬ್ಬನ ಜೀವನದಲ್ಲೂ ಒಂದು ಬೆಳ್ಳಿಯ ದಿನ ಬಂದೇ ಬರ ಬೇಕೆಂಬುದು ಪ್ರಕೃತಿ ನಿಯಮವೋ ಏನೋ ? ಅಂತಹ ಸುದಿನ ತಿಂಮನಿ ಗಾಗಿಯೂ ಕಾದಿತ್ತು ಎಂಬುದು ಅವನಿಗೇನು ಗೊತ್ತು, ಪಾಪ ! ಬೆಳ್ಳಿಯ ದಿನ

ವಲ್ಲ, ಬಂಗಾರದ ದಿನವೇ ಉದಯಿಸಿತು ಅವನ ಕಾರ್ಮೋಡದ ಜೀವನದಲ್ಲಿ. ನಾಳೆ ಆಗುವ ಆಕಸ್ಮಿಕ ಘಟನೆ ಇಂದು ನಮಗೆ ತಿಳಿಯುತ್ತಯೆ ! ಇದ್ದಕಿದ್ದಂತೆ ಆಗುವದಕ್ಕೆ ಆಕಸ್ಮಿಕ ಎಂದು ಹೆಸರಲ್ಲವೆ ? ಊಹೆ ಹಾಗಿರಲಿ, ಆ ಬಡವ ಕನಸಿನಲ್ಲಿಯೂ ಕಂಡಿರಲಿಲ್ಲ. ಅಂತಹ ಘಟನೆ ಸಂಭವಿಸಿತು.

ಒಂದು ಬೆಳಿಗ್ಗೆ ಎದ್ದ, ಅತ್ಯದ್ಭುತ ಸಾಹುಕಾರನಾಗಿದ್ದ ! ಐದು ಲಕ್ಷ ರೂಪಾಯಿಗಳ ಯಜಮಾನ ! ನಿನ್ನೆ ಒಪ್ಪತ್ತು ಊಟಕ್ಕೆ ಇದ್ದಿಲ್ಲದ ಅದೇ ತಿಂಮ ಇಂದು ಲಕ್ಷಾಧಿಕಾರಿ ! ಧಿಡೀರ್ ದಣಿ ! ಹೇಗಾದ ? ಹೇಗೋ ? ಸರಕಾರ ಪ್ರೋತ್ಸಾಹಿಸುತ್ತಿರುವ ಜೂಜುಕೋರತನ–ಸರಕಾರೀ ಲಾಟರಿ ಇಲ್ಲವೇ ? ಇದರಿಂದಾದ ಮಹೋಪಕಾರವೇ ತಿಂಮನ ಶ್ರೀಮಂತಿಕೆ.

ಈ ಹಣ ನಿನ್ನದಲ್ಲ ಎಂದಿತು ತಿಂಮನ ಪ್ರಾಮಾಣಿಕ ಅಂತಃಪ್ರೇರಣೆ. "ಹೌದು. ನನ್ನದಲ್ಲ" ಎಂದು ತನಗೆ ತಾನೇ ಹೇಳಿಕೊಂಡ ಮೈ ಬೆವರು ಸುರಿಸಿ ಗಳಿಸಿದುದಲ್ಲ ಇದು, ಇದು ಎಂದಿಗೂ ನನ್ನದಾಗಕೂಡದು ಎಂದು ಆ ಕೂಡಲೆ ನಿರ್ಧರಿಸಿದ. ಹಾಗಾದರೆ ? ಎಂದು ಕೇಳಿತು ಅವನ ತಲೆ. ತಿಂಮನ ತಲೆ ಎತ್ತೆತ್ತಲೋ ದಿಕ್ಕೆಟ್ಟು ಓಡ ಹತ್ತಿತು, ಹುಚ್ಚು ಹಿಡಿದ ಕುದುರೆಯಂತೆ.

ಮಲಗಿದ, ನಿದ್ರೆ ಬಾರದು. ಈ ಹಣವನ್ನು ಹೇಗೆ ವಿನಿಯೋಗಿಸಬೇಕು ಎಂಬ ಯೋಚನೆ ಒಂದೇಸಮನೆ ತಿಂಮನ ತಲೆಯನ್ನು ತಿನ್ನ ಹತ್ತಿತು. ಆಗ ಹಣವಿಲ್ಲ ಎಂದು ನಿದ್ರೆ ಇಲ್ಲ, ಈಗ ಹಣವಿದೆ ಎಂದು ನಿದ್ರೆ ಇಲ್ಲ, ಅಂತೂ ಇಂತೂ ತಿಂಮನಿಗೆ ನಿದ್ರೆ ಹಾಳು. ಆಗ ಹಣವಿಲ್ಲವಲ್ಲಾ ಎಂಬುದೊಂದೇ ಚಿಂತೆ ಇತ್ತು. ಆದರೆ ಈಗ ? ಈ ಹಣವನ್ನು ಏನು ಮಾಡಬೇಕು ಎಂಬ ನೂರೆಂಟು ಚಿಂತೆಗಳು ! "ಥೂ, ಈ ಹಣಕ್ಕೆ ಬೆಂಕೀ ಹಾಕ" ಎಂದು ಶಪಿಸಿಯೂ ಬಿಟ್ಟ ತಿಂಮ, ಒಂದು ಬಾರಿ.

ಅನೇಕರು ಬಡತನದಲ್ಲಿದ್ದಾಗ ಶ್ರೀಮಂತರನ್ನು ಹೀನಾಮಾನವಾಗಿ ತೆಗಳುತ್ತಾರೆ. ಬಡವರ ಉದ್ಧಾರದ ಬಗ್ಗೆ ಮೈಲುದ್ದ ಭಾಷಣ ಕೊರೆಯುತ್ತಾರೆ. ಅದೇ ಬಡವ ಶ್ರೀಮಂತನಾದರೆ ? ಬಡವರನ್ನು ಮೊದಲು ಪಾತಾಳಕ್ಕೆ ತುಳಿಯಬೇಕು ಅನ್ನುತ್ತಾನೆ. ಇಂದು ನಾವು ಅಂತಹ ಮಾಜಿ ಗರೀಬರನ್ನು ಅರ್ಥಾತ್ ಧಿಡೀರ್ ಶ್ರೀಮಂತರನ್ನು ಕಾಣುತ್ತಿಲ್ಲವೆ ? ಗರೀಬಿ ಹಟವೋ ಯುಗದಲ್ಲಿ

ಅಂತಹರೇ ಹೆಚ್ಚು ಅಂದರೂ ತಪ್ಪಿಲ್ಲ. ಪ್ರಾಯಶಃ ಅನ್ನವಿದ್ದರೇ ತಪ್ಪೋ ಏನೋ ?

ಅದೆಲ್ಲ ಏನೇ ಇರಲಿ, ಈಗ ತಿಂಮನ ಗತಿ ? ಕಳೆದುಹೋದ ಯಾರದೋ ಮಗು ಕೈಗೆ ಸಿಕ್ಕು "ಅಮ್ಮಾ" ಎಂದು ಅಳುವಾಗ ಅದನ್ನು ಎತ್ತಿಕೊಂಡು ನಿಂತವನ ಗತಿ ಏನು ? ಮಗುವಿಗೆ ಬಾಯಿ ಇಲ್ಲ, ಮನೆಯ ಪತ್ತೆ ಹೇಳಲು ಅದಕ್ಕೆ ಬಾರದು. ತನ್ನ ಮನೆಯಲ್ಲಿ ತಂದಿಟ್ಟುಕೊಳ್ಳಲು ಅದೇನು ತನ್ನ ಮಗುವೇ ? ಅವರ ಮಗುವನ್ನು ಅವರಿಗೆ ಮುಟ್ಟಿಸುವುದು ಅವನ ಕರ್ತವ್ಯ. ಅಂತೆಯೇ ಈ ಹಣವನ್ನೂ ಅದರ ಮಾಲೀಕನಿಗೆ ತಲುಪಿಸುವುದು ನನ್ನ ಆದ್ಯ ಕರ್ತವ್ಯ ಎಂದು ತನ್ನಲ್ಲಿಯೇ ತರ್ಕಿಸಿದ ತಿಂಮ. ಹೌದು, ಈ ಐದು ಲಕ್ಷ ರೂಪಾಯಿ ಯಾರದೋ ಅವರಿಗೇ ಹೋಗಬೇಕು.

ಹೋಗಬೇಕು ಹೌದು, ಆದರೆ ಇದನ್ನು ಸಾಧಿಸುವುದು ಹೇಗೆ ? ಒಂದೊಂದೇ ರೂಪಾಯಿ ಲಾಟರೀ ಟಿಕೀಟನ್ನು ಐದು ಲಕ್ಷ ಆಶೆಬುರುಕ ಜನ ಕೊಂಡಿದೆ, ಯಾರೀ ಐದು ಲಕ್ಷ ಜನ ? ಯಾರಿಗೆ ಗೊತ್ತು ? ಟಿಕೀಟು ಮಾರಿದ ಅವನಿಗೂ ಗೊತ್ತಿಲ್ಲ. ಇನ್ನು ಇದನ್ನು ಅವರವರಿಗೆ ತಲುಪಿಸುವುದು ಹೇಗೆ ? ಒಂದು ಮಾತಂತೂ ಸತ್ಯ. ಯಾರಾರೋ, ಎಲ್ಲ ಜಾತಿ ಧರ್ಮ ಗಳವರೂ, ಎಲ್ಲ ವಯಸ್ಸಿನವರೂ, ಎಲ್ಲ ವರ್ಗದವರೂ, ಮಕ್ಕಳೂ ಮುದುಕರೂ ಗಂಡೂ ಹೆಂಣೂ, ಬಡವರೂ ಬಲ್ಲಿದರೂ ಎಲ್ಲರೂ ಈ ತನ್ನ ಅಯೋಗ್ಯ ಲಾಭಕ್ಕೆ ಕಾರಣರಾಗಿದ್ದಾರೆ. ಈ ಹಣ ಅವರೆಲ್ಲರಿಗೂ ಹೋಗಲಿ. ಆದರೆ ಇದು ಹೋಗುವುದು ಹೇಗೆ ?

ತಿಂಮನ ತಲೆ ಬಹು ಸಾರವತ್ತಾದ್ದಲ್ಲವೆ ? ಅವನಿಗೆ ಯೋಚನೆಯ ಕೊರ ತೆಯೇ ? ಥಟ್ಟನೆ ಹೊಳೆಯಿತು ಒಂದು ಉಪಾಯ ! ಆ ಕೂಡಲೆ ಒಂದು ಲಕ್ಷ ರೂಪಾಯಿ ಖರ್ಚು ಮಾಡಿದ, ಒಂದು ಭಾರೀ ರಾಮಮಂದಿರವನ್ನು ಕಟ್ಟಿಸಿದ. ರಾಮಮಂದಿರಕ್ಕೆ ಬೆಂಕಿಇಕ್ಕುವ ಪವಿತ್ರಪಂಡಿತರಿರುವ ಈ ಕಾಲದಲ್ಲಿ ಚಪ್ಪರವನ್ನು ಹಾಕಿಸಲು ತಿಂಮನೇನು ದಡ್ಡನೇ ? ಒಳ್ಳೆಯ ಸಿಮೆಂಟ್ ಕಾಂಕ್ರೀಟಿನ ಅತ್ಯದ್ಭುತ ವಾದ ವಿಶಾಲವಾದ ದೇವಾಲಯವೆ ಎದ್ದಿತು. ಶಬಾಸ್ ಎಂದಿತು ಜನ. ಭಕ್ತಾದಿಗಳು

ನೂರಾರು, ಸಹಸ್ರಾರು ಬ ಹತ್ತಿದರು. ತಿಂಮನಿಗೆ ಕೊಂಚ ಆತ್ಮತೃಪ್ತಿಯಾಗಿರ ಬೇಕು—ಭಕ್ತಾದಿಗಳು ಬಂದು ಹೋಗುವದನ್ನು ನೋಡಿ ಆನಂದಿಸಲು ಅಷ್ಟು ದೂರ ನಿಂತು ನೋಡಿದ. ಬರ ಹೋಗುವವರನ್ನು ನೋಡಿದಂತೆಲ್ಲ ಒಂದು ವಿಷಯ ಅವನ ಮನಸ್ಸಿಗೆ ಸ್ಪಷ್ಟವಾಗಿ ವೇದ್ಯವಾಯಿತು, ಬರುವ ಭಕ್ತರೆಲ್ಲರೂ ಬರೀ ಬ್ರಾಹ್ಮಣರೇ! ಒಬ್ಬ ವೀರಶೈವ ಮರಿಯೂ ಇತ್ತ ಹಾಯಲಿಲ್ಲ. ಹೀಗೇಕೆ ಎಂದು ತಿಂಮ ತಲೆ ಕೆರೆದುಕೊಂಡ. ಯಾರೋ ಒಬ್ಬ ಹೇಳಿದ–ರಾಮ ಹಾರವರ ದೇವರು, ಅವರ ದೇವರ ದೇವಾಲಯಕ್ಕೆ ಶಿವಭಕ್ತರಾದ ನಾವು ಯಾಕಯ್ಯಾ ಬರುತ್ತೇವೆ? ಎಂದು.

ಹಾಗಾದರೆ ರಾಮ ಬ್ರಾಹ್ಮಣನೆ? ಛಿ! ಅವನೆಂತಹ ಬ್ರಾಹ್ಮಣ? ಭಾವ ಸಾರ ಕ್ಷತ್ರಿಯನಲ್ಲವೇ? ನಮ್ಮ ಶಿವಾಜಿ, ಸಾಂಬಾಜಿಗಳ ಜಾತಿಯವನು ಶ್ರೀರಾಮ. ಹಾಗಾದರೆ ಕೃಷ್ಣ? ಅವನು ಅಸ್ಸಲು ಗೊಲ್ಲ. ಹಾಗಾದರೆ ಬ್ರಾಹ್ಮಣರಿಗೆ ಒಬ್ಬನಾದರೂ ಬ್ರಾಹ್ಮಣ ದೇವರೇ ಇಲ್ಲವೇ? ಬ್ರಾಹ್ಮಣರು ಪೂಜೆ ಮಾಡುವ ದೇವರುಗಳೆಲ್ಲರೂ ಬರೀ ಬ್ರಾಹ್ಮಣೇತರರೇ! ದೇವರುಗಳ ಲಿಸ್ಟ್‌ನಲ್ಲಿ ಒಬ್ಬೇ ಒಬ್ಬ ಬ್ರಾಹ್ಮಣ ದೇವನಿದ್ದಾನೆ, ಬ್ರಹ್ಮದೇವರು—ಅವನಿಗೆ ಪೂಜೆಯೇ ಇಲ್ಲ! ಥೂ! ಈ ಜಾತಿ, ಧರ್ಮಗಳಿಗೆ ಬೆಂಕಿ ಹಾಕ ಎಂದು ನಕ್ಕುಬಿಟ್ಟ ತಿಂಮ.

ಹೌದು, ನಕ್ಕ. ಅನಂತರ? ಮೀಟರ್ ಇಲ್ಲದ ಗಾಡಿಯಂತೆ ಓಡಹತ್ತಿತು ಅವನ ತಲೆ. ಸರ್ವ ಧರ್ಮಗಳವರೂ ಬರಬೇಕೆಂದಲ್ಲವೆ ಅವನು ಆ ರಾಮ ಮಂದಿರವನ್ನು ಕಟ್ಟಿಸಿದುದು? ಒಂದು ಲಕ್ಷ ವ್ಯರ್ಥವಾಯಿತು, ಹೋಗಲಿ ಎಂದಂಡ. ತಳಹದಿ ಸಮೇತವಾಗಿ ಆ ರಾಮಮಂದಿರವನ್ನು ನೆಲಕ್ಕೆ ಕೆಡವಿಸಿದ. ಕಾಲು ಲಕ್ಷ ಕರ್ಚಿನಲ್ಲಿ ಒಂದೇ ತಿಂಗಳಲ್ಲಿ ಭವ್ಯವಾದ ಶಿವಾಲಯ ಎದ್ದಿತು. ಹಣವಿದ್ದರೆ ದೇವರುಗಳು ಸಿಕ್ಕುವುದಿಲ್ಲವೆ? ಲಿಂಗ ಸ್ಥಾಪನೆ ಮಾಡಿಸಿದ—ಇನ್ನೊಂದು ಲಕ್ಷ ಕರಗಿತು. ವೀರಶೈವರೆಲ್ಲರೂ ಆಗ ಕುರಿಯ ಮಂದೆಯಂತೆ ನೂಕು ನುಗ್ಗಲಾಗಿ ಬಂದರು. ಇದನ್ನು ಕಂಡ ಬಡ ತಿಂಮನ ಆತ್ಮ ಹಿರಿ ಹಿರಿ ಹಿಗ್ಗಿ ಮುಗಿಲವ ಗೂ ಚಿಮ್ಮಿತು. ಒಳ್ಳೆಯ ಕೆಲಸವನ್ನು ಮಾಡುವದರಲ್ಲಿನ ಸಂತೋಷಕ್ಕಿಂತಲೂ, ದೂರ ನಿಂತು ಅದನ್ನು ವೀಕ್ಷಿಸುವುದು ಇನ್ನೂ ಹೆಚ್ಚು

ಸಂತೋಷ ಅಲ್ಲವೆ? ಅಷ್ಟು ದೂರ ನಿಂತು ನೋಡಿದ—ತನ್ನ ಶಿವಾಲಯಕ್ಕೆ ಬರುವ ಭಕ್ತರೆಲ್ಲರೂ ಬರೀ ಲಿರಗಾಯಿತರೇ! ಒಬ್ಬ ಬ್ರಾಹ್ಮಣನೂ ಇತ್ತ ಸುಳಿಯಲಿಲ್ಲ. ಕಾರಣವೇನೆಂದು ಅವರಿವರನ್ನು ವಿಚಾರಿಸಿದ. ಈಶ್ವರ ದೇವಾಲಯದ ಹೊಸ್ತಿಲಲ್ಲಿ ಕಾಲಿಟ್ಟರೆ ವೀರ ವೈಷ್ಣವರು ಪುನಃ ಉಪನಯನ ಮಾಡಿಕೊಳ್ಳಬೇಕಂತೆ, ಜನಿವಾರವನ್ನು ಬದಲಿಸಬೇಕಂತೆ ಎಂದು ಅದಾರೋ ಹೇಳಿದರು. ಹೌದೇ ಎಂದು ಮೂಗಿಗೆ ಬೆರಳಿಟ್ಟ ತಿಂಮ. ಮಾಧ್ವ ಬ್ರಾಹ್ಮಣರೊಬ್ಬರು ತಿಂಮನಿಗೆ ತಮ್ಮ ನಂಬಿಕೆಯನ್ನು ಹೇಳಿದರು.

"ನಾವು ಕೇವಲ ಶಿವರಾತ್ರಿ ದಿನದಂದು ಮಾತ್ರವೇ ಈಶ್ವರನ ದರ್ಶನ ಮಾಡಿಕೊಳ್ಳುವುದು ನಮ್ಮ ಪದ್ಧತಿ. ಏಕೆಂದರೆ, ಅಂದು ಶಿವದರ್ಶನ ಆಗದಿದ್ದರೆ ಮುಂದಿನ ಜನ್ಮದಲ್ಲಿ ಕತ್ತೆಯಾಗಿ ಹುಟ್ಟುತ್ತೇವೆ ಎಂಬ ಸಿದ್ಧಾಂತವಿದೆ"

ತಿಂಮನ ಆ ಹಾಳು ತಲೆಗೆ ಫಕ್ಕನೆ ಅದೇನೋ ಹೊಳೆಯಿತು. ಕೂಡಲೆ ಮರು ಪ್ರಶ್ನೆ ಕೇಳಿದ.

"ಹಾಗಾದರೆ ಇಂದು ರಸ್ತೆ ತುಂಬ ಕಾಣುವ ಕತ್ತೆಗಳೆಲ್ಲ, ಹಿಂದಿನ ಜನ್ಮದಲ್ಲಿ ಶಿವರಾತ್ರಿ ದಿನದಂದು ಈಶ್ವರ ದರ್ಶನ ಮಾಡಿಕೊಳ್ಳದ ಮಾಧ್ವ ಬ್ರಾಹ್ಮಣರೇ ?"

ಹೋಗೋ ಮೂರ್ಖ ಎಂದೆಂದು ನಡೆದರು ಮಹಾಮೂರ್ಖರು.

ದೇವಾಲಯಕ್ಕೆ ಬರುತ್ತಿದ್ದ ಭಕ್ತ ಗಣಂಗಳನ್ನು ನೋಡಿದಂತೆಲ್ಲ ಅವನ ಮನಕ್ಕೆ ಇನ್ನೊಂದು ವಿಚಾರವೂ ಸ್ಪಷ್ಟವಾಯಿತು. ಇವರೆಲ್ಲಾ ಬರೀ ಹಿಂದೂಗಳೇ ! ಒಬ್ಬ ಕಿರಿಸ್ತಾನನೂ ಬರಲಿಲ್ಲವಲ್ಲಾ ಎಂದು ತಲೆ ಕೆಡಿಸಿಕೊಂಡ. ಕ್ರೈಸ್ತ ಮತಸ್ಥರಲ್ಲಿ ಒಬ್ಬರೂ ಲಾಟರಿ ಟಿಕೇಟು ಕೊಂಡೇ ಇಲ್ಲವೆ ? ಕ್ರಿಸ್ತ ಮತದವರು ಮಾಡಿರುವ ಮಹಾ ಪಾಪವಾದರೂ ಏನು ? ಛೆಛೆ! ಇದು ಸರಿಯಲ್ಲ. ಎಲ್ಲ ಧರ್ಮಗಳವರೂ ಬರಬೇಕು. ಸರೆ, ಸುರುವಾಯಿತು ಕೆಡವುವ ಕೆಲಸ ಮೂರೆಂದರೆ ಮೂರೇ ದಿನಗಳಲ್ಲಿ ಶಿವಾಲಯ ನೆಲಸಮವಾಯಿತು—ಕರ್ಚು ಹೆಚ್ಚೇನಿಲ್ಲ, ಕಾಲು ಲಕ್ಷ ಮಾತ್ರ.

ಮರುದಿನವೇ ಹೊಚ್ಚ ಹೊಸ ಬುನಾದಿ. ಸತ್ತ ಏಸು ಕ್ರಿಸ್ತನಿಗೆ ಏನಾಯಿತೋ ಯಾರು ಬಲ್ಲರು ? ಕ್ರೈಸ್ತ ಮತದ ಅನುಯಾಯಿಗಳಂತೂ

ಅವರ ಕ್ರಿಸ್ತ ಸ್ವರ್ಗ ಮೂರೇ ಬೆರಳು. ತಿಂಮನನ್ನು ಬಾಯ್ತುಂಬ ಹೊಗಳಿ ಹಾಡಿದರು, ಕನ್ಯಾ ಮೇರಿಯಮ್ಮನ ಕೃಪೆಗೆ ಪಾತ್ರನಾದಿ ಎಂದು ಪಾದ್ರಿಗಳೆಲ್ಲರೂ ತಿಂಮನ ಬೆನ್ನು ತಟ್ಟಿದರು. ಮುಗಿಲೆತ್ತರದ ಚರ್ಚು ತಲೆ ಎತ್ತಿ ನಿಂತಿತು. ಒಂದು ಲಕ್ಷ ರೂಪಾಯಿ ಚೆಲ್ಲಿದರೆ ಯಾವ ಕೆಲಸ ಅಸಾಧ್ಯ ? ಚರ್ಚಿನ ದಾರಿಯಲ್ಲಿ ನಿಂತು ಅಲ್ಲಿಗೆ ಹೋಗಿಬರುವ ಪವಿತ್ರ ಭಕ್ತಾದಿಗಳನ್ನು ನೋಡಿ ನಲಿದ. ಮಿನಿಸ್ಕರ್ಟ್ ತುಂಬು ಹುಡಿಗಿಯರು ಕಿಲಕಿಲನೆ ನಗುತ್ತ ಜಿಂಕೆಯಂತೆ ಪುಟಿಯುತ್ತ ಬಂದರು. ಹಿಂದೆಯೆ ಟೈಟ್ ಪ್ಯಾಂಟ್, ರಾಜೇಶ್‌ಖನ್ನಾ ಕ್ರಾಪ್, ಕಪೋಲಕೇಶಿ ಯುವಕ ಭಕ್ತರು. ಉದ್ದನ ಬಿಳಿ ನಿಲುವಂಗಿಯ 'ಅಪ್ಪ'ಗಳು ಆಶೀರ್ವಾದ ಮಾಡಿದರು. ತಿಂಮನ ಹೃದಯ ತಣಿಯಿತು ಭಾನುವಾರ. ಸೋಮವಾರದಂದು ಅದೇ ಹೃದಯ ಭಾರವಾಗಬೇಕೆ, ಪಾಪ ! ಮರಿಯಮ್ಮನ ದೇವಾಲಯಕ್ಕೆ ಬರುತ್ತಿದ್ದವರೆಲ್ಲರೂ ಕೇವಲ ಕ್ರಿಶ್ಚಿಯನ್ನರು ಮಾತ್ರವೇ ! ಅನ್ಯ ಧರ್ಮದವರು ಅವೇಕೆ ಇಲ್ಲಿ ಬರುತ್ತಿಲ್ಲ ಎಂದು ಒಬ್ಬ ಪಾದ್ರಿಯನ್ನೇ ಕೇಳಿದ ತಿಂಮ. ಉತ್ತರ ಬಹು ಸ್ವಾರಸ್ಯವಾಗಿತ್ತು—ಅಜ್ಞಾನಿಗಳು ನಮ್ಮ ಗುಡಿಗೆ ಬರುವುದಿಲ್ಲ ಎಂದಂದ ಆ ಉದ್ದನ ಬಿಳಿ ನಿಲುವಂಗಿಯ ಮಹಾಜ್ಞಾನಿ. ಒಬ್ಬ ಇಸ್ಲಾಂ ಬಂಧುವೂ ಇತ್ತ ತಿರುಗಿಯೂ ನೋಡಲಿಲ್ಲ. ತಿಂಮನ ಎದೆ ಒಡೆಯಿತು. ಅವರು ಮಾತ್ರ ಮನುಷ್ಯರಲ್ಲವೆ? ಮಹಮ್ಮದನ ಧರ್ಮ ಧರ್ಮವೇ ಅಲ್ಲವೆ ! ನನ್ನಿಂದ ಈ ಅಪಕೃತಿ ಆಗಬಾರದು ಎಂದು ಪೇಚಾಡಿಕೊಂಡ.

ಹೇಗೂ ಇನ್ನೂ ಕೊಂಚ ಹಣ ಉಳಿದಿವೆ, ಅದನ್ನೂ ಮಾಡಿಯೇ ನೋಡೋಣ ಎಂದಂದ. ಚರ್ಚ್ ನೆಲಕ್ಕುರುಳಿತು. ಕಾಲು ಲಕ್ಷ ಸವೆಯಿತು. ಇನ್ನೊಂದು ಲಕ್ಷ ಹೋಗಲಿ ಎಂದಂದ. ಅತ್ಯದ್ಭುತವಾದ ಮಸೀದಿಯನ್ನು ನಿರ್ಮಿಸಿದ. ಇಸ್ಲಾಂ ಬಾಂಧವರೆಲ್ಲರೂ ತಿಂಮನ ಕೈ ಕುಲಿಕಿದರು, ಸಲಾಂ ಹಾಕಿದರು. ಆಗ ಆ ಬಡ ಅಲ್ಲಾ ಎಲ್ಲಿದ್ದನೋ, ಪಾಪ ! ಐದು ಹೊತ್ತು ಪ್ರಾರ್ಥನೆ. ಪ್ರತಿನಿತ್ಯವೂ ಮಲಗಿದ್ದ ಜನವನ್ನು—ದನವನ್ನೂ—ಎಚ್ಚರಿಸಲು ಮುಲ್ಲಾ ಸಾಹೇಬನಿಗೊಂದು ಧ್ವನಿವರ್ಧಕ ಯಂತ್ರ ಬೇರೆ, ಅದರ ಮುಂದೆ ನಿಂತು ಪುರೋಹಿತ ಮುಲ್ಲಾ ಕೂಗಿದರಾಯಿತು—ಮಲಗಿದವರಷ್ಟೇ ಅಲ್ಲ,

ಸತ್ತವರೂ ಎದ್ದರು—ಬದುಕಿದವರು ಸತ್ತರು. ತಿಂಮನಿಗೊಂದು ಸಂತೋಷ—ಪ್ರಾರ್ಥನೆ ಮಾಡಲು ಅಲ್ಲಿಗೆ ಬಂದ ಇಸ್ಲಾಂ ಭಕ್ತರಲ್ಲಿ ಶ್ರೀಮಂತ, ಬಡವ, ದಣಿ, ಸೇವಕನೆಂಬ ಬೇಧಬುದ್ಧಿ ಸುತರಾಂ ಇಲ್ಲ.

"ಅಲ್ಲಾಮಿಯಾನ ಕಂಣಲ್ಲಿ ಎಲ್ಲರೂ ಒಂದೇ"

ಎಂದೊಬ್ಬ ಖಾಜಿಸಾಹೇಬ ಹೇಳಿದ. ಈ ನೆಲ ಸಮತಾವಾದಕ್ಕೆ ತಿಂಮ ಖುಷಿಯಾದ, ಶಹಬ್ಬಾಸ್ ಹಾಕಿದ. ತಾನು ವ್ಯಯಮಾಡಿದ ಲಕ್ಷ ಸಾರ್ಥಕವಾಯಿತು ಎಂದು ಎದೆ ಉಬ್ಬಿಸಿದ. ಒಂದು ಶುಕ್ರವಾರ ಬಂತು—ಪರಮಾನಂದದಿಂದ ತಾನು ನಿರ್ಮಿಸಿದ ಮಸೀದಿಯ ಮುಂದು ಬಂದು ನೋಡುತ್ತಾ ನಿಂತ. ಪ್ರಾರ್ಥನೆ ಮುಗಿಯಿತು, ಬಂದವರೆಲ್ಲರೂ ಹೋದರು. ಒಬ್ಬೊಬ್ಬರನ್ನೇ ದಿಟ್ಟಿಸಿ ನೋಡಿದ—ಎಲ್ಲರೂ ಇಸ್ಲಾಮರೇ ! ಒಬ್ಬ ಹಿಂದೂ ಇಲ್ಲ, ಒಬ್ಬ ಕಿರಸ್ತಾನನೂ ಇಲ್ಲ ! ಹೀಗೇಕೆ ಎಂಬ ಯೋಚನೆ ತಲೆಯನ್ನು ತಿನ್ನಹತ್ತಿತು. ಅಲ್ಲಿಯೇ ಇದ್ದ ಮುದಿ ಮುಲ್ಲಾ ಸಾಹೇಬರನ್ನು ಕೇಳಿದ.

"ಅವರೆಲ್ಲ ಕಾಫೀರ್ ಜನ. ಅವರು ನಮ್ಮ ಮಸೀದಿಗೆ ಬರುವುದಿಲ್ಲ"

ಎಂಬ ಉತ್ತರ ಹಿಂದೆಯೆ ಬಂತು. ತಿಂಮನ ಮನಸ್ಸಿಗೆ ಅತೀವ ನೋವು ಉಂಟಾಯಿತು.

"ಥೂ ! ಈ ಸರ್ವ ಧರ್ಮಗಳಿಗೆ ಬೆಂಕೀ ಹಾಕ"

ಎಂಬ ಉದ್ಗಾರ ಬಾಯಿಂದ ತಾನಾಗಿ ಹೊರಬಿತ್ತು. ಅದರ ಪ್ರತಿಕ್ರಿಯೆ? ಇನ್ನೂ ಕೈಲಿ ಉಳಿದಿದ್ದ ಕಾಲು ಲಕ್ಷವನ್ನು ಕರ್ಚುಮಾಡಿ ಮಸೀದಿಯನ್ನು ಕೆಡವಿಸಿ ನೆಲಸಮ ಮಾಡಿದ. ಹಾಯಾಗಿ ಕಾಲು ಚಾಚಿ ಹಾಸಿಗೆಯಲ್ಲಿ ಮಲಗಿದ. ಆ ಹಾಯ್ ಎಲ್ಲವೂ ದೇಹಕ್ಕಾಯಿತು. ಆದರೆ ತಲೆಗೆ ? ದೈಹಿಕ ವಿಶ್ರಾಂತಿ ದೊರಕಿದಷ್ಟೂ ತಲೆಗೆ ಕೆಲಸ ಹೆಚ್ಚು. ತಿಂಮನ ತಲೆ ಮತ್ತೆ ದಿಕ್ಕೆಟ್ಟು ಓಡಲಾರಂಭಿಸಿತು.

ಸರ್ವ ಧರ್ಮಗಳಿಂದ ಬಂದ, ಐದು ಲಕ್ಷ ಮುಗಿಯಿತು, ಕೈ ಖಾಲಿ ಆಯಿತು. ಆದರೆ ತಾನು ಸಾಧಿಸಿದುದು ? ಶ್ರೀರಾಮ ಮಂದಿರವನ್ನು ಕಟ್ಟಿಸಿದ, ಶಿವಾಲಯವನ್ನು ಕಟ್ಟಿಸಿದ, ಚರ್ಚ್ ಕಟ್ಟಿಸಿದ, ಮಸೀದಿಯನ್ನು ಕಟ್ಟಿಸಿದ—ಎಲ್ಲವನ್ನೂ ಕೆಡವಿಸಿದ. ಇದೂ ಒಂದು ಸಾಧನೆಯೇ ? ಎಲ್ಲ

ಧರ್ಮಗಳ ಜನನವೂ ಒಂದೆಡೆ ಸೇರುವಂತಹ ಒಂದು ದೇವಾಲಯವನ್ನು ನಿರ್ಮಿಸಲೇಬೇಕು ಎಂಬ ಯೋಚನೆ ಅವನ ತಲೆಯಲ್ಲಿ ಕಟೆಯಲಾರಂಭಿಸಿತು. ಶನಿಯಂತೆ ಕಾಡಹತ್ತಿತು. ಬಂತೊಂದು ಅಮೃತ ಗಳಿಗೆ, ಥಟ್ಟನೆ ತಲೆಯಲ್ಲೊಂದು ಯೋಚನೆ ಹೊಳೆಯಿತು. ಹೌದು, ಈ ಕೆಲಸ ಆಗಲೇಬೇಕು. ನನ್ನಿಂದಲೇ ಆಗಬೇಕು ಎಂದು ತನಗೆ ತಾನೇ ಹೇಳಿಕೊಂಡು ಛಟ್ಟನೆ ಎದ್ದ. ಕೈಗೊಂದು ಜೋಳಿಗೆ ಹಾಕಿ ಊರಲ್ಲಿ ಹೊರಟ.

"ಸ್ವಾಮಿ ! ನನಗಾಗಿ ಒಂದು ಕಾಸೂ ಬೇಡುತ್ತಿಲ್ಲ. ಸರ್ವಧರ್ಮ ದೇವಾಲಯ ಒಂದನ್ನು ಕಟ್ಟಿಸಲು ನನಗೆ ಅಂತಃಪ್ರೇರಣೆಯಾಗಿದೆ. ನನ್ನಲ್ಲಿದ್ದ ಐದು ಲಕ್ಷವೂ ಮುಗಿಯಿತು, ನನ್ನ ದಡ್ಡತನದಿಂದ ವ್ಯರ್ಥವಾಗಿ ಹಾಳಾಯಿತು. ಈಗ ಹೊಸ ಯೋಜನೆ ಹಾಕಿಕೊಂಡಿದ್ದೇನೆ. ಇದಕ್ಕೆ ಕೇವಲ ಐದೇ ನೂರು ರೂಪಾಯಿಗಳು ಸಾಕು. ದಯವಿಟ್ಟು ಯಥಾ ಕಿಂಚಿತ್ ಸಹಾಯ ಮಾಡಿ"

ಎಂದು ಜೋಳಿಗೆ ಒಡ್ಡಿ ನಡುರಸ್ತೆಯಲ್ಲಿ ನಿಂತ. ಎಂದೂ ಯಾರ ಮುಂದೂ ಒಡ್ಡದ ಕೈ ತಿಂಮನದು, ತನಗಾಗಿ ದೇಹಿ ಎಂದಂದವನಲ್ಲ. ಸುನಾಯಾಸವಾಗಿ ಕೈಗೆ ಬಂದ ಐದು ಲಕ್ಷ ರೂಪಾಯಿಗಳಲ್ಲಿ ಒಂದು ಬಿಡಿ ಕಾಸನ್ನೂ ತನಗಾಗಿ ಇಟ್ಟುಕೊಳ್ಳಲಿಲ್ಲ. ಇಂತಹ ತಿಂಮನಿಗೆ ಕೊಡಲು ಯಾರು ಹಿಂಜರಿಯುತ್ತಾರೆ. ಐದೇ ನಿಮಿಷಗಳಲ್ಲಿ ಐದು ನೂರು ಸೇರಿಹೋಯಿತು— ಇನ್ನು ಸಾಕು ಎಂದು ಜೋಳಿಗೆ ಮುಚ್ಚಿದ, ಮನೆಗೆ ಬಂದ

ಮೂರೆಂದರೆ ಮೂರೇ ದಿನಗಳು. ಊರ ಮುಂದು ಭವ್ಯವಾದ, ಅಂದವಾದ, ಚೆಂದವಾದ, ಸುಂದರವಾದ, ಸ್ವಚ್ಛವಾದ ಭಾರೀ ಪಾಯಿಖಾನೆ ಸಿದ್ಧವಾಯಿತು. ಬೆಳಗಿನಲ್ಲಿಯೇ ಎದ್ದು ಕೊಂಚ ದೂರದಲ್ಲಿ ನಿಂತ, ನಿಂತು ನೋಡಿದ, ನಿಂತು ನೋಡಿ ಸಂತೋಷಿಸಿದ. ಶ್ರೋತ್ರಿಯ ಬ್ರಾಹ್ಮಣರು, ಪರಿಶುದ್ಧ ವೀರಶೈವರು, ಉದ್ದುದ್ದನ ಬಿಳೀ ನಿಲುವಂಗಿಯ ಕ್ರೈಸ್ತ ಮತದ ಪಾದ್ರೆಪ್ಪಗಳು, ದಾಡೀ ವೌಲ್ವಿಗಳು ಎಲ್ಲರೂ ಬಂದರು. ವೃದ್ಧರು, ಯುವಕರು, ಮಕ್ಕಳು ಎಂಬ ಭೇದಬಾವ ಎಷ್ಟೂ ಇಲ್ಲ. ಸರ್ವಧರ್ಮಗಳವರೂ—ಅರ್ಥಾತ್ ಸರ್ವಅಧರ್ಮಗಳವರೂ ಆ ದೇವಾಲಯಕ್ಕೆ ತಪ್ಪದೆ ಬಂದರು. ನಿತ್ಯವೂ ಬಂದರು. ಕೆಲವ

ರಂತೂ ಎರಡೂ, ಮೂರೂ ಬಾರಿ ಕೂಡ ಬಂದರು. ಬಹು ಸಮಯ ಇದ್ದು ಹೋದರು.

ತಿಂಮನ ಆತ್ಮ ಕಿಲ ಕಿಲನೆ ನಕ್ಕಿತು, ತಾನು ಕಟ್ಟಿಸಿದ್ದ ಸರ್ವಧರ್ಮ ದೇವಾಲಯ ಸಾರ್ಥಕವಾಯಿತು ಎಂದು. ಎಲ್ಲರದೂ ಒಂದೇ ಧರ್ಮ— ಪ್ರಕೃತಿ ಧರ್ಮ ?

# ಕೆಟ್ಟ ಹಾವು

"ಅಯ್ಯಯ್ಯೋ ! ಹಾವು....ಹಾವು !"

ಲಕ್ಷ್ಮಿ ಇದ್ದಕ್ಕಿದ್ದಂತೆ ಚೀರಿ ಕಂಗಾಲಾಗಿ ಕೋಣೆಯಿಂದ ಹೊರಗೋಡಿ ಬಂದಳು. ಮುಖ ಕಂಗೆಟ್ಟಿತ್ತು. ಕಾಫಿ ಗುಟಕರಿಸುತ್ತ ಕುಳಿತಿದ್ದ ರಘು ಬೆಚ್ಚಿ ಬಿದ್ದೆದ್ದ, ಹೆಂಡತಿಯತ್ತ ಧಾವಿಸಿದ.

"ಎಲ್ಲಿದೆ ? ಎಲ್ಲಿದೆ ?"

ಲಕ್ಷ್ಮಿಯ ಮುಖದಿಂದ ಮಾತೇ ಹೊರಡಲಿಲ್ಲ. ಭಯದಿಂದ ಮೈ ಥರಥರ ಕಂಪಿಸುತ್ತಿತ್ತು. ಕೋಣೆಯತ್ತ ಕೈಯನ್ನಷ್ಟೆ ತೋರಿಸಿ ಕಲ್ಲಕಂಬದಂತೆ ನಿಂತಳು.

"ಮಗು ಎಲ್ಲಿ ?"

ಕೆಲಸದ ಹುಡುಗಿ ಹೊರಗೊಯ್ದಿದ್ದಾಳೆ"

ರಘೂನ ಜೀವಕ್ಕೆ ಕೊಂಚ ಸಮಾಧಾನ. ಈ ಸಂದರ್ಭದಲ್ಲಿ ಮಗುವೂ ಒಳಕ್ಕೆ ಉಳಿದಿದ್ದರೆ ಗತಿ ? ದೇವರು ದೊಡ್ಡವನು ಎಂದಂದುಕೊಂಡ—ದೇವರು ದೊಡ್ಡವನಾದುದೇ ಹೀಗೆ ?

ಲಕ್ಷ್ಮಿಗೆ ಮಾತನಾಡಲು ಸಾಧ್ಯವಾದುದು ಅದೆಷ್ಟು ಸಮಯದ ನಂತರ ? ಇನ್ನೂ ಎದೆಯ ಏರಿಳಿತ ನಿಂತಿಲ್ಲ. ಏದುಸಿರು ಬಿಡುತ್ತಿದ್ದಾಳೆ, ನಾಲಿಗೆ ಶೇವವಿಲ್ಲ. ಕಣ್ಣಲ್ಲಿ ಅಂಜಿಕೆ ಒಡಮೂಡಿದೆ. ಏನು ಮಾಡಬೇಕು ರಘು ?



ಅಯ್ಯಯ್ಯೋ ! ಹಾವು....ಹಾವು !

ಹೆಂಡತಿಯನ್ನೇ ನೋಡುತ್ತ ನಿಂತುಬಿಟ್ಟ. ಲಕ್ಷ್ಮಿಯ ಬಾಯಿಂದ ಮಾತು ಒಂದೊಂದಾಗಿ ಜಾರುತ್ತಲಿದೆ.

"ನಾಗಪ್ಪಾ !....ತೊಟ್ಟಿಲಲ್ಲೇ ಕೂತಿದೆ....ಹೆಡೆ...."

ಹಾವು ಹೊಕ್ಕ ಮನೆಯಲ್ಲಿ ಯಾರಿರಲು ಸಾಧ್ಯ ? ಗಂಡ, ಹೆಂಡತಿ ಹೊರ ಕಟ್ಟೆಗೆ ಬಂದು ನಿಂತರು, ಬಾಗಿಲನ್ನು ಮುಂದುಮಾಡಿ. ಹಾವಿನಕಿಂತಲೂ ಹೆಚ್ಚು ವೇಗವಾಗಿ ಹಾವಿನ ಸುದ್ದಿ ಹರಿದಾಡುತ್ತದೆ. ಅಕ್ಕಪಕ್ಕದವರು ಬಂದರು, ಆಚೆ ಬೀದಿಯವರು ಬಂದರು, ಏನು ಏನು ಎಂದರು.

"ರಘೂನ ಮನೆಯಲ್ಲಿ ಹಾವು ಹೊಕ್ಕದಂತೆ"

ಎಲ್ಲರ ಬಾಯಲ್ಲೂ ಒಂದೇ ಮಾತು, ಒಂದೇ ಕಾತುರದ ದನಿ

"ನಾಗಸರ್ಪವಂತೆ"

"ಕರೀಂನನ್ನು ಕರೆಯಿಸಿ, ಭರ್ಜಿಯಿಂದ ಇರಿದು ಕೊಂದುಹಾಕುತ್ತಾನೆ."

"ಛಿ ! ನಾಗರಹಾವನ್ನು ಕೊಲ್ಲಬಾರದು. ಮನೆಗೇ ಕೇಡುಕು, ವರ್ಷದಲ್ಲೇ ಮೂವರು ಸಾಯುತ್ತಾರೆ ಮನೇಲಿ."

"ಕರೀಂ ಬೇಡ"

ರಘೂನೇ ಹೇಳಿದ. ಅವರಿರುವುದೂ ಮೂರೇ ಜನ.

"ಲಕ್ಷ್ಮಮ್ಮನೇ ನೋಡಿದರಂತೆ, ಹೆಡೆಬಿಚ್ಚಿ ಆಡುತ್ತಿತ್ತಂತೆ"

"ಒಂದು ಬಟ್ಟಲು ಹಾಲು ಇಟ್ಟುಬಿಡಿ, ಕುಡಿದುಹೋಗುತ್ತೆ."

"ಅದನ್ನು ಕಲಿಸಬೇಡಿ, ದಿನಾಲೂ ಬಂದೀತು"

ಸೀಮೆಸುಣ್ಣವನ್ನು ಹಿಡಿದು ಸೈನ್ಸ್ ಪ್ರೊಫೆಸರ್ ಓಡುತ್ತ ಬಂದರು—ಬಾಗಿಲ ಮೇಲೆಲ್ಲ "ಆಸ್ತಿಕ" ಎಂದು ದೇವನಾಗರಿ ಲಿಪಿಯಲ್ಲಿ ಬರೆದರು.

"ಇವರು ನಮ್ಮ ವಿಜ್ಞಾನದ ಪ್ರೊಫೆಸರ್"

ಎಂದು ಇನ್ನೊಬ್ಬರು ಅವರ ಮುಖದ ಮೇಲೆಯೇ ನಕ್ಕರು.

"ಇವರು ವಿಜ್ಞಾನಿಗಳಲ್ಲಯ್ಯಾ ! ಹಣಕ್ಕೆ ವಿಜ್ಞಾನದ ಪಾಠ ಹೇಳುತ್ತಾರೆ, ಅಷ್ಟೆ. ಅದು ಕಸುಬು, ಇದು ನಂಬಿಕೆ."

"ಎಲ್ಲಾರೂ ಅಷ್ಟೇ ಬಿಡ್ರಿ. ತತ್ವಜ್ಞಾನದ ಪ್ರೊಫೆಸರರು ತತ್ತ್ವಜ್ಞಾನಿ

ಗಳೇ ಆಗಿರಬೇಕೇ ? ಅಂತಹ ಅನೇಕರಲ್ಲಿ ತತ್ವವೂ ಇಲ್ಲ, ಜ್ಞಾನವೂ ಇಲ್ಲ. ಹೊಟ್ಟೆಗಾಗಿ ಒಂದು ವೃತ್ತಿ."

ಜನಕ್ಕೆ ಮಾತು ಬೇಕು, ರಘೂಗೆ ? ಮೊದಲು ಈ ಹಾವಿನಿಂದ ಪಾರಾಗ ಬೇಕು. ಗಂಡ, ಹೆಂಡತಿ ಕಂಗಾಲಾಗಿ ನಿಂತರು, ಪಾಪ ! ಮನೆಯೊಳಕ್ಕೆ ಅವರು ಕಾಲಿಡುವುದು ಹೇಗೆ ? ಅವರ ಯೋಚನೆ ಅವರಿಗೆ.

"ಏನೂ ಬೇಡ, ನಂಜುಂಡನನ್ನು ಕರೀರಿ"

ಅಲ್ಲೇ ಬಂದು ನಿಂತವರೊಬ್ಬರು ಸಲಹೆ ಮಾಡಿದರು.

"ಹೌದು, ಅದೇ ಒಳ್ಳೆಯ ಉಪಾಯ. ಅವನು ಕೊಲ್ಲುವುದೂ ಇಲ್ಲ, ಹಿಡಿದು ಕೊಂಡೊಯ್ದು ಕಾಡಿನಲ್ಲಿ ಬಿಟ್ಟುಬಿಡುತ್ತಾನೆ, ಪಾಪ !"

ಏನಾದರೂ ಮಾಡಿ ನಮ್ಮನ್ನು ಕಾಪಾಡಿ ಎನ್ನುವಂತೆ ಮುಖ ಮಾಡಿ ರಘು, ಲಕ್ಷ್ಮಿ ನಡುರಸ್ತೆಯಲ್ಲಿ ನಿಂತುಬಿಟ್ಟಿದ್ದರು. ಲಕ್ಷ್ಮಿ ಮಗುವನ್ನು ಎದೆಗವಚಿಕೊಂಡಿದ್ದಳು. ಕಣ್ಣಲ್ಲಿ ಮೂಡಿದ್ದ ಭಯ ಇನ್ನೂ ಹೋಗಿರಲಿಲ್ಲ. ಯಾವುದನ್ನೂ ಅರಿಯದ ಮಗು ಬೊಚ್ಚು ಬಾಯಿ ತೆರೆದು ನಕ್ಕಿತು.

"ಓಡೋ ಮರೀ ! ನಂಜುಂಡನ್ನ ಕರೀ"

"ನಂಗೆ ಸೈಕಲ್ ಕೊಡಿ, ನಾ ಕರೀತೀನೆ"

ಯಾರದೋ ಬೈಸಿಕಲ್, ಯಾರೋ ಏರಿದರು. ಒಂದೇ ವೇಗದಲ್ಲಿ ತುಳಿದು ಮಾಯವಾದರು. "ಬಂದ....ಬಂದ....ನಂಜುಂಡ ಬಂದ."

ಸೇರಿದ್ದ ಜನದಲ್ಲಿ ಹರ್ಷೋದ್ಗಾರ ! ಎಲ್ಲರ ಕಂಣೂ ನಂಜುಂಡನ ಮೇಲೆಯೇ–ನಂಜುಂಡ ಆಗ ಸಾಕ್ಷಾತ್ ದೇವರು ! ನಾಗಪ್ಪ ದೇವರು. ನಾಗಪ್ಪ ನನ್ನು ಹಿಡಿಯುವವನೂ ದೇವರು. ಕೈಲಿದ್ದ ಬೈಸಿಕಲ್ಲನ್ನು ಗೋಡೆಗಾನಿಸಿದ ನಂಜುಂಡ. ಬಾಗಿಲನ್ನು ತೆರೆದು ಒಳ ನುಗ್ಗಿದ. ಹಾವು ಅಂದರೆ ಎಲ್ಲರಿಗೂ ಅಂಜಿಕೆ, ನಂಜುಂಡ ಅಂದರೆ ಅಷ್ಟೇ ಮೆಚ್ಚುಗೆ. ಸೇರಿದ್ದ ಜನ ಹೋಗಲಿಲ್ಲ, ಒಳಕ್ಕೂ ಬರಲಿಲ್ಲ. ಅದೊಂದು ಬಗೆಯ ಕಾತುರ ಎಲ್ಲರ ಮುಖದಲ್ಲೂ. ಕಾಯುತ್ತಾ ನಿಂತಲ್ಲಿಯೇ ನಿಂತರು.

"ತೊಟ್ಟಿಲಲ್ಲಿದೆ ನಂಜುಂಡಪ್ಪಾ !"

ರಘು ಕೂಗಿ ಹೇಳಿದ. ನಂಜುಂಡನನ್ನು ಇಂತಹ ಸಮಯದಲ್ಲೇ

ನಂಜುಂಡಪ್ಪಾ ಅನ್ನುವುದು. ಉಳಿದಾಗಲಿಲ್ಲ? ಬೇವಾರ್ಸಿ ನಂಜುಂಡ.

"ಫರವಾ ಇಲ್ಲ, ನಾ ನೋಡ್ಕೋತಿನ್ವಿ. ಬಾ ನಾಗಪ್ಪಾ!"

ಹಳೆಯ ಗೆಳೆಯರನ್ನು ಕಾಣಲು ಹೊರಟವನಂತ ನಂಜುಂಡ ನೇರವಾಗಿ ಒಳಕ್ಕೇ ನಡೆದ. ಮೂರೆಂದರೆ ಮೂರೇ ನಿಮಿಷ—ಹಾವಿನ ಕತ್ತು ನಂಜುಂಡನ ಬಿಗಿ ಮುಷ್ಟಿಯಲ್ಲಿ ನೂರುದ್ದದ ಸರ್ಪ ಜೋತು ಬಿದ್ದು ಬಾಲ ನೆಲಮುಟ್ಟಿದೆ.

ನಿಂತಿದ್ದ ಜನ ಅವಕ್ಕಾಗಿ ನೋಡಿತು. ನಂಜುಂಡನ ಮುಖದಲ್ಲಿ ಕ್ರೌರ್ಯವಿಲ್ಲ, ಮಂತ್ರವಾದಿಯ ನಾಟಕೀಯ ಗಾಂಭೀರ್ಯವೂ ಇಲ್ಲ. ನಾಗಪ್ಪ ನಿಗೆ ಬುದ್ಧಿ ಹೇಳುವ ದನಿ, ಕಾಂತಾ ಸಮ್ಮಿತ.

"ಮಕ್ಕಳು ಮರಿ ಇರೋ ಮನಾಗ ಬರಬಾರದು ನಾಗಪ್ಪಾ, ನೀಇು. ಹೆದರತಾರೆ, ಪಾಪ! ಇಲ್ಲೇನು ಕೆಲಸ ನಿಂಗೆ? ಬಾ, ಹೋಗೋನು."

ಆ ಭಯಾನಕವಾದ ಹಾವನ್ನು ಕೈಲಿ ಹಿಡಿದು ನಡದೇಬಿಟ್ಟ ನಂಜುಂಡ. ಆಮೇಲೆ? ಆಮೇಲೆ ಹಾವು ಯಾರಿಗೆ ಬೇಕು, ನಂಜುಂಡ ಏಕೆ ಬೇಕು?

ರಘು ಎಲ್ಲರಂತಲ್ಲ, ಪಾಪ! ಅದಕ್ಕೂ ಹೆಚ್ಚಾಗಿ ಲಕ್ಷ್ಮಿ ಸುಮ್ಮನಿರ ಬೇಕಲ್ಲಾ?

"ಮೊದಲು ಹೋಗಿ ಆ ನಂಜುಂಡಪ್ಪನಿಗೆ ಒಂದು ಹತ್ತು ರೂಪಾಯಿ ಕೊಟ್ಟು ಬನ್ನಿ"

ಒಂದೇ ಹಟ ಹೆಂಡತಿಯದು, ಗಂಡನಿಗೂ ಅದೇ ಸರಿ ಎಂದನಿಸಿತು. ಆದರೆ ಬೇವಾರ್ಸಿ ನಂಜುಂಡನನ್ನು ಹಿಡಿಯುವುದು ಅಷ್ಟು ಸುಲಭವೇ? ಅವರಿವ ರನ್ನೆಲ್ಲ ವಿಚಾರಿಸಿ ಕಡೆಗೂ ರಘು ನಂಜುಂಡನ ಮನೆಯನ್ನು ಪತ್ತೆ ಮಾಡಿದ— ಅವನಿಗಾವ ಮನೆ ಇದೆ? ಹೊಲಸು ಗಲ್ಲಿಯಲ್ಲೊಂದು ರೂಮು. ರಘು ಬಂದಾಗ ರೂಮಿಗೆ ಬೀಗ.

ನಂಜುಂಡ ರೂಮಿನಲ್ಲಿಲ್ಲ ಎಂದು ಮರಳಿ ಮನೆಗೆ ಹೋಗಿ ಬಿಡುವುದೇ? ರಘೂನ ಮನಸ್ಸು ಒಪ್ಪಲಿಲ್ಲ—ಅವನು ಉಪಕಾರ ಮಾಡಿ ಹನ್ನೆರಡು ಗಂಟೆಗಳೂ ಆಗಿಲ್ಲ ಇನ್ನೂ. ಅವರಿವರನ್ನು ಕೇಳಿದ, ನಂಜುಂಡಪ್ಪ ಯಾವಾಗ ಬರುತ್ತಾ ನೆಂದು.

"ನಂಜುಂಡಪ್ಪ! ಯಾವ ನಂಜುಂಡಪ್ಪ?"

"ಯಾರು ಬೇವಾರ್ಸಿ ನಂಜುಂಡನೇ ?"

"ಅವಂದೇನು ಸ್ವಾಮೀ ನಂಬಿಕೆ ? ಬಂದರೆ ಬಂದ, ಇಲ್ಲದಿದ್ರೆ ಮೂರು ಮೂರು ದಿನ ಬಾಕಿಲಾನೂ ತೆಗಿಯಾಕಿಲ್ಲ"

"ನಂಜುಂಡಪ್ಪ ಎಲ್ಲಿಗೆ ಹೋಗುತ್ತಾನೆ ?"

"ಎಲ್ಲಿಗೆ ಅಂತ ಹೇಳೋದು ? ಸೆಕೆಂಡ್ ಷೋ ಸಿನಿಮಾಕ್ಕೆ ಹೋಗಿದ್ದಾನು."

ಒಬ್ಬೊಬ್ಬರದು ಒಂದೊಂದು ಮಾತು. ಅಂತೂ ರಘೂಗೆ ನಿಖರವಾದ ಉತ್ತರ ಸಿಕ್ಕಲಿಲ್ಲ. ಕಟ್ಟೆಯಮೇಲೆ ಕುಳಿತು ಕಾಯಬೇಕು. ಗಟಾರದ ದುರ್ವಾಸನೆ ! ನಾಳೆ ಬಂದರೆ ? ನಾಳೆ ಇನ್ನೇನೋ ಕೆಲಸ. ಬಂದಾಗ ಬರಲಿ ಎಂದು ನಿಂತ ರಘು, ಎಲ್ಲಿಯೋ ಹೋಗಿದ್ದ ನಂಜುಂಡನಿಗಾಗಿ ಕಾಯುತ್ತ.

ಕಾಲು ನಿಂತಾಗಲೇ ತಲೆಗೆ ಓಟ. ರಘೂನ ತಲೆ ಎತ್ತೆತ್ತಲೋ ಹೊರಟಿತು. ಈ ನಂಜುಂಡಪ್ಪನಿಗೆ ಹೆಂಡತಿ, ಮಕ್ಕಳು ಇಲ್ಲವೇ ? ಇವನು ಹಾವನ್ನು ಹೇಗೆ ಹಿಡಿಯುತ್ತಾನೆ ? ಇವನ ಅಂಗೈಯಲ್ಲಿ ಗರುಡನ ಗೆರೆ ಇದೆಯೇ ? ಗರುಡನ ಗೆರೆ ಅಂದರೇನು ? ಅದು ನನಗೇಕೆ ಇಲ್ಲ ? ಹಾವಾಡಿಸುವವರಿಗೆಲ್ಲ ಗರುಡರೇಖೆ ಇರುತ್ತೆಯೆ ? ಈ ನಂಜುಂಡಪ್ಪ ಎಲ್ಲಿ ಹೋದ ? ಮತ್ತೆ ಹಾವು ಹಿಡಿಯಲು ಹೋದನೆ ? ನಾಗಪ್ಪ ದೇವರಲ್ಲವೇ ? ದೇವರನ್ನು ಹಿಡಿಯುವುದು ಒಳ್ಳೆಯದೇ ? ತಲೆ ತುಂಬ ಪ್ರಶ್ನೆಗಳು, ಉತ್ತರ ಒಂದಕ್ಕೂ ಇಲ್ಲ. ಅಕೋ, ಬಂದೇಬಿಟ್ಟ ನಂಜುಂಡಪ್ಪ ! ಅಲ್ಲ, ಕತ್ತೆ ಬರುತ್ತಿದೆ. ಸುಡುಗಾಡು ಕತ್ತಲು, ಏನೂ ಕಾಣುವುದಿಲ್ಲ.

ನಿಂತೂ ಸಾಕಾಯಿತು, ಹಸಿವು. ಮೇಲೆ ನಿದ್ರೆ. ಚಿಟಿ ಚಿಟಿ ಚಳಿ, ಮೇಲೆ ತುಂತುರು ಮಳೆ. ಮನೆಗಾದರೂ ಹೋಗಿಬಿಡಲೇ ? ನಂಜುಂಡಪ್ಪ ? ಹಾಗೇ ಹೋದರೆ ಲಕ್ಷ್ಮಿ ಏನನ್ನುತ್ತಾಳೋ ? ಸೇನಯೋರುಭಯೋರ್ಮಧ್ಯೇ ನಿಂತಿದ್ದ ಅರ್ಜುನನ ಗತಿಯೇ ರಘೂನದು. ಹೋಗುವುದು ತಪ್ಪು, ನಿಲ್ಲಲು ಸಾಧ್ಯವಿಲ್ಲ.

ಅರ್ಜುನನಿಗೆ ಕೃಷ್ಣ ನಿಜರೂಪ ದರ್ಶನ ಮಾಡಿಸಿದ – ರಘೂಗೆ ನಂಜುಂಡಪ್ಪನೂ ಅದೇ ಕೆಲಸ ಮಾಡಿದ. ಅಂತೂ ಬಂದ ನಂಜುಂಡ.

"ಯಾಕೆ ಸೋಮೀ ? ಮತ್ತೇ ಹಾವು ಬಂತಾ ?"

"ಇಲ್ಲ ನಂಜುಂಡಪ್ಪಾ, ಹಾವು ಏನಿಲ್ಲ. ನಾನೇ ಹುಡಿಕಿಕೊಂಡು ಬಂದೆ"

ನಂಜುಂಡನನ್ನು ಹುಡಿಕಿಕೊಂಡು ಬರುವವರು ಇಲ್ಲವೇ ಇಲ್ಲ ಎಂದಲ್ಲ, ಆಗಾಗ ಬರುತ್ತಿದ್ದರು. ಊಟದ ಹೋಟೆಲವರು, ಸಿಗರೇಟು ಅಂಗಡಿಯವರು ಬಾಕಿ ವಸೂಲಿಗಾಗಿ ಬರುತ್ತಲೇ ಇರುತ್ತಿದ್ದರು. ಇವರೇಕೆ ಬಂದರು ಎಂಬುದೇ ಅರ್ಥವಾಗಲಿಲ್ಲ. ಕಕ್ಕಾಬಿಕ್ಕಿಯಾಗಿ ನಿಂತ ನಂಜುಂಡ.

"ನಿಮ್ಮಿಂದ ಆದ ಉಪಕಾರ ಸಾಮಾನ್ಯವೇ ನಂಜುಂಡಪ್ಪಾ ? ಇದನ್ನು ಇಟ್ಟುಕೊಳ್ಳಿ"

ಬೆಚ್ಚಿ ಬಿದ್ದು ದೂರ ಸರಿದ ನಂಜುಂಡ. ರಘೂನ ಕೈಲಿದ್ದ ನೋಟು ನೆಲಕ್ಕೆ ಬಿತ್ತು.

"ಅದು ಮಾತ್ರ ಬೇಡಾ ಸೋಮೀ ! ನಮ್ಮ ಗುರು ಹೇಳ್ಯಾರೆ, ನಾಗಪ್ಪಂದು ಕಾಸು ಮುಟ್ಟಿದರೆ ಈ ನಂಜುಂಡ ಇವತ್ತೇ ಸತ್ತ."

ರಘು ಇನ್ನು ಮಾತಾಡುವುದೇನಿದೆ ? ಉಪಕಾರ ಮಾಡಿದವನನ್ನು ಕೊಲ್ಲುವುದೇ ? ಕೈ ಮುಗಿದು ನಡೆದ, ಬಂದ ದಾರಿಗೆ ಸುಂಕವಿಲ್ಲ.

ನಂಜುಂಡನ ಪೂರ್ವ ಚರಿತ್ರೆ ಏನು ? ಯಾರಿಗೆ ಗೊತ್ತಿದೆ ? ಗೊತ್ತಿರ ಬೇಕಾದ ಒಬ್ಬನೇ ಒಬ್ಬ ವ್ಯಕ್ತಿ ನಂಜುಂಡ—ಅವನೇ ಅದಕ್ಕೆ ಅಪರಿಚಿತ. ನಂಜುಂಡನಿಗಿಷ್ಟು ಮಾತ್ರ ನೆನಪಿದೆ—ಅವನಿನ್ನೂ ಎಂಟು, ಹತ್ತು ವರ್ಷಗಳ ಹುಡುಗ. ಅವನ ಊರಲ್ಲಿ ದೊಡ್ಡೊಂದು ಶಾಲಾಕಟ್ಟಡ ನಿರ್ಮಾಣವಾಗುತ್ತ ಲಿತ್ತು. ಸೈಜು ಕಲ್ಲುಗಳು ರಾಸಿ ರಾಸಿಯಾಗಿ ವರ್ಷಗಳು ಬಿದ್ದಿದ್ದವು. ಎಲ್ಲ ಹುಡುಗರೂ ಅಲ್ಲಿಯೇ ಗೋಲಿ ಆಡಲು ಹೋಗುತ್ತಿದ್ದರು. ಒಂದು ಗೋಲಿ ಓಡಿ ಕಲ್ಲ ಸಂದಿನಲ್ಲಿ ಸೇರಿತು. ನಂಜುಂಡ ಕಲ್ಲನ್ನೆತ್ತಿದ, ಅದರಡಿ ಒಂದು ಚೇಳಿನ ಮರಿ !

"ಹಿಡಿ ಹಿಡಿ" ಎಂದದಾರೋ ಗೆಳೆಯರು ಕೂಗಿದರು.

ನಂಜುಂಡ ಥಟ್ಟನೆ ಹಿಡಿದುಬಿಟ್ಟ. ಚೇಳಿನ ಮರಿಯ ಕೊಂಡಿಯನ್ನೇ ಹಿಡಿದ, ಮುಳ್ಳನ್ನಾಡಿಸಲೂ ಮಾರ್ಗವಿಲ್ಲ ಅದಕ್ಕೆ. ಖಾತಿ ಕಡ್ಡಿ ಪೆಟ್ಟಿಗೆ

ಯೊಂದು ಕೈಗೆ ಬಂತು, ಅದರಲ್ಲಿ ಬಿದ್ದಿತು ಚೇಳು. ಗೋಲಿಯಾಟ ಬೇಡವಾಯಿತು ನಂಜುಂಡನಿಗೆ, ಚೇಳು ಹಿಡಿಯುವುದೇ ಖುಸಿ ಎನಿಸಿತು. ಚೂಟಿ ಸಿಕ್ಕಿತು. ಕಬ್ಬಿಣ ಚೇಳನ್ನೂ ಹಿಡಿದ, ಕೆಂಪು ಚೇಳನ್ನೂ ಹಿಡಿದ. ಆಗೆಲ್ಲ ನಂಜುಂಡನ ಹೆಸರು ಚೇಳಿನ ನಂಜುಂಡ.

ಒಂದು ಮಧ್ಯಾಹ್ನ, ತಲೆಯೊಡಿಯುವ ಬಿಸಿಲು. ನಂಜುಂಡ ತನ್ನ ಚೇಳಿನ ಹೋಮದಲ್ಲಿ ತೊಡಗಿದ್ದ. ದೂರ ನಿಂತು ನೋಡುತ್ತಿದ್ದ ಒಬ್ಬ ಬಾವಾಜಿ. ಮುಸಿ ಮುಸಿ ನಗುತ್ತ ಸನಿಯ ಬಂದ, ಬೇಷ್ ಎಂದು ಬೆನ್ನು ಚಪ್ಪರಿಸಿ ನಂಜುಂಡನಿಗೆ ಹೇಳಿದ.

"ನಿನ್ನ ಕೈಯಾಗೆ ಗರುಡರೇಖಾ ಅದೇ ತಮ್ಮಾ! ನೀಮ ಹಾವು ಹಿಡಿ, ಅದರೆ ಹುಷಾರು! ಪಕಡ್ ಗೊತ್ತಿರಬೇಕು. ತಲೆ ಆಡಿಸಲು ಆಸ್ಪದ ಕೊಡದಂತೆ ಹಿಡಿ"

ನಂಜುಂಡನಿಗೆ ಬಾವಾಜಿಯ ಉಪದೇಶ ಹಿಡಿಸಿತು. ಹೂಂ ಎಂದು ತಲೆಯಾಡಿಸಿದ.

"ಕಾಸು ಮಾತ್ರ ತೆಕೋಬ್ಯಾಡ. ಮುಟ್ಟಿದರೆ ಸಾಯಿತಿ ನೋಡ್ರ ತಮ್ಮಾ!"

ಇಂತಹ ಮಾತನ್ನು ಹೇಳದಿದ್ದರೆ ಬಾವಾಜಿ ಬಾವಾಜಿಯೇ? ಬಾವಾಜಿಯ ದನಿ ಹಾಗಿತ್ತು—ರಹಸ್ಯ, ಭಯ, ಭಕ್ತಿ!

ನಂಜುಂಡನಿಗೆ ಈಜುವದೆಂದರೆ ತುಂಬ ಇಷ್ಟ. ಕೆರೆಗೆ ಆಗಾಗ ಹೋಗುತ್ತಿದ್ದ ಗೆಳೆಯರೊಂದಿಗೆ.

"ಹಾವು ಹಾವು"

ಕೂಗಿಕೊಂಡರು ಹುಡುಗರು. ನಂಜುಂಡ ಒಂದೇ ವೇಗದಲ್ಲಿ ಓಡಿದ, ಅದರ ಕತ್ತನ್ನೇ ಹಿಡಿದ. ಕಪಿಮುಷ್ಠಿ. ಸರಿಯಾಗಿ ಹಿಡಿಯದಿದ್ದರೆ ಬೆಕ್ಕು ಕಚ್ಚುತ್ತದೆ, ಇಲಿಯ ಮರಿಯೂ ಕಚ್ಚುತ್ತದೆ. ನಂಜುಂಡನಿಗೆ ಅದೆಲ್ಲ ಏನು ಗೊತ್ತು? 'ಬಾವಾಜಿ ಹೇಳಿದುದೇ ಸರಿ, ನನ್ನ ಕೈಯಲ್ಲಿ ಗರುಡರೇಖೆ ಇದೆ' ಎಂದಂದುಕೊಂಡ. ಭದ್ರವಾಗಿ ನಂಬಿದ. ಇನ್ನು ಅದೇ ಕೆಲಸ, ಹಾವುಗಳನ್ನು ಹುಡುಕುತ್ತ ಹೊರಟ. ಕೆರೆ ಹಾವು, ಮಣ್ಣು ಮುಕ್ಕುವ ಹಾವು, ಬಳಿಗಡಕ

ಹಾವು, ಗಿಲಿಕೆ ಹಾವು, ಬುಡುಬುಡಿಕೆಯ ಹಾವು, ಗೋಧಿ ಬಣ್ಣದ ಹಾವು, ನಾಗರಹಾವು—ಎಲ್ಲವನ್ನೂ ಹಿಡಿದ, ಎಲ್ಲವನ್ನೂ ಬಿಟ್ಟು ಬಂದ. ಚೇಳಿನ ನಂಜುಂಡ ಹಾವಿನ ನಂಜುಂಡ ಆಗಲು ಹೆಚ್ಚು ಸಮಯ ಬೇಕಾಗಲಿಲ್ಲ. ಹಾವಿನ ನಂಜುಂಡ ಅಂದರೆ ಊರಲ್ಲೆಲ್ಲರಿಗೂ ಗೊತ್ತು.

ಹಾವು ಬಹುಕೆಟ್ಟ ಪ್ರಾಣಿ ಅಂದ ಮನುಷ್ಯ. ಯಾಕೆ? ಅದನ್ನು ನಾವು ಕೊಲ್ಲಲು ಹೋದರೆ ಅದು ತಪ್ಪಿಸಿಕೊಳ್ಳುತ್ತದೆ. ಹಾವು ಕೆಟ್ಟ ಪ್ರಾಣಿ ಅಲ್ಲವೇ?

ತನ್ನ ಪ್ರಾಣಭಯವಿಲ್ಲದಿದ್ದರೆ ಹಾವು ಯಾರನ್ನೂ ಕಚ್ಚುವುದಿಲ್ಲ. ಆಹಾರಕ್ಕಲ್ಲದಿದ್ದರೆ ಯಾವ ಪ್ರಾಣಿಯನ್ನೂ ಅದು ಕೊಲ್ಲದು. ಎಲ್ಲ ಹಾವುಗಳೂ ವಿಷಜಂತುಗಳಲ್ಲ. ಹಾವು ಕಚ್ಚಿ ಸತ್ತವರಲ್ಲಿ ಅದರ ವಿಷದಿಂದ ಸತ್ತವರು ಸ್ವಲ್ಪ—ತಮ್ಮ ಭಯದಿಂದ ಸತ್ತವರೇ ಹೆಚ್ಚು. ಇದೆಲ್ಲ ಯಾರಿಗೆ ಬೇಕು? ಹಾವು ಬಂತು, ಕೊಲ್ಲು. ಹೆಚ್ಚು ಕೆಟ್ಟುದು ಹಾವೋ, ಮನುಷ್ಯನೋ ಎಂಬುದು ಇನ್ನೂ ನಿಶ್ಚಿತವಾಗಬೇಕಾಗಿದೆ.

ರಘೂನ ಮನೆಯಲ್ಲಿ ಹಿಡಿದುದು ಎಷ್ಟನೇ ಹಾವು? ಯಾರಿಗೆ ಗೊತ್ತು, ಅವನಿಗೇ ಲೆಕ್ಕವಿಲ್ಲ. ನೂರೋ, ಸಾವಿರಾನೋ ಆಗಿರಬೇಕು ಎಂದಂದೂ ನಕ್ಕುಬಿಟ್ಟ ನಂಜುಂಡ, ಅದಾರೋ ಕೇಳಿದಾಗ.

ಮತ್ತಾರದೋ ಮನೆಯಲ್ಲಿ ಒಂದು ನಡು ರಾತ್ರಿ ನಾಗರಹಾವು ಕಾಣಿಸಿಕೊಂಡಿತು. ನಂಜುಂಡನಿಗೆ ಬುಲಾವ್ ಬಂದಿತು. ಓಡುತ್ತ ಹೋಗಿ ಹಿಡಿದು ತಂದ. ಮನೆಯವರು ಬಹು ದೊಡ್ಡ ಶ್ರೀಮಂತರು. ಐವತ್ತು ರೂಪಾಯಿ ಜೇಬಿಗೆ ತುರುಕಿದರು, ನಂಜುಂಡ ಬೇಡ ಬೇಡ ಅಂದರೂ.

"ಇರ್ಲಿ ತೊಗೋ. ಲಕ್ಷ್ಮೀನ್ನ ಬ್ಯಾಡ ಅನ್ನಬಾರದು."

ಕಾರ್ಗತ್ತಲು, ಮುಗಿಲಿಗೆ ತೂಬು ಬಿದ್ದಂತೆ ಧಾರಾಕಾರ ಮಳೆ. ಮಿಂಚು ಗುಡುಗು. ಆ ರಾತ್ರಿ ನಂಜುಂಡ ಕಾಡಿಗೆ ಹೋಗಿ ಹಾವನ್ನು ಬಿಟ್ಟು ಬರುವುದು ಹೇಗೆ? ಆ ಐವತ್ತನ್ನೂ ಅದೇ ಹುತ್ತಿನಲ್ಲಿ ಹಾಕಿ ಬರುವುದೆಂದು ನಿರ್ಧರಿಸಿದ. ನಾಳೆ ಬೆಳಿಗ್ಗೆ ಅದೇ ಮೊದಲ ಕೆಲಸ. ಎಂದಂದುಕೊಳ್ಳುತ್ತಾ ತನ್ನ ರೂಮು ಸೇರಿದ. ಹಾವು? ಈ ರಾತ್ರಿ ಇಲ್ಲೇ ಇರಲಿ ಎಂದು ತನಗೆ ತಾನೇ ಹೇಳಿ

ಕೊಳ್ಳುತ್ತ ಒಂದು ಮಂಣಿನ ಮಡಿಕೆಯನ್ನು ಹೊರತೆಗೆದ—ಮೊದಲು ಅದರಲ್ಲಿ ಆ ಐವತ್ತನ್ನೂ ಹಾಕಿದ, ಮೇಲೆ ಹಾವು ಬಿಸುಟೆದ. ಹಳೆಯ ಬಟ್ಟೆಯಿಂದ ಅದರ ಬಾಯನ್ನು ಬಿಗಿದು ಹಾಯಾಗಿ ಮಲಗಿದ.

ನಂಜುಂಡ ಕಣ್ಣು ತೆರೆದಾಗ ಗಂಟೆ ಒಂಭತ್ತು. ಹೊಟ್ಟೆ ಕರಕರ ಅಂದಿತು. ಹೋಟೇಲಿಗೆ ಹೋಗಲು ಕಾಸಿಲ್ಲ. ಅವನು ಸಾಲ ಕೊಡುವುದಿಲ್ಲ ಎಂದು ನಿನ್ನೆಯೇ ಹೇಳಿದ್ದ. ಹೊಟ್ಟೆ ಕೆಳಕ್ಕಿವೆ ನಿಜ, ಆದರೂ ಮೇಲಿರುವ ತಲೆಯನ್ನು ಓಡಿಸಿತು. ಕಿವಿಯಲ್ಲಿ ಊದಿತು.

"ಮಡಿಕೆಯಲ್ಲಿದೆಯಲ್ಲಾ ತೆಕ್ಕೊ; ನಾಳೆ ಹಾಕಿದರಾಯಿತು"

ಮಡಿಕೆಯಲ್ಲಿದ್ದ ಹತ್ತನ್ನು ಮೆತ್ತಗೆ ತೆಗೆದು ನಾಗಪ್ಪಾ, ಇದು ನಿನ್ನ ಸಾಲ ಎಂದಂದ.

ನಂಜುಂಡನಿಗೇನು ಕೆಲಸ? ಎಲ್ಲಿಂದ ಅವನ ಸಂಪಾದನೆ? ರೈಲ್ವೆ ಸ್ಟೇಷನಲ್ಲಿ ಅವನೊಬ್ಬ ಲೈಸನ್ಸ್ ಇಲ್ಲದ ಕೂಲಿ. ಬಂದರೆ ಬಂದೇ ಬಂತು, ಇಲ್ಲವಾದರೆ ಇಲ್ಲವೇ ಇಲ್ಲ.

ಹತ್ತು ರೂಪಾಯಿ ಕರ್ಚಾಗಲು ಎಷ್ಟು ಕಾಲ ಬೇಕು? ಇನ್ನೊಂದು ಹತ್ತನ್ನು ನಾಗಪ್ಪನಿಂದ ಸಾಲವಾಗಿ ಪಡೆದ—ಗುರು ಹೇಳಿದುದು ಕೇಳಿಸಿತು. ಆದರೆ ಅದೇಕೋ ಧ್ವನಿ ಮಾತ್ರ ಕ್ಷೀಣವಾಗಿತ್ತು. ಅಂತಃಪ್ರಜ್ಞೆ ಹೇಳುವುದೇ ಹೀಗೆ. ಒಮ್ಮೆ ಗದರಿಸಿದರೆ ಆಯಿತು, ಸತ್ತೇ ಹೋಗುತ್ತದೆ ಅಂಜುವವರನ್ನು ಅಂಜಿಸುತ್ತದೆ, ಅಂಜಿಸುವವರಿಗೆ ಅಂಜುತ್ತದೆ.

ಐವತ್ತೂ ಮಾಯವಾಯಿತು. ಮತ್ತೆ ಹಸಿವು ರಾತ್ರಿ ಮಲಗಿದಾಗ. ನಂಜುಂಡ ಯೋಚಿಸಿದ. ಹೌದು, ಇದೇ ಸರಿ ಎಂದಿತು ಅವನ ಹಸಿವು. ಮಡಿಕೆಯ ಮುಂದು ಕುಳಿತು ಕಟ್ಟಿದ್ದ ಬಟ್ಟೆ ಬಿಚ್ಚಿದ, ನಾಗಪ್ಪ ಮಲಗಿದ್ದ. ಕತ್ತು ಹಿಡಿದ, ಬಾಯಿ ತೆರೆಯಿತು. ಇಕ್ಕಳದಿಂದ ಹಿಡಿದು ಅದರ ವಿಷದ ಹಲ್ಲನ್ನು ಕೀಳಿದ.

"ಬಾ ನಾಗಪ್ಪಾ! ಇಂದಿನಿಂದ ನೀನೇ ನಂಗೆ ಅನ್ನದಾತ."

ಎಂದಂದು ತಬ್ಬಿಕೊಂಡು ಮುದ್ದಾಡಿದ. ನಾಗಪ್ಪನಿಗಾಗಿ ಬಟ್ಟೆಯ

ಚೀಲವೊಂದು ನಿರ್ಮಾಣವಾಯಿತು. ಅದರಲ್ಲಿ ನಾಗಪ್ಪ, ನಾಗಪ್ಪನ ನಿದ್ರೆ ನಂಜುಂಡನ ಹಾಸಿಗೆಯಲ್ಲಿಯೇ.

"ಹಾವು ! ಹಾವು ! ನಂಜುಂಡನ್ನ ಕರೀರಿ"

ಇದೇ ಧ್ವನಿ. ಇಂದು ಅವರ ಮನೆ, ನಾಳೆ ಇನ್ನೊಬ್ಬರ ಬಂಗಲೆ. ಮತ್ತೊಂದು ದಿನ ಮಕ್ಕಳ ಸ್ಕೂಲು. ಮಗದೊಂದು ದಿನ ಆಸ್ಪತ್ರೆ.

"ಐವತ್ತು ರೂಪಾಯಿ ಕೊಡಬೇಕು"

ನಂಜುಂಡನ ಕರಾರು. ಸಂಪಾದನೆ ಚೆನ್ನಾಗಿಯೇ ಇದೆ—ಆ ಹಾಳು ರೈಲ್ವೆ ಸ್ಟೇಷನ್ ಇನ್ಯಾಕೆ ? ಹಣ ಏನು ಮಾಡುತ್ತದೆ ? ಅದೂ ವಿದ್ಯೆಯಂತೆಯೇ ! ಒಳ್ಳೆಯವನನ್ನು ಹೆಚ್ಚು ಒಳ್ಳೆಯವನನ್ನಾಗಿ ಮಾಡುತ್ತದೆ. ಕೆಟ್ಟವನನ್ನು ಹೆಚ್ಚು ಕೆಟ್ಟವನನ್ನಾಗಿ ಮಾಡುತ್ತದೆ. ನಂಜುಂಡನಿಗೆ ಪೋಲಿ ಪೋಕರಿಗಳ ಸ್ನೇಹವಾಯಿತು. ಕುಡಿತದ ರುಚಿ ತಗುಲಿತು. ಹಣ ? ನಾಗಪ್ಪನ ಸಂಪಾದನೆ !

ಚೆನ್ನಾಗಿ ಕುಡಿದು ಬಂದು ಮಲಗಿದ ನಂಜುಂಡ ಒಂದು ರಾತ್ರಿ.

ಸೂಳೆ ಮಗನೆ !

ಗುರು ಬಂದ, ಕಂಡೊಡನೆ ಹಾವಾದ. ನಂಜುಂಡ ಕೈ ಚಾಚಿ ಕತ್ತು ಹಿಡಿದ.

ಗುರು !

ಹೌದು, ನಾನೇ ಸೂಳೆಮಗ !, ನನ್ನ ತಾಯಿ ಹಾವು. ಅದನ್ನ ಸೂಳೆಗಾರಿಕೆಗೆ ಮಾಡಿ ನನ್ನ ಹೊಟ್ಟೆ ತುಂಬಿಕೊಳ್ಳುತ್ತಿದ್ದೇನೆ. ಅನ್ನು, ಇನ್ನೊ ನೂರು ಬಾರಿ ಅನ್ನು, ನಾನು ಸೂಳೇ ಮಗ !

"ನಂಜುಂಡಾ ! ನಂಜುಂಡಾ !"

ಮೇಲಿಂದ ಮೇಲೆ ಅದಾರೋ ಕೂಗಿದಾಗಲೆ ನಂಜುಂಡನಿಗೆ ಎಚ್ಚರ ಹಾಳು ಕನಸು ಎಂದಂದುಕೊಂಡ. ಯಾವುದು ಕನಸು ? ಸೂಳೇಮಗನೇ ಎಂಬುದೇ ? ನಂಜುಂಡಾ ಎಂದು ಕೂಗುತ್ತಿರುವುದೇ ? ಬಾಗಿಲು ಬಡಿದರು. ಎದ್ದು ಬಾಗಿಲು ತೆಗೆದ.

"ರಾಯರ ಮನಾಗೆ ಹಾವು ಬಂದದೆ, ಬಾ!"

"ಐವತ್ತು?"

ಕೈಗೆ ಬಿತ್ತು ಹಣ, ತೂಗಾಡುತ್ತ ಹೊರಟ.

"ಎಲ್ಲಿಗೆ ಹೋಗ್ತೀ ನಂಜುಂಡಾ?"

ಎಂದು ಕೂಗಿತು ಚೀಲದಲ್ಲಿದ್ದ ನಾಗಪ್ಪ. ಅವನಿಗೆ ಕೇಳಿಸಿದರಲ್ಲವೆ?

ನೇರವಾಗಿ ಒಳ ಹೊಕ್ಕ. ಸೆರೆಯ ವಿಶೆ ಇನ್ನೂ ಹೋಗಿಲ್ಲ. ಹಾವನ್ನು ಹಿಡಿದ. ಆಯ್ಯೋ ಸತ್ತೆ ಎಂದು ಚೀರಿ ನೆಲಕ್ಕೆ ಬಿದ್ದ.

ನಂಜುಂಡನ ದುರಾಶೆ ಎಂಬ ಹಾವನ್ನು ಕಂಡು ಚೀಲದಲ್ಲಿದ್ದ ನಾಗಪ್ಪ ಮುಸಿ ಮುಸಿ ನಕ್ಕ.

ಯಾವುದು ಕೆಟ್ಟ ಹಾವು!

# ಕಾವಿ ಬಟ್ಟೆಯಲ್ಲಿ ಕಳ್ಳರು

ಕಾವಿ ಆದರೇನು, ಖಾದಿ ಆದರೇನು, ಖಾಕಿ ಆದರೇನು ? ಬಟ್ಟೆಯ ಒಳಗಡೆ ಎಲ್ಲರೂ ಬೆತ್ತಲೇ ! ಇದು ತಿಂಮನ ವಾದ. ಇದು ಸರಿಯೇ ? ಸರಿಯೋ ಅಲ್ಲವೋ ಎಂಬುದನ್ನು ತಿಳಿಯಲು ಏನು ಸ್ವಾಮೀ ಕಷ್ಟ ? ಯಾರೂ ಪರೀಕ್ಷೆ ಮಾಡಿಕೊಳ್ಳಬಹುದು ಎಂದನ್ನುತ್ತಾನೆ ಧೂರ್ತ ತಿಂಮ.

"ನೀವು ತಪ್ಪು ಮಾಡಿಬಿಟ್ಟಿರಿ"

ಎಂದು ಅಪಸ್ವರ ಎತ್ತಿದ ತಿಂಮ ಒಂದು ಬಾರಿ.

"ಯಾಕೋ, ಏನಾಯಿತು ?"

ಎಂದು ಕೇಳಿದೆ.

"ಛಾನ್ಸ್ ಕಳೆದುಕೊಂಡಿರಿ, ನೀವೂ ದೊಡ್ಡವರಾಗಬಹುದಿತ್ತು"

ಮತ್ತೆ ಗೊಣಗಿದ.

"ಏಕೋ, ನಾನೀಗ ದೊಡ್ಡವನಾಗಿಲ್ಲವೇ ? ಅರವತ್ತೊಂದು ವರ್ಷ ಬಾಳಿದ್ದೇನಲ್ಲೋ ?"

"ಅದೇನು ಸ್ವಾಮೀ, ಅರವತ್ತೊಂದು ಅರವತ್ತೊಂದು ಅಂತ ಬಹಳ ಜಂಬ ದಿಂದ ಹೇಳುತ್ತೀರಿ ! ಇದರಲ್ಲಿ ನಿಮ್ಮ ಸಾಧನೆ ಏನಿದೆ ? ಅರವತ್ತಕ್ಕೆ ಯಾರಾರು ಸಾಯುವುದಿಲ್ಲವೋ ಅವರೆಲ್ಲರಿಗೂ ಅರವತ್ತೊಂದು ಆಗಿಯೇ ಆಗುತ್ತದೆ. ವಯಸ್ಸಿನಿಂದ ದೊಡ್ಡವರಾದರೆ ದೊಡ್ಡವರಾದಂತಾಯಿತೇ ?"

"ಮತ್ತೆ ಹೇಗಯ್ಯಾ ದೊಡ್ಡವನಾಗಬೇಕು. ನಾನೂ ಐವತ್ತೈದು ಪುಸ್ತಕಗಳನ್ನು...."

ನನ್ನ ಮಾತನ್ನು ಅಷ್ಟಕ್ಕೇ ತುಂಡರಿಸಿದ ತಿಂಮ, ತನ್ನ ಮಾತನ್ನು ಮುಂದುವರಿಸಿದ.

"ಆ ವಿಷಯ ಅಲ್ಲಿಗೇ ಬಿಡಿ. ಪುಸ್ತಕ ಬರೆದರೆ ಜಗತ್ತಿನ ಹಣೆಬರಹ ಬರೆದಂತಾಯಿತೇ ?"

ತಿಂಮನ ಈ ಒಗಟಿನಂತಹ ಮಾತು ನನಗರ್ಥವಾಗಲಿಲ್ಲ. ಕೇಳಿಯೇ ಬಿಟ್ಟೆ.

"ಇಲ್ಲಿ ಕೇಳೋ ತಿಂಮಾ ! ಈ ಬರೀ ಚಿಕ್ಕುಬಂದಿ ಕಟ್ಟುವ ಮಾತು ಬೇಡ. ಹೇಳುವುದಾದರೆ ನೇರವಾಗಿ ಹೇಳಿಬಿಡು, ಇಲ್ಲವಾದರೆ ನಡೆ. ನಾನೇನು ಮಾಡಬೇಕಿತ್ತು ಎಂದು ನೀನಂಬೋದು ? ಒಂದೇ ಮಾತಿನಲ್ಲಿ ಹೇಳು."

"ಕಾವಿ ಹಾಕಬೇಕಿತ್ತು"

ತಿಂಮನದು ಕಂಚಿನ ಕಂಠ, ಗಂಟೆ ಹೊಡೆದಂತೆ ಹೇಳಿದ.

"ಕಾವಿ !"

ಬೆಚ್ಚಿ ಬಿದ್ದು ನುಡಿದೆ. ಬಟ್ಟೆಗೆ ಗತಿ ಇಲ್ಲದಿದ್ದರೆ ಬೆತ್ತಲೆ ಆದರೂ ಇದ್ದೇನು, ಕಾವಿ ಮಾತ್ರ ಹಾಕಲಾರೆ ಎಂಬುದು ನನ್ನ ಅಭಿಮತ. ಇದರರ್ಥ ಕಾವಿ ಹಾಕುವುದೇ ತಪ್ಪು ಅಂದಲ್ಲ, ನಾನು ಕಾವಿ ಹಾಕುವುದು ಶುದ್ಧ ತಪ್ಪು. ಪರವಂಚನೆ ಮತ್ತು ಅದಕ್ಕೂ ಹೆಚ್ಚಾಗಿ ಆತ್ಮವಂಚನೆ ಎರಡನ್ನೂ ಒಂದೇ ಬಾರಿಗೆ ಸಾಧಿಸಿದಂತಾಗುತ್ತದೆ. ತಿಂಮನನ್ನು ಕೇಳಿದೆ.

"ಅಲ್ಲಯ್ಯಾ ತಿಂಮಾ ! ಸುಮಾರು ಒಂದು ಕಾಲು ಶತಮಾನಕ್ಕೂ ಹೆಚ್ಚು ಕಾಲದಿಂದ ನನ್ನೊಡನೆ ಇದ್ದೀಯಾ ? ನನ್ನ ಬಾಳಿನ ರೀತಿ, ನೀತಿ, ನನ್ನ ನಡೆ, ನುಡಿ, ನನ್ನ ಜೀವನಕ್ರಮ, ಅಕ್ರಮ, ನನ್ನ ಅಭ್ಯಾಸ, ದುರಭ್ಯಾಸಗಳು ಯಾವೂ ನಿನಗೆ ಗೊತ್ತಿಲ್ಲದೇ ಇಲ್ಲ. ನಿನಗೆ ಗೊತ್ತಿಲ್ಲದ ಗುಟ್ಟು ಯಾವುದಿದೆ ? ಇಷ್ಟೆಲ್ಲ ತಿಳಿದೂ ನನ್ನನ್ನು ಕಾವಿ ಹಾಕು ಅನ್ನುತ್ತೀಯಾ ?"

# ಕಾವಿ ಬಟ್ಟೆಯಲ್ಲಿ ಕಳ್ಳರು

ಕಾವಿ ಆದರೇನು, ಖಾದಿ ಆದರೇನು, ಖಾಕಿ ಆದರೇನು ? ಬಟ್ಟೆಯ ಒಳಗಡೆ ಎಲ್ಲರೂ ಬೆತ್ತಲೇ ! ಇದು ತಿಂಮನ ವಾದ. ಇದು ಸರಿಯೇ ? ಸರಿಯೋ ಅಲ್ಲವೋ ಎಂಬುದನ್ನು ತಿಳಿಯಲು ಏನು ಸ್ವಾಮೀ ಕಷ್ಟ ? ಯಾರೂ ಪರೀಕ್ಷೆ ಮಾಡಿಕೊಳ್ಳಬಹುದು ಎಂದನ್ನುತ್ತಾನೆ ಧೂರ್ತ ತಿಂಮ.

"ನೀವು ತಪ್ಪು ಮಾಡಿಬಿಟ್ಟಿರಿ"

ಎಂದು ಅಪಸ್ವರ ಎತ್ತಿದ ತಿಂಮ ಒಂದು ಬಾರಿ.

"ಯಾಕೋ, ಏನಾಯಿತು ?"

ಎಂದು ಕೇಳಿದೆ.

"ಛಾನ್ಸ್ ಕಳೆದುಕೊಂಡಿರಿ, ನೀವೂ ದೊಡ್ಡವರಾಗಬಹುದಿತ್ತು"

ಮತ್ತೆ ಗೊಣಗಿದ.

"ಏಕೋ, ನಾನೀಗ ದೊಡ್ಡವನಾಗಿಲ್ಲವೇ ? ಅರವತ್ತೊಂದು ವರ್ಷ ಬಾಳಿದ್ದೇನಲ್ಲೋ ?"

"ಅದೇನು ಸ್ವಾಮೀ, ಅರವತ್ತೊಂದು ಅರವತ್ತೊಂದು ಅಂತ ಬಹಳ ಜಂಬ ದಿಂದ ಹೇಳುತ್ತೀರಿ ! ಇದರಲ್ಲಿ ನಿಮ್ಮ ಸಾಧನೆ ಏನಿದೆ ? ಅರವತ್ತಕ್ಕೆ ಯಾರಾರು ಸಾಯುವುದಿಲ್ಲವೋ ಅವರೆಲ್ಲರಿಗೂ ಅರವತ್ತೊಂದು ಆಗಿಯೇ ಆಗುತ್ತದೆ. ವಯಸ್ಸಿನಿಂದ ದೊಡ್ಡವರಾದರೆ ದೊಡ್ಡವರಾದಂತಾಯಿತೇ ?"

"ಮತ್ತೆ ಹೇಗಯ್ಯಾ ದೊಡ್ಡವನಾಗಬೇಕು. ನಾನೂ ಐವತ್ತೈದು ಪುಸ್ತಕಗಳನ್ನು...."

ನನ್ನ ಮಾತನ್ನು ಅಷ್ಟಕ್ಕೇ ತುಂಡರಿಸಿದ ತಿಂಮ, ತನ್ನ ಮಾತನ್ನು ಮುಂದುವರಿಸಿದ.

"ಆ ವಿಷಯ ಅಲ್ಲಿಗೇ ಬಿಡಿ. ಪುಸ್ತಕ ಬರೆದರೆ ಜಗತ್ತಿನ ಹಣೆಬರಹ ಬರೆದಂತಾಯಿತೇ ?"

ತಿಂಮನ ಈ ಒಗಟಿನಂತಹ ಮಾತು ನನಗರ್ಥವಾಗಲಿಲ್ಲ. ಕೇಳಿಯೇ ಬಿಟ್ಟೆ.

"ಇಲ್ಲಿ ಕೇಳೋ ತಿಂಮಾ ! ಈ ಬರೀ ಚಿಕ್ಕುಬಂದಿ ಕಟ್ಟುವ ಮಾತು ಬೇಡ. ಹೇಳುವುದಾದರೆ ನೇರವಾಗಿ ಹೇಳಿಬಿಡು, ಇಲ್ಲವಾದರೆ ನಡೆ. ನಾನೇನು ಮಾಡಬೇಕಿತ್ತು ಎಂದು ನೀನಂಬೋದು ? ಒಂದೇ ಮಾತಿನಲ್ಲಿ ಹೇಳು."

"ಕಾವಿ ಹಾಕಬೇಕಿತ್ತು"

ತಿಂಮನದು ಕಂಚಿನ ಕಂಠ, ಗಂಟೆ ಹೊಡೆದಂತೆ ಹೇಳಿದ.

"ಕಾವಿ !"

ಬೆಚ್ಚಿ ಬಿದ್ದು ನುಡಿದೆ. ಬಟ್ಟೆಗೆ ಗತಿ ಇಲ್ಲದಿದ್ದರೆ ಬೆತ್ತಲೆ ಆದರೂ ಇದ್ದೇನು, ಕಾವಿ ಮಾತ್ರ ಹಾಕಲಾರೆ ಎಂಬುದು ನನ್ನ ಅಭಿಮತ. ಇದರರ್ಥ ಕಾವಿ ಹಾಕುವುದೇ ತಪ್ಪು ಅಂದಲ್ಲ, ನಾನು ಕಾವಿ ಹಾಕುವುದು ಶುದ್ಧ ತಪ್ಪು. ಪರವಂಚನೆ ಮತ್ತು ಅದಕ್ಕೂ ಹೆಚ್ಚಾಗಿ ಆತ್ಮವಂಚನೆ ಎರಡನ್ನೂ ಒಂದೇ ಬಾರಿಗೆ ಸಾಧಿಸಿದಂತಾಗುತ್ತದೆ. ತಿಂಮನನ್ನು ಕೇಳಿದೆ.

"ಅಲ್ಲಯ್ಯಾ ತಿಂಮಾ ! ಸುಮಾರು ಒಂದು ಕಾಲು ಶತಮಾನಕ್ಕೂ ಹೆಚ್ಚು ಕಾಲದಿಂದ ನನ್ನೊಡನೆ ಇದ್ದೀಯಾ ? ನನ್ನ ಬಾಳಿನ ರೀತಿ, ನೀತಿ, ನನ್ನ ನಡೆ, ನುಡಿ, ನನ್ನ ಜೀವನಕ್ರಮ, ಅಕ್ರಮ, ನನ್ನ ಅಭ್ಯಾಸ, ದುರಭ್ಯಾಸಗಳು ಯಾವೂ ನಿನಗೆ ಗೊತ್ತಿಲ್ಲದೇ ಇಲ್ಲ. ನಿನಗೆ ಗೊತ್ತಿಲ್ಲದ ಗುಟ್ಟು ಯಾವುದಿದೆ ? ಇಷ್ಟೆಲ್ಲ ತಿಳಿದೂ ನನ್ನನ್ನು ಕಾವಿ ಹಾಕು ಅನ್ನುತ್ತೀಯಾ ?"

"ಏನು ಸ್ವಾಮೀ, ನಿಮ್ಮನ್ನು ಬುದ್ಧಿವಂತರೆಂದು ತಿಳಿದಿದ್ದೆ. ಇಷ್ಟೇನೇ ನಿಮ್ಮ ಬುದ್ಧಿ ?"

ಎಂದು ಕೇಳಿ ಮುಖ ನೋಡಿದ ತಿಂಮ. ಉತ್ತರ ಕೊಡುವುದಕ್ಕಿಂತ ಮೌನವೆ ಲೇಸೆಂದು ತೆಪ್ಪಗೆ ಕುಳಿತೆ. ಪ್ರವಹಿಸಿತು ತಿಂಮನ ವಾಣಿ.

"ನೀವು ಮಾಡುತ್ತಿರುವುದನ್ನು, ಮಾಡಿದುದನ್ನೂ, ಇನ್ನು ಮೇಲೆ ಕೆಲವು ಮಾಡಬಾರದುದನ್ನು ಮಾಡಿಯೂ ಶಾವಿ ಹಾಕಿ ಬಹು ದೊಡ್ಡವರೆನಿಸಿಕೊಂಡ ವರು ಇಲ್ಲವೇ ? ಅವರನ್ನಾದರೂ ನೋಡಿ ಬುದ್ಧಿ ಕಲಿಯಿರಿ."

"ಯಾರಪ್ಪಾ ಆ ಮಹಾನುಭಾವರು ?"

ತಿಂಮ ಇದ್ದಕ್ಕಿದ್ದಂತೆ ಹಾವು ತುಳಿದವನಂತಾದ.

"ಚೆನ್ನಾಗಿ ಕೇಳಿದಿರಿ. ಅವರ ಹೆಸರುಗಳನ್ನು ಹೇಳಿ ನಾನು ಪೇಚಿಗೆ ಸಿಕ್ಕಿ ಕೊಳ್ಳಲೇ ? ಅವರೆಲ್ಲ ಬಹಳ ದೊಡ್ಡವರು ಸ್ವಾಮೀ !"

ದೊಡ್ಡವರು ? ನನಗಿದುವರೆಗೂ ಸರಿಯಾಗಿ ಅರ್ಥವಾಗದೆ ಇರುವ ಕೆಲವೇ ಶಬ್ದಗಳಲ್ಲಿ ಇದೂ ಒಂದು. ದೊಡ್ಡವರೆಂದರೆ ಯಾರು ? ವಯಸ್ಸಿನಿಂದ ದೊಡ್ಡವರನ್ನು ದೊಡ್ಡವರು ಅನ್ನೋಣವೇ ? ಅಂತಹ ಕೆಲವರಿಗಂತೂ ಚಿಕ್ಕ ಮಕ್ಕಳಿಗಿಂತಲೂ ಹಣದಾಶೆ ಹೆಚ್ಚು. ವಿದ್ಯೆ ? ಹೂಂ, ವಿದ್ಯೆ ಇದೆ, ಡಿಗ್ರಿಯೇ ವಿದ್ಯೆ ಎಂದೊಪ್ಪಿಕೊಳ್ಳುವುದಾದರೆ. ಪಾಂಡಿತ್ಯ ? ಟನ್‌ಗಟ್ಟಲೆ ಇದೆ. ನಿದ್ರೆ ಯಲ್ಲಿಯೇ ಪಾಠ ಹೇಳಬಲ್ಲರು. ಅಂತಹ ಶಕ್ತಿ ಇದೆ. ಇಂತಹರು ಕಾಸು ಅಂದರೆ ಬಾಯಿ ಬಿಡುತ್ತಾರೆ. ಪಾಪ ! ಇವರನ್ನು ದೊಡ್ಡವರು ಅನ್ನುವುದೇ ?

ಹಾಗಾದರೆ ಯಾರು ದೊಡ್ಡವರು ? ದೊಡ್ಡ ದೇಹ ಉಳ್ಳವರೇ ದೊಡ್ಡ ವರು ಅನ್ನಲೆ ? ನನ್ನನ್ನು ಮೂರ್ಖ ಅನ್ನುತ್ತಾರೆ, ವಿಶ್ವೇಶ್ವರಯ್ಯ, ಗಾಂಧೀಜಿ ಮುಂತಾದವರು. ಕೇವಲ ದೇಹದ ತೂಕದಿಂದ ದೊಡ್ಡವರಾದವರು ಇರುವಾಗ ಭೂಮಿಗೆ ಭಾರ, ಸತ್ತಾಗ ಹೊರುವವರಿಗೆ ಭಾರ. ಮತ್ತೆ ಅದೇ ಪ್ರಶ್ನೆ— ದೊಡ್ಡವರೆಂದರೆ ಯಾರು ? ಥಟ್ಟನೆ ಉತ್ತರಿಸಿದ ತಿಂಮ.

"ಇದೂ ಗೊತ್ತಿಲ್ಲವೇ ನನ್ನೊಡೆಯಾ ? ಯಾರ ಬಳಿ ಮಂತ್ರಿಗಳು, ಗೃವರ್ನರರು ಹೋಗುತ್ತಾರೋ ಅಂಥವರೇ ದೊಡ್ಡವರು"

ಇದು ತಿಂಮನ 'ದೊಡ್ಡವರು' ಎಂಬ ಪದದ ಲಕ್ಷಣ ನಿರೂಪಣೆ.

ಕೊಂಚ ಕೊಂಚ ಏಕೆ—ಹೆಚ್ಚೇ ತಲೆ ಕೆರೆದೆ.

"ಅಲ್ಲವೋ ತಿಂಮಾ! ಗವರ್ನರರು, ಮಂತ್ರಿಗಳು ದೊಡ್ಡವರೇನೋ ?"

ಮಿಕಿಮಿಕಿ ಮುಖ ನೋಡಿದ. ನನ್ನ ಪ್ರಶ್ನೆ ಅವನಿಗರ್ಥವಾಗಲಿಲ್ಲವೇನೋ ಎಂದು ತಿಳಿದು ವಿಷಯವನ್ನು ವಿವರಿಸಿದೆ.

"ನೋಡಯ್ಯಾ! ನಿನ್ನೆ ಮಂತ್ರಿಗಳೊಬ್ಬರು ದೊಡ್ಡವರಾಗಿದ್ದರು–ನನಗಲ್ಲ, ಜನದ ಕಣ್ಣಲ್ಲಿ. ಬೆಳಗ್ಗೆ ಅದಾವಳೋ ಮಹರಾಯತಿ ಬಂದಳು, ಬಂಣವೇ ಬದಲಾಗಿಹೋಯಿತು. ಆ ದೊಡ್ಡವರು ದಡ್ಡವರಾಗಿಬಿಟ್ಟರು. ಒಂದು ರಾಜ್ಯದಲ್ಲಿ ಚಿನ್ನವನ್ನು 'ಸ್ಮಗಲ್' ಮಾಡುತ್ತಾರೆಂಬ ಆರೋಪ ಒಬ್ಬ ರಾಜಕಾರಿಣಿಗಳ ಮೇಲೆ ಇಂದಿರಾ ಅವರಿಗೆ ಹೋಯಿತು. ಹೀಗೋ, ಇವನಿಗೆ ಪ್ರಾಯಶ್ಚಿತ್ತ ಮಾಡುತ್ತೇನೆಂದು ನಿರ್ಧರಿಸಿ ಅವರನ್ನು ಇನ್ನೊಂದು ರಾಜ್ಯಕ್ಕೆ ಗವರ್ನರ್ ಆಗಿ ಎಸೆದರು. ವಿಷಯ ಹೀಗಿರುವಾಗ ಇವರನ್ನೆಲ್ಲ ದೊಡ್ಡವರು ಎಂದು ಹೇಗಯ್ಯಾ ಅನ್ನುವುದು ?"

ತಿಂಮನ ನಾಲಗೆ ಸತ್ತಿತು. ಹಿರಿಹಿರಿ ಹಿಗ್ಗಿದೆ. ಹಿಗ್ಗಿ ನಾನು ದಡ್ಡನಾದೆ.

"ಧರ್ಮಸೂಕ್ಷ್ಮ ಅಂದರೆ ಬೇರಾವುದು ಎಂದು ತಿಳಿದಿರಿ ಸ್ವಾಮೀ! ಬಂಣ ಬಯಲಾಗುವವರೆಗೂ ಮಂತ್ರಿಗಳು ದೊಡ್ಡವರು, ಊರು ಬಿಟ್ಟೊಡನೆ ಗೋಲ್ಡ್ ಸ್ಮಗ್ಲರ್ ದೊಡ್ಡವರು. ಮಾಜಿ ಮಂತ್ರಿಗಳ ವಿಷಯ ಬಿಡಿ, ಮಾಜಿ ವ್ಯಭಿಚಾರಿಣಿ ಇಂದು ಹಾಲಿ ಪತಿವ್ರತೆ ಆಗುವುದಿಲ್ಲವೇ ? ಹಾಲಿ ಸ್ವಾಮಿ ಭಾವೀ ವ್ಯಭಿಚಾರಿ ಆಗಬಾರದೆ ? ಅದನ್ನೆಲ್ಲ ನಾವು ಗಮನಿಸಬಾರದು ನನ್ನೊಡೆಯಾ! ಇವತ್ತವರು—ನಾಳೆ ಹಾಳಾಗಿ ಹೋಗಲಿ, ಆ ಮಾತು ಬೇರೆ—ಅಧಿಕಾರದಲ್ಲಿದ್ದಾರೆಯೇ ? ಅವರೇ ಇಂದು ಚಲಾವಣೆಯಲ್ಲಿರುವ ನಾಣ್ಯ. ಅಂಥವರೆಲ್ಲ ಯಾರ ಬಳಿ ಬರುತ್ತಾರೋ ಅವರೇ ದೊಡ್ಡವರು"

"ಮುಗಿಯಿತೇನಯ್ಯಾ, ನಿನ್ನ ಬೋಧಾಮೃತ ?"

"ಮುಗಿಯಲಿಲ್ಲ ಸ್ವಾಮೀ ! ಆರಂಭವಾಯಿತು"

ಎಂದನ್ನುತ್ತಾನೆ ತಿಂಮ. ಈ ಶ್ರೀಕಾರದಿಂದ ಸುರು ಮಾಡಿದ ತಿಂಮ.

"ಮೊದಲು ನೀವು ಬಟ್ಟೆ ಬದಲಿಸಿ, ಅದರಿಂದ ಜಗತ್ತಿನ ದೃಷ್ಟಿಯೂ ಬದಲಿಸುತ್ತದೆ."

"ಅದು ಹೇಗೋ ತಿಂಮಾ ?"

"ಅದು ಹಾಗೇ ಸ್ವಾಮೀ ! ದುಂಡು ಜಗತ್ತಿಗೆ ರುಂಡ ಇಲ್ಲ. ನನ್ನ ಮಾತು ಕೇಳಿ ಕಾವಿ ಹಾಕಿ ನೋಡಿ. ಹೆಜ್ಜೆಹೆಜ್ಜೆಗೂ ನಮಸ್ಕಾರ ಮಾಡುವವರು ಬರುತ್ತಾರೆ. ಭಾಷಣದ ಕಸುಬು ನಿಮಗೇನೂ ಹೊಸತಲ್ಲ. ಆದರೆ ಹೀಗೆಲ್ಲ ನಿಷ್ಠೂರವಾಗಿ ವ್ಯಂಗ್ಯವಾಗಿ ಆಡಬೇಡಿ. ಬುಧ್ಧ, ಗಿಧ್ಧ ಮುಂತಾದ ಮಹಾಪ್ರಾಣಗಳನ್ನು ಧಾರಾಳವಾಗಿ ಬಳಸಿರಿ, ಭಾಷಣದುದ್ದಕ್ಕೂ ಪತಿತರ ಉದ್ಧಾರ...."

"ಇದು ದೇವರಿಂದಲೂ ಆಗಿಲ್ಲವೋ ತಿಂಮಾ ! ಆತನ ದಶಾವತಾರಗಳು ದಶಾಪರಾಧಗಳು ಆಗಿಹೋದುವು"

ಹತಾಶನಾಗಿ ನಾನು ಹೇಳಿದೆ.

"ಇದೇ ನಿಮ್ಮ ದಡ್ಡತನ, ದೇವರಿಂದ ಆಗಲಾರದುದನ್ನೇ ಮಾಡಲು ಇಂದು ಸ್ವಾಮಿಗಳು ಹುಟ್ಟಿದ್ದಾರೆ. ಅಮೆರಿಕದಿಂದ ಹಾಲಿನ ಡಬ್ಬಿ: ಗೋಧಿ ಹಿಟ್ಟು, ಸೋಯಾಬೀನ್ಸ್ ಎಂಣೆ ಇವನ್ನೆಲ್ಲ ಬಿಟ್ಟಿಯಾಗಿ ತರಿಸಲು ನಿಮ್ಮ ದೇವರಿಂದ ಆಯಿತೇ ? ನೋಡಿ, ನಮ್ಮ ಸ್ವಾಮಿಗಳು ತರಿಸುತ್ತಾರೆ. ತರಿಸಿ ಏನು ಮಾಡುತ್ತಾರೆ ?"

"ಅವರೇ ತಿನ್ನುತ್ತಾರೆಯೆ ?"

"ಛೆ ! ಹಾಗನ್ನಬಾರದು ಸ್ವಾಮೀ ! ಅವರು ಸ್ವಾಮಿಗಳು. ಅವರೆಂದೂ ಅವನ್ನು ತಿನ್ನುವುದಿಲ್ಲ, ಕಂಣಿಂದಲೂ ನೋಡುವುದಿಲ್ಲ. ಶಿಷ್ಯರಿದ್ದಾರೆ, ಅವರಿಂದ ಅವನ್ನೆಲ್ಲ ಮಾರಿಕೊಳ್ಳುತ್ತಾರೆ. ಒಂದು ಸೋಯಾಬೀನ್ಸ್ ಎಂಣೆಯ ಡಬ್ಬಾದ ಬೆಲೆ ಏನು ನಿಮಗೆ ಗೊತ್ತೇ ?"

ಇಲ್ಲ ಎಂದು ತಲೆಯಾಡಿಸಿದೆ.

"ಒಂದು ಭಾನುವಾರ ಗವರ್ನರನ್ನು ಕರೆಯುತ್ತಾರೆ, ಅದಕ್ಕೂ ಹೆಚ್ಚು ಮುಖ್ಯವಾಗಿ ಪತ್ರಿಕೆಯವರನ್ನೂ, ಅದಕ್ಕೂ ಹೆಚ್ಚು ಹೆಚ್ಚು ಮುಖ್ಯಮುಖ್ಯವಾಗಿ ಫೋಟೊ ತೆಗೆಯುವವರನ್ನು ಕರೆಸಿಕೊಳ್ಳುತ್ತಾರೆ. ಸರಕಾರೀ ಆಸ್ಪತ್ರೆಯಲ್ಲಿಯ ಬಡರೋಗಿಗಳಿಗೆ ಒಂದೊಂದು ಒಣಗಿದ ಮೋಸಂಬಿ ಹಂಚುತ್ತಾರೆ. ಮರುದಿನ ಬೆಳಿಗ್ಗೆ ಪತ್ರಿಕೆಯ ತುಂಬ ಇದೇ ಸುದ್ದಿ."

"ಹೌದೇನೋ ತಿಂಮಾ ?"

"ಇದು ನಿಮ್ಮಿಂದಾಗದಿದ್ದರೆ ಇನ್ನೊಂದನ್ನಾದರೂ ಮಾಡಿ...."

"ಅದಕ್ಕೂ ಕಾವಿಯೇ ಬೇಕೇನೋ ?"

"ಎಂತಹ ದಡ್ಡ ಪ್ರಶ್ನೆ ಕೇಳುತ್ತೀರಲ್ಲಾ ಸ್ವಾಮೀ ? ಮೊದಲು ಕಾವಿ, ಆಮೇಲೆ ಮೋಸ.

"ಈ ತತ್ವವನ್ನು ಸದಾ ನೆನಪಿನಲ್ಲಿಡಿ

"ಸ್ಕೂಲು, ಕಾಲೇಜು, ಬಿಟ್ಟಿ ಹಾಸ್ಟಲು ಎಲ್ಲಾ ಮಾಡಿರಿ. ಹಣ ಭಕ್ತಾದಿಗಳದು, ಕೀರ್ತಿ ನಿಮ್ಮದು. ವಿದ್ಯಾದಾನ ಮಾಡಿರಿ, ಅನ್ನದಾನ ಮಾಡಿರಿ –ಗುಟ್ಟಾಗಿ ಗರ್ಭಾದಾನವನ್ನೂ...."

"ಥೂ ! ಅವಿವೇಕೀ"

"ಕ್ಷಮಿಸಿ ಸ್ವಾಮೀ, ಮರೆತಿದ್ದೆ. ವಯಸ್ಸಾಯಿತು ಪಾಪ ! ಈಗೊಬ್ಬ ಸ್ವಾಮಿಗಳು ಮಾಡುತ್ತಿದ್ದಾರೆ, ಕನ್ಯಾಮಣಿಗಳಿಗೆ ಗರ್ಭಾದಾನ...."

"ಕಾವಿ ಧರಿಸಿ ಈ ಕೆಲಸ ಮಾಡುತ್ತಾರೆಯೇ ?"

"ಛೆ ಛೆ ! ಆಗ ಹೇಗೂ ತೆಗೆಯುತ್ತಾರೆ. ಮುಂದು ಕೇಳಿ. ಅವರು ಯಾರಿಗೂ ಅನ್ಯಾಯ ಮಾಡುವುದಿಲ್ಲ, ಆ ಕನ್ಯಾಮಣಿ ಗರ್ಭಧರಿಸುತ್ತಾಳೆ ಅನ್ನಿ. ಸ್ವಾಮಿಗಳು ಭ್ರೂಣಹತ್ಯೆಗೆ ವಿರೋಧ. ತಮ್ಮ ಕಾಲೇಜಿನ ಒಬ್ಬ ಬಡ ಮಾಸ್ತರನನ್ನು ಕರೆದು ಇವಳನ್ನು ಮದುವೆಯಾಗೋ ಅನ್ನುತ್ತಾರೆ...."

"ಅವನು ಒಪ್ಪದಿದ್ದರೆ ?"

"ತಿನ್ನುವ ಅನ್ನಕ್ಕೆ ಮಂಣು. ಕೆಲಸ ಹೋಯಿತು, ತಲೆಯಮೇಲೆ ಸಾಲದ ಹೊರೆ"

"ಥೂ ! ಈ ಮಹಾಕಾರ್ಯಕ್ಕೆ ನನ್ನನ್ನು ಕಾವಿ ಹಾಕು ಅಂದೆಯಾ ?"

"ಬಿಡಿ, ನಿಮ್ಮಿಷ್ಟ. ಹೀಗೆಯೆ ಜುಬ್ಬಾ, ಪಾಯಿಜಾಮ ಹಾಕಿಕೊಂಡು ಓಡಾಡಿ. ಜನ ನಿಮ್ಮನ್ನು ಫೋಲಿ ಎನ್ನುತ್ತಾರೆ."

ಕಾವಿಯನು ಕಂಡೊಡನೆ ಕೈ ಮುಗಿಯಬೇಡಯ್ಯಾ ।
ಅವನೂ ನಿನ್ನಂತೆ, ಆ ಸೋಗು ಮೋಸಕ್ಕೆ ॥
ಹಾವಿಗೂ ಕಾವಿಗೂ ನೋಡಲು ಚೆಲುವಿದೆ ।
ನವೆ ಇದೆ ಕಚ್ಚಲಿಕೆ, ಎಚ್ಚರಿರೊ ತಿಂಮ ॥

**ಇತಿ ಕಾವೀ ಕಥಾಕಾಲಕ್ಷೇಪ ಸಂಪೂರ್ಣಂ.**

# ತೋರಿಕೆಗೆ ಮರುಳಾಗದಿರೆಲೊ ತಿಂಮ

"ಬಾಡಿಗೆಗೆ ಮನೆ ಇದೆಯೇ ?"

"ನಿಮಗೆ ಮದುವೆ ಆಗಿದೇನ್ರೀ ?"

"ನಾನು ನಿಮ್ಮ ಮಗಳನ್ನು ಕೇಳಲಿಲ್ಲ, ಮನೆ ಕೇಳಿದೆ."

ಇದು ಒಂದೂರಲ್ಲಿ ನನಗಾದ ಮೊಟ್ಟ ಮೊದಲು ಅನುಭವ. ವರ್ಗ ವಾದೊಡನೆ ಆಫೀಸಿನ ಅವಸರಕ್ಕೆ ತುರಾತುರಿಯಿಂದ ಓಡಿ ನೌಕರಿಗೆ ಸೇರಿದು ದಾಯ್ತು. ವಾಸಕ್ಕೊಂದು ಮನೆ ಹುಡುಕಿಕೊಂಡು ಹೆಂಡತಿ ಮಕ್ಕಳನ್ನು ಕರೆಯಿಸಿಕೊಂಡು ಬಾಳುವೆ ಮಾಡುವುದು ಬೇಡವೆ ? ಹೋಟೆಲ ಊಟ ಅದೆಷ್ಟು ದಿನ ? ಅಲ್ಲದೆ ಹೆಂಡಂತಿಯೂ ಬೇಕಾಗುತ್ತಾಳೆ—ಆಗಾಗ.

ಭಾನುವಾರ ಬಂದರಾಯಿತು ಬೆಳಗಿನಿಂದ ರಾತ್ರಿಯವರೆಗೂ ಮನೆ ಹುಡುಕುವುದೊಂದೇ ಕೆಲಸ. ಮನೆಯವಳು ಕೇಳುವ ಮುಂಚೆಯೇ ಸಿಕ್ಕಾಳು, ಆದರೆ ಮನೆ ? ಛತ್ರ ಸಿಕ್ಕಾಗ ಮದುವೆ, ಮನೆ ಸಿಕ್ಕಾಗ ಸಂಸಾರ. ಬಳ್ಳಾರಿ ಯಲ್ಲಿರುವ ಹೆಂಡತಿಗೆ ಈ ಪರಿಸ್ಥಿತಿ ಗೊತ್ತಾಗುವುದು ಹೇಗೆ ? 'ನಮ್ಮ ನೆನಪೇ ನಿಮಗಿಲ್ಲ, ನಮ್ಮನ್ನು ಮರೆತೇ ಬಿಟ್ಟಿರಿ. ದೊಡ್ಡೂರು ಸೇರಿ ಹಾಯಾಗಿದ್ದೀರಿ' ಮುಂತಾಗಿ ಚುಚ್ಚುವ ಪತ್ರಗಳು ಕುಂ. ಸೌ. ವತಿಯಿಂದ.

ಮನೆ ಇದ್ದರೆ ಇದೆ ಅನ್ನಬೇಕು, ಇಲ್ಲದಿದ್ದರೆ ಇಲ್ಲ ಅನ್ನಲಿ. ನನ್ನ

ಮದುವೆಯ ವಿಷಯ ಇವರಿಗೇಕೆ? ಒಬ್ಬ ಮನೆ ಮಾಲೀಕರು, ವೃದ್ಧರು, ಕೊಂಚ ಸಮಾಧಾನ ತಡಕೊಂಡು ವಿವರಿಸಿದರು.

"ಹಾಗಲ್ಲ ಸ್ವಾಮಿ! ನಮ್ಮ ಮನೆಯಲ್ಲಿ ಇನ್ನೂ ಮದುವೆಯಾಗದ ಹೆಣ್ಣು ಮಕ್ಕಳಿವೆ. ಹೀಗಿರುವಾಗ ಯಾರಿಗಂದರವರಿಗೆ ಮನೆ ಕೊಡುವುದಕ್ಕಾಗುತ್ತೆಯೆ? ನೀವು ಸಂಸಾರಿಗಳಾಗಿದ್ದರೆ ಪರವಾ ಇಲ್ಲ"

ಏನು ಪರವಾ ಇಲ್ಲ? ಸಂಸಾರಿಗಳಿಂದ ಅವರ ಮಗಳಿಗೆ ಅಪಾಯವಿಲ್ಲ, ಬ್ರಹ್ಮಚಾರಿಗಳಿಂದ—ಕ್ಷಮಿಸಿ, ಅವಿವಾಹಿತರಿಂದ ಅಪಾಯವಿದೆಯೆಂದೇ? ಇದೊಂದು ಬಹು ದೊಡ್ಡ ಸಾಮಾನ್ಯ ದಡ್ಡ ಅಭಿಪ್ರಾಯ. ಐದು ಮಕ್ಕಳು, ಹೆಂಡತಿ, ವೃದ್ಧ ತಾಯಿ ಇರುವವರೊಬ್ಬರು ಒಂದು ಹೆಣ್ಣಿನ ತೊಡಕಿನಲ್ಲಿ ಸಿಕ್ಕು ತಮ್ಮ ಸಚಿವ ಪದವಿಗೆ ರಾಜೀನಾಮೆ ಕೊಟ್ಟುದನ್ನು ನಾವಿಷ್ಟು ಬೇಗ ಮರೆಯುತ್ತೇವೆಯೇ? ಅವಿವಾಹಿತರೆಲ್ಲ ಪೋಲಿಗಳು, ವಿವಾಹಿತರೆಲ್ಲ ಸಚ್ಚಾರಿತ್ರ್ಯಯುಳ್ಳ ಏಕಪತ್ನೀವ್ರತದ ಶ್ರೀರಾಮರೇ? ಮದುವೆಯಾದವನು ಮಾಂಸದ ರುಚಿಯನ್ನು ಕಂಡ ಹುಲಿ. ಅವಿವಾಹಿತನಿಂದ ಏನಾದರೂ ಅಂತಹ ಅಚಾತುರ್ಯವಾದಲ್ಲಿ ಮಗಳನ್ನು ಅವನ ತಲೆಗೆ ಕಟ್ಟಿ ಕೈ ತೊಳೆದುಕೊಳ್ಳಬಹುದು. ವಿವಾಹಿತ ಶಸಿಯನ್ನು ಏನು ಮಾಡಲು ಸಾಧ್ಯ? ಅವನಿಗೆ ಕಾಯಿದೆಯ ಬೆಂಬಲವೂ ಇದೆ. ಮದುವೆಯಾದವರಲ್ಲಿ ಖೆಡ್ಡಾ ಮಾಡುವವರೂ ಇದ್ದಾರೆ—ಪಳಗಿದ ಆನೆಯ ಸಹಾಯದಿಂದ ಕಾಡಾನೆಗಳನ್ನು ಹಿಡಿಯುವುದು ಕೆಲವರ ಕಸಬು, ಆ ಪಳಗಿದ ಆನೆಗಳೂ ಅಂತಹವೇ ಆದಾಗ. ಇದನ್ನೆಲ್ಲ ಮನೆ ಮಾಲೀಕರಿಗೆ ಹೇಗೆ ಹೇಳುವುದು?

"ನಿಮ್ಮ ಜಾತಿ ಯಾವುದು?"

ಜಾತ್ಯತೀತ ರಾಷ್ಟ್ರದಲ್ಲಿ ಇದು ಹೆಜ್ಜೆಹೆಜ್ಜೆಗೂ ಉತ್ತರಿಸಲೇಬೇಕಾದ ಪ್ರಶ್ನೆ. ಮನೆ ಕಟ್ಟಿಸಲು ಸಾಲಕ್ಕೆ ಅರ್ಜಿ ಬರೆದರೂ ಆ ಅರ್ಜಿಯಲ್ಲೂ ಇದನ್ನು ನಮೂದಿಸಬೇಕು. ಕಕ್ಕಸು ಕಟ್ಟಲು ಕಾರ್ಪೊರೇಶನ್‌ಗೆ ಪ್ಲಾನ್ ಕಳಿಸಿದರೂ ನಮ್ಮ ಜಾತಿ ತಿಳಿಸಬೇಕು. ಹುಚ್ಚಾಸ್ಪತ್ರೆಯಲ್ಲಿ ಸೇರುವುದಕ್ಕೂ ಜಾತಿಯನ್ನು ಹೇಳಬೇಕು. ಈ ಪ್ರಶ್ನೆಗೂ ನನ್ನದು ಅದೇ ಉತ್ತರ.

"ನಾನು ನಿಮ್ಮ ಮಗಳನ್ನು ಕೇಳಲಿಲ್ಲ, ಮನೆ ಕೇಳಿದೆ."



ನಾನು ನಿಮ್ಮ ಮಗಳನ್ನು ಕೇಳಲಿಲ್ಲ....ಮನೆ ಕೇಳಿದೆ....

"ಹಾಗಲ್ಲಾ ಸ್ವಾಮಿ ! ನೀವೇನು ಮಾಂಸಾಹಾರಿ ಜಾತಿಯವರೇ ಅಥವಾ ಸಸ್ಯಾಹಾರಿ ಜಾತಿಯವರೇ ?"

"ಜಾತಿಯಿಂದ ಸಸ್ಯಾಹಾರಿ, ನೀತಿಯಿಂದ ಮಾಂಸಾಹಾರಿ. ಹಗಲು ಮನೆಯಲ್ಲಿ ಸೊಪ್ಪು ತಿನ್ನುತ್ತೇನೆ. ರಾತ್ರಿ ಹೋಟೆಲಲ್ಲಿ ಕೋಳಿ ತಿನ್ನುತ್ತೇನೆ."

ಆಹಾರ ಅವರವರ ಅಭಿರುಚಿ, ಅಭ್ಯಾಸ ಮತ್ತು ವೃದ್ಧಾಪ್ಯದಲ್ಲಿ ಜೀರ್ಣ ಶಕ್ತಿಗಳನ್ನು ಅನುಸರಿಸಿರುತ್ತದೆ. ನನ್ನ ಹೊಟ್ಟೆಯಲ್ಲಿ ಏನಿದೆ ಎಂಬುದು ಇವರ ತಲೆಯನ್ನೇಕೆ ಬಾಧಿಸಬೇಕು ?

"ನೀವು ಮನೆಯಲ್ಲಂತೂ ಮಾಂಸವನ್ನು ಬೇಯಿಸುವುದಿಲ್ಲ ತಾನೇ ?"

"ಅಂತಹ ಹೆಂಡತಿ ನನಗೆ ಸಿಕ್ಕಲಿಲ್ಲ"

"ಹೊರಗೆ ನೀವೇನಾದರೂ ಮಾಡಿಕೊಳ್ಳಿ"

ಸಮಾಧಾನದ ಉಸಿರುಬಿಟ್ಟರು ಮನೆ ಮಾಲಿಕರು.

ಮೊಟ್ಟೆ ತಿನ್ನುವ ವಿಷಯ ಅವರು ಕೇಳಲಿಲ್ಲ, ನಾನೂ ಹೇಳಲಿಲ್ಲ. ಸಸ್ಯಾಹಾರಿ ಮೊಟ್ಟೆಗಳೂ ಇವೆಯಲ್ಲಾ ?

"ನಿಮ್ಮ ಮನೆಯಲ್ಲಿ ಎಷ್ಟು ಜನ ಇದ್ದೀರಿ ?"

"ಯಾಕೆ ? ಅವರಿಗೆಲ್ಲ ನೀವೇನೂ ಅನ್ನ ಹಾಕಾಗಬೇಕಿಲ್ಲ. ನನ್ನ ಮನೆಯಲ್ಲೇ ಊಟ ಮಾಡುತ್ತಾರೆ."

"ಹಾಗಲ್ಲ, ಮಕ್ಕಳು ಹೆಚ್ಚಿದ್ದರೆ ಗಲಾಟೆ ಜಾಸ್ತಿ. ಅದಕ್ಕೇ...."

ಮಕ್ಕಳನ್ನು ಯಾರಿಗಾದರೂ ಕೊಟ್ಟು ಬಿಡೋಣವೆ ? ಸರಕಾರ ಇದಕ್ಕೇನಾದರೂ ಏರ್ಪಾಟನ್ನು ಮಾಡಿದೆಯೇ ? ಹೊಸ ಹೊಸ ಉಪಾಯಗಳಿಂದ ಮುಂದು ಹುಟ್ಟಬಹುದಾದ ಮಕ್ಕಳನ್ನು ಕೊಂಚ ತಡಮಾಡಿ ಬನ್ನಿ ಅನ್ನಬಹುದು, ಅಥವಾ ಬಾರದಂತೆಯೇ ಮಾಡಬಹುದು. ಆದರೆ ಈಗಾಗಲೇ ಹುಟ್ಟಿ ಬೆಳೆಯುತ್ತಿರುವ ಮಕ್ಕಳನ್ನು ?

"ನನ್ನ ಮನೆಯಲ್ಲಾಗುವ ಮಕ್ಕಳ ಗಲಾಟೆ ನಿಮಗೆ ಕೇಳಿಸುವುದಿಲ್ಲ— ನನ್ನ ಗಲಾಟೆಯ ಮುಂದು"

ಈ ಉತ್ತರ ಅವರ ಬಾಯಿಯನ್ನು ಕಟ್ಟಿತು. ಅಲ್ಲಿಗೆ ಅವರ ಪ್ರಶ್ನಾವಳಿ

ಮುಗಿಯಿತು ಎಂದಂದುಕೊಂಡೆ. ಥಟ್ಟನೆ ಬಂತು ಇನ್ನೊಂದು—ಅವರ ಶ್ರೀಮತಿ ಯವರಿಂದ.

"ನಿಮಗೆಷ್ಟು ಸಂಬಳ?"

ಅಲ್ಲಿಗೆ ನನಗೆ ಖಾತ್ರಿಯಾಗಿ ಹೋಯಿತು. ಇವರು ತಮ್ಮ ಮಗಳನ್ನೇ ನನಗೆ ಕಟ್ಟಲು ಹವಣಿಸುತ್ತಿದ್ದಾರೆಂಬುದು. ಸಂಬಳ ಇಷ್ಟು ಎಂದು ಹೇಳಿದರೆ, ನೀವು ನಿಮ್ಮ ಹೆಂಡತಿಗೆಷ್ಟು ಕೊಡುತ್ತೀರಿ, ನಿಮ್ಮ ಸ್ವಂತ ಖರ್ಚಿಗೆಷ್ಟು ಇಟ್ಟು ಕೊಳ್ಳುತ್ತೀರಿ? ನೀವು ನಿಮ್ಮಪ್ಪ (ಸತ್ತಿದರೆ?) ಅವರ ವಾರ್ಷಿಕ ಶ್ರಾದ್ಧವನ್ನು ಮಾಡುತ್ತೀರಾ? ಅದಕ್ಕೆಷ್ಟು ಖರ್ಚು? ನಿಮ್ಮ ಇನ್ಸುರೆನ್ಸ್ ಪ್ರೀಮಿಯಂ ವರ್ಷಕ್ಕೆಷ್ಟು?

ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಅವರನ್ನು ಸಮಾಧಾನಗೊಳಿಸಿ ಮನೆ ಪಡೆಯುವ ಸಮಯಕ್ಕೆ ಹೆಂಡತಿ ಮುದುಕಿಯೇ ಆಗಿಹೋಗುತ್ತಾಳೆ, ಆಗ ಮನೆಮಾಡಿಯೂ ಪ್ರಯೋಜನವಿಲ್ಲ ಎಂಬುದರ್ಥವಾಯಿತು.

ಮೂರು ತಿಂಗಳ ಬಾಡಿಗೆ ಮುಂಗಡವಾಗಿ ಕೊಟ್ಟಾಗ ಗಂಡ, ಹೆಂಡತಿ ಸಂತಸದಿಂದ ನಕ್ಕರು. ಈಗ ಪ್ರಶ್ನೆಗಳನ್ನು ಕೇಳುವ ಸರದಿ ನನ್ನ ದಾಯಿತು.

"ನಿಮಗೆ ಸಿಲೂನ್ ರೇಡಿಯೋ ಕೇಳುವ ಅಭ್ಯಾಸವಿದೆಯೇ?"

"ರಾತ್ರಿ ಹನ್ನೊಂದರನಂತರ ಟೇಪ್ ರೆಕಾರ್ಡರ್ ಹಾಕುತ್ತೀರಾ?"

"ನಿಮ್ಮ ಮದುವೆಗಾದ ಮಗಳು ಸಂಗೀತ ಅಭ್ಯಾಸ ಮಾಡುತ್ತಿ ದ್ದಾಳೆಯೆ?"

ರಕ್ತದ ಒತ್ತಡ ಹೆಚ್ಚಿರುವ ರೋಗಿಗಳಿಗೆ ಈ ಪ್ರಶ್ನೆಗಳಿಗೆ ಬರುವ ಉತ್ತರ ಬಹು ಮುಖ್ಯ. ರೇಡಿಯೋ, ಟ್ರಾನ್ಸಿಸ್ಟರ್, ಟೇಪ್ ರೆಕಾರ್ಡರ್ ಇಲ್ಲವೆಂದಾಗ ಸಂತೋಷವಾಯಿತು, ಇಂತಹ ಮನೆಗಳು ದೇಶದಲ್ಲೆಲ್ಲ ಹೆಚ್ಚಲಿ ಎಂದು ಬಾಯಲ್ಲಿಯೇ ಹರಿಸಿದೆ.

"ಸಂಗೀತವೆಂದರೆ ಸಂಗೀತವೇ ಅಲ್ಲ, ನನ್ನ ಒಂಭತ್ತನೇ ಮಗಳು ದೇವರ ನಾಮವನ್ನು ಮಾತ್ರ ದಿನಾಲೂ ಹಾಡುತ್ತಾಳೆ"

ಎಂದಾ ಮನೆಯ ತಾಯಿ ಬಹು ಹೆಮ್ಮೆಯಿಂದ ಹೇಳಿಕೊಂಡಳು. ನನ್ನ

ಹೆಂಡತಿ ಬಂದನಂತರ ಆ ಮಗಳ ದೇವರ ನಾಮದ ಪರಿಚಯವೂ ನಮಗಾ ಯಿತು.

ದಮ್ ಮಾರೋ ದಮ್ ।
ಮಿಟಗಯೆ ಹಮ್ ॥

ಎಂದು ಆರಂಭಿಸಿದಾಗ ನಾನು ಮತ್ತು ನನ್ನ ಹೆಂಡತಿ ಮೂಳಿಗೆಯನ್ನು ನೋಡಿದೆವು.

ಆ ಹುಡಿಗೆಯ ತಾಯಿ ನಮಗೆ ಸಮಾಧಾನ ಹೇಳಿದಳು.

"ಕೊನೆಯಲ್ಲಿ ಹರೇ ರಾಮ್, ಹರೇ ಕೃಷ್ಣ್ ಎಂದು ಬರುತ್ತದೆ."

ಸರಿ, ಹರೇ ರಾಮ ಹರೇ ಕೃಷ್ಣ ಕೊನೆಯಲ್ಲೇ ಬರಬೇಕಾದವರು ಎಂದಂದುಕೊಂಡು ಸುಮ್ಮನಾದೆ.

* * * *

ಇದೆಲ್ಲವೂ ಬಹು ಹಳೆಯ ಮಾತು, ಈಗಿನ ನನ್ನ ಪರಿಸ್ಥಿತಿ ತುಂಬಾ ಬದಲಾಗಿದೆ. ರಿಟಾಯರ್ ಆದ ಮೇಲೆ ಮನೆ ಬಾಡಿಗೆ ಕೊಡುವುದಕ್ಕಾದೀತೆ ಎಂಬ ಸಂಶಯವೂ ಬಂದಿತು ತಲೆಯಲ್ಲೊಮ್ಮೆ. ಪಿಂಚಿನಿಯಾಗುವುದು ಎಂದರೆ ಕೆಲವರಿಗಂತೂ ಒಂದು ಕಚೇರಿಯಿಂದ ಇನ್ನೊಂದು ಕಚೇರಿಗೆ ವರ್ಗ ಮಾತ್ರ. ಅಲ್ಲಿ ದುಡಿಯುವ ಬಸವ ಇಲ್ಲಿ ದುಡಿಯಬೇಕು. ಇದನ್ನು ಪಿಂಚಿನಿ ಅನ್ನುವುದೇ ? ಯಾವಜ್ಜನ್ಮವೂ ಹಣದ ಹಿಂದೆ ಓಡುವುದೇ ? ಈ ಮನೋಭಾವದ ಹಣ ಪಿಶಾಚಿ ಮುದುಕ ಮಹಾ ತ್ಯಾಗಿಗಳನ್ನು ಕಂಡಾಗ, ಅವರ ತ್ಯಾಗಮಯ ಭಾಷಣ ವನ್ನು ಕೇಳಿದಾಗ ಅಯ್ಯೋ ಪಾಪ ! ಅನಿಸುತ್ತದೆ. ಇವರಿಗೆ ಜೀವನವೇ ಒಂದು ವ್ಯಾಪಾರ. ಕಾಸು ತೆಗಿ – ಭಾಷಣ ಕೇಳು !

ಹೀಗಾಗಬಾರದೆಂದೇ ಮುಂದಾಲೋಚನೆ ಮಾಡಿ ಒಂದು ಪುಟ್ಟ ಮನೆ ಯನ್ನು ಕಟ್ಟಿಕೊಂಡೆ. ಆನಂತರ ಗೆಳೆಯರ ಸಲಹೆ ಮೇಲೊಂದು ಮಹಡಿ. ಮಾಡಿದ ಪಾಪವನ್ನು ತೀರಿಸಬೇಕೋ ಇಲ್ಲವೋ ಅರಿಯೆ, ಮಾಡಿದ ಸಾಲ ವನ್ನಂತೂ ದುಡಿದೇ ತೀರಿಸಬೇಕು. ಮನೆಯ ಒಂದು ಭಾಗದಲ್ಲಿ ನಾವಿದ್ದು ಕೊಂಡು ಇನ್ನೊಂದು ಭಾಗವನ್ನು ಯಾರಿಗಾದರೂ ಬಾಡಿಗೆಗೆ ಕೊಡುವುದೆಂದು ನಿರ್ಧರಿಸಿ ಆಯಿತು. ಯಾರಿಗೋ ಕೊಟ್ಟೂಬಿಟ್ಟೆ.

ಯಜಮಾನಿಯ ಪ್ರಶ್ನೆಗಳ ಹಾವಳಿ ಯಥಾರೀತಿ ಸುರುವಾಯಿತು.

"ಯಾರಿಗೆ ಕೊಟ್ಟಿರಿ ಮನೇನ ?"

"ಯಾರೋ ಒಬ್ಬರು, ಅವರ ಹೆಸರು ನೆನಪಿಲ್ಲ."

"ಜಾತಿ ಯಾವುದಂತೆ ?"

"ನಾನದನ್ನು ಕೇಳಲಿಲ್ಲ."

"ತುರುಕರಾದರೆ ಗತಿ ?"

"ಅವರ ಹಣಕ್ಕೆ ಗಡ್ಡ ಇರುವುದಿಲ್ಲ. ಯಾರಾದರೆ ನಿನಗೇನು ?"

"ನಮ್ಮ ಜನ ಆಗಿದ್ದರೆ ಚೆನ್ನಾಗಿತ್ತು."

"ಯಾರು ನಮ್ಮ ಜನ ? ನಮ್ಮ ಜನ ಅಲ್ಲ ಯಾರು ?"

ಈ ಪ್ರಶ್ನೆಗೆ ನನಗಿನ್ನೂ ಉತ್ತರ ದೊರೆತೇ ಇಲ್ಲ—ವಯಸ್ಸು ಅರವತ್ತೊಂದೂ ಆಯಿತು.

"ಯಾರೋ ಮಾಂಸ ತಿನ್ನುವವರಾದರೆ ?"

"ಅವರ ಹೊಟ್ಟೆಯಲ್ಲಿ ಹೋದುದು ನಿನ್ನನ್ನು ಬಾಧಿಸುವುದಿಲ್ಲ."

"ಹಾಗಂದರೇನು ? ನಾಳೆ ವಾಸನೆ ಇಡಿಗಿಸಿದರೆ ?"

"ಅದಕ್ಕೇನೂ ಉಪಾಯವಿಲ್ಲ. ನಿನ್ನ ಇಂಗಿನ ವಾಸನೆ ಅವರೂ ಅನುಭೋಗಿಸುತ್ತಾರೆ. ಸಹಬಾಳ್ವೆಯೇ ಮಾನವ ಧರ್ಮ."

ಒಂದೆರಡು ದಿನಗಳಲ್ಲಿಯೇ ಖಾಲಿಮನೆ ಭರ್ತಿಯಾಯಿತು–ಅದಾರೋ ಬಂದರು. ಮೂರನೆ ದಿನವೇ ಸುರುವಾಯಿತು ನನ್ನ ಹೆಂಡತಿಯ ದೂರು.

"ಆ ಮನೆಯ ಯಜಮಾನ ರಾತ್ರಿಯಾದೊಡನೆ ಕುಡಿಯುತ್ತಾನಂತೇರೀ!"

"ನನ್ನ, ನಿನ್ನ ಲಿವರ್‌ಗೆ ಅದರಿಂದ ಅಪಾಯವಿಲ್ಲ. ಅದು ಆತನ ಮತ್ತು ಆತನ ಲಿವರ್‌ಗೆ ಸಂಬಂಧಿಸಿದ ವಿಷಯ. ಇನ್ನೊಬ್ಬರ ಮನೆ ವಿಷಯ ನಾವು ಆಡುವುದು ಬೇಡ."

"ಮನೆತುಂಬಾ ಜನ, ಅದೆಷ್ಟು ಮಕ್ಕಳ್ರೀ ! ತಲೆನೋವು."

"ನೀನೂ ಹೆರೆಯಬೇಕಿತ್ತು ಅವರ ಮಕ್ಕಳನ್ನು ನೀನು ಜೋಪಾನ ಮಾಡುತ್ತಿಲ್ಲ."

ಮೊದಲೆರಡು ತಿಂಗಳು ಬಾಡಿಗೆ ಸಲೀಸಾಗಿ ಬಂತು. ಅನಂತರ 'ನಾಳೆ' ಗಳು ಸುರುವಾದವು. ಮೂರು ತಿಂಗಳ ಬಾಡಿಗೆ ಬಾಕಿ ಬಿತ್ತು.

"ಬಾಡಿಗೆ ಇನ್ನೂ ಎಂದು ಕೊಡ್ತಾರಂತೆ ?"

"ಏನೋ ಕಷ್ಟವಂತೆ, ಪಾಪ ! ಇನ್ನೊಂದು ತಿಂಗಳಲ್ಲಿ ಕೊಡುತ್ತಾನಂತೆ, ಕೊಡಲಿ ಪಾಪ ! ಅವರವರ ಕಷ್ಟಗಳು ಅವರವರವು."

ಇದನ್ನೆಲ್ಲ ಸಹಿಸಿಕೊಳ್ಳುವುದು ತಪ್ಪು ಅನಿಸಿತು ನನ್ನ ಹೆಂಡತಿಗೆ. ಇದೇ ಸರಿ ಎಂದು ನನಗನಿಸಿತು. ಸಾಗಿತು ಕೆಲವು ಕಾಲ.

ಇದ್ದಕ್ಕಿದ್ದಂತೆ ಒಂದು ಸಂಜೆ ಅವರ ಮನೆಯಲ್ಲಿ ಅದೇನೋ ಗಲಭೆ, ಹಾಡು. ವಿಷಯ ಏನೆಂದು ವಿಚಾರಿಸಿದೆ. ಯಾರೋ ಹೆಂಡತಿ ಸತ್ತವರು ಅವರ ಗುರುಗಳಾಗಿದ್ದರಂತೆ. ಅದರಿಂದ ಗುರೋಪದೇಶ-ಸಾಯಿಬಾಬಾ ಭಜನೆಯಂತೆ !

ಮನೆ ಖಾಲಿ ಮಾಡಿ ಎಂದು ನೋಟೀಸು ಕೊಟ್ಟು ಕುಳಿತೆ. ಇದರಿಂದ ನಿಮಗೇನು ತೊಂದರೆ ಎಂಬುದು ನನ್ನ ಹೆಂಡತಿಯ ಪ್ರಶ್ನೆ.

ಬೆಳೆಯುವ ಕಿರಿಯರಿಗೆ ಯೋಗ್ಯ ವಾತಾವರಣ ಕಲ್ಪಿಸಿಕೊಡುವುದು ನಮ್ಮ ಕರ್ತವ್ಯ. ಸೆರೆ ಕುಡಿಯಲು ಕಲಿತರೆ ಇಂದಲ್ಲ ನಾಳೆ ಬಿಟ್ಟಾರು, ಜೀರ್ಣ ಶಕ್ತಿ ಸಿಥಿಲವಾದರೆ ಮಾಂಸವೂ ಬೇಡಾದೀತು. ಆದರೆ ಈ ಬಾಬಾಗೀಳು ಬಡಿದು ಕೊಂಡರೆ ಮೋಕ್ಷವೇ ಇಲ್ಲ.

ನಾರಿ ತುಟಿಯನು ನೋಡು ಕಳಿತ ತೊಂಡೆ ಹಂಣು ।
ಭಾರಿ ಊಟವಳದು ಬಕಾಸುರನಕ್ಕ ॥
ಬರಿಗೈ ಸ್ವಾಮಿ ವಿಭೂತಿ ತರಿಸುವನು ।
ಪರಮಾತ್ಮನಿವನೆ ? ತೋರಿಕೆಗೆ ಮರುಳಾಗದಿರೆಲೊ ತಿಂಮ ॥

# ಪರತು ಕೊಟ್ಟರು

"ಬಡವರು, ಪಾಪ!"

ಈ ಮಾತು ಬಾಯಿಂದ ಬಂದಷ್ಟು ಸಹಜವಾಗಿ, ಸರಳವಾಗಿ ಬೇರಾವ ಮಾತೂ ಬರಲಾರದು ಜನದ ಬಾಯಿಂದ. ಬಡವನ ಬಗ್ಗೆ ಸಹಾನುಭೂತಿ ಬಡವನ ಬಾಯಲ್ಲಿ ಇದೆ, ಶ್ರೀಮಂತನ ಬಾಯಲ್ಲೂ ಇದೆ. ಬಾಯಲ್ಲಿ ಇದೆ ನಿಜ, ಆದರೆ ಹೃದಯದಲ್ಲಿ? ಇದನ್ನು ಪತ್ತೆಹಚ್ಚಲು ಒಬ್ಬ ಷರ್‌ಲಾಕ್ ಹೋಮ್ಸನೇ ಬೇಕು.

ಬಡವರಿಗೆ ದಾನ, ಧರ್ಮಗಳನ್ನು ಕೊಡುವ ಶ್ರೀಮಂತರ ಹೃದಯದಲ್ಲಿ ಬಡವರ ಬಗ್ಗೆ ಸಹಾನುಭೂತಿ ಇಲ್ಲವೇ? ಇದೆ ಎಂದು ಹೇಳಲು ಎರಡು ಎದೆ ಬೇಕು. ಕೆಲ ಶ್ರೀಮಂತರು ಕೇವಲ ಜಂಭಕ್ಕಾಗಿ ಕೊಟ್ಟರೆ, ಇನ್ನು ಕೆಲವರು ಬಡವರು ದಂಗೆ ಎದ್ದಾರು ಎಂದೂ ಕೊಡುತ್ತಾರೆ. ಇದನ್ನು ದಾನ ಅನ್ನುವ ಬದಲು ಲಂಚ ಅನ್ನುವುದು ಹೆಚ್ಚು ಸೂಕ್ತ. ವೈಯಕ್ತಿಕ ಪ್ರೀತಿಯೂ ಅನೇಕ ಬಾರಿ ಈ ದಾನ, ಧರ್ಮಗಳಿಗೆ ಕಾರಣವಾಗುವುದುಂಟು. "ಕೊಟ್ಟಿದ್ದು ತನಗೆ" ಎಂದು ಸರ್ವಜ್ಞ ಹೇಳಿದುದರಲ್ಲಿ ಕಠೋರ ಸತ್ಯವಿದೆ. ಕೊಡುವವನಲ್ಲಿ ಸ್ವಾರ್ಥ ತುಂಬಿ ತುಳುಕುತ್ತಿದೆ. ಇಹದಲ್ಲಿ ದಾನ, ಧರ್ಮ ಮಾಡಿ ಪುಣ್ಯವನ್ನು ಕಟ್ಟಿಕೊಂಡು ಸ್ವರ್ಗಕ್ಕೆ ಹೋಗಿ ಅಲ್ಲಿ ಸುಖಪಡಬೇಕೆಂಬುದು ಸಾಮಾನ್ಯ ಸ್ವಾರ್ಥವೇ?

ಇದಾಯಿತು. ಶ್ರೀಮಂತನಿಗೆ "ಪಾಪ!" ಅನ್ನುವವರು ಅದೆಷ್ಟು ಜನ?

ಶ್ರೀಮಂತನಿಗೆ ಕಷ್ಟಗಳೇ ಇಲ್ಲವೆ? ಬಡವನಿಗೆ ಒಂದೇ ಕಷ್ಟ–ಹಣವಿಲ್ಲ. ಹಣ ಉಳ್ಳವನಿಗೆ ಹದಿನಾರು ಕಷ್ಟಗಳು ಮೊದಲು ಅವನದನ್ನು ಗಳಿಸಲು ಕಷ್ಟ ಪಟ್ಟಿದ್ದಾನೆ, ಗಳಿಸಿದನಂತರ ಅದನ್ನು ಉಳಿಸಿಕೊಳ್ಳುವ ಚಿಂತೆ, ಉಳಿದರೆ ಬೆಳೆಸಿ ಕೊಳ್ಳುವ ಚಿಂತೆ ಶ್ರೀಮಂತನಿಗೆ ಬಂಧುಗಳು ಬಹಳ. ಆ ಬಂಧುಗಳೆಲ್ಲರೂ ತಪ್ಪದೆ ಬಡವರೇ! ಇವರೆಲ್ಲರಿಗೆ ಕೊಟ್ಟರೆ ಅವನು ದಿವಾಳಿ, ಕೊಡದಿದ್ದರೆ ಕೃಪಣ. ಸರಕಾರ ಅವನ ಪಾಲಿಗೆ ಬಹು ಸನಿಯದ ಬಡ ಬಂಧು. ಸಿಂಹ ಪಾಲು ಅದು ಕೇಳುತ್ತದೆ; ಕೊಡದಿದ್ದರೆ ಕೆನ್ನೆಗೆ ಹೊಡೆದು ಕಸಿದೊಯ್ಯುತ್ತದೆ. ಹಾಗಾದರೆ ಶ್ರೀಮಂತನಾದುದೇ ಅವನ ತಪ್ಪೇ? ಹೌದು, ಬಡವರ ದೇಶದಲ್ಲಿ ಶ್ರೀಮಂತನಾವುದು ಅತಿದೊಡ್ಡ ಪಾಪ! ವೇಶ್ಯೆಯರ ಬೀದಿಯಲ್ಲಿ ಗರತಿಯೇ ಗಯ್ಯಾಳಿ.

ತಿಂಮ ಈ ಪಾಪವನ್ನು ಮಾಡಿದ, ಪಾಪ! ಬಡತನದ ಬೇಗೆಯಲ್ಲಿ ಬೆಂದು, ಅದರ ಅನುಭವವನ್ನು ಸಂಪೂರ್ಣವಾಗಿ ಪಡೆದಿದ್ದ. ಕಾಲ ಕ್ರಮೇಣ ದುಡಿದು ದುಂಡಾದ, ನಾಲ್ಕು ಜನದ ಕಣ್ಣಿಗೆ ಕಾಣುವಂತಾದ. ಈಗ ಊರಲ್ಲಿ ತಿಂಮ ಒಬ್ಬ ಗಣ್ಯವ್ಯಕ್ತಿ. ನಿನ್ನಿನ ಬಡವ ಇಂದು ಶ್ರೀಮಂತ. ಆಗ ಅವನ ಬಗ್ಗೆ ಟೀಕೆ ಮಾಡದವರೇ ಇಲ್ಲ, ಅಸೂಯೆ ಏನೇನನ್ನೊ ಮಾಡಿಸುತ್ತದೆ.

"ಒಂದೊಪ್ಪೊತ್ತಿನ ಕೂಳಿಗೆ ನಮ್ಮನೇಗೆ ಬರುತ್ತಿದ್ದ"

ಎಂದಂದರು. ತಿಂಮ ಇಲ್ಲಿ ಅಂದನೇ? ಕಾರಿನಲ್ಲಿ ಹೋಗುವಾಗ ಅವರಾರಾದರೂ ಎದುರಾದಾಗ ಕಾರು ನಿಲ್ಲಿಸಿ ಇಳಿದು ಕೈಮುಗಿದ, ಯೋಗಕ್ಷೇಮ ವನ್ನು ವಿಚಾರಿಸಿದ.

"ಅವನ ದುರಹಂಕಾರ ಎಷ್ಟು ನೋಡ್ರಿ. ಕಾರಿದೆ ಎಂದು ತೋರಿಸಲಿಕ್ಕೆ ನನ್ನ ಮಾತನಾಡಿಸ್ತಾನೆ"

ಅಂದರು. ಇದೂ ತಿಂಮನ ಕಿವಿಗೆ ಬಂತು. ಯತ್ನವಿಲ್ಲ ಎಂದು ತುಟಿ ಕಚ್ಚಿ ನಡೆದ.

ಚಂದಾ ಕೇಳಲು ಕೆಲವರು ಬಂದರು. ಐದು ಕೊಟ್ಟ–ಕೃಪಣ ಮುಂಡೇ ಮಗ ಎಂದು ಬೈದರು. ಐದುನೂರು ಕೊಟ್ಟ–ದುರಹಂಕಾರದ ಕೋತಿ ಎಂದು ಮೂದಲಿಸಿದರು.

ತಿಂಮ ಕಡೆಯವರೆಗೂ ಬಡವನಾಗಿಯೇ ಇದ್ದಿದ್ದರೆ ?

"ದಟ್ಟದರಿದ್ರ ಜಾತಕದವನು. ಅವನ ಜನ್ಮವೆಲ್ಲಾ ಬಡತನವೇ ಆಯ್ತು."

ಅನ್ನುವವರಿಗೆ ಬಾಯಿಯಷ್ಟೇ ಸಾಕು. ಬುದ್ಧಿ ? ಬುದ್ಧಿ ಇದ್ದವನಿಗೆ ಬಾಯಿ ಇಲ್ಲದಿದ್ದರೆ ಬೇಡ. ಒಂದನ್ನು ಕೊಟ್ಟ ಆ ದೇವರು ಅದೇಕೋ ಇನ್ನೊಂದನ್ನು ಕೊಡಲಿಲ್ಲ, ಪಾಪ !

ಆ ದೇವನಿಗೇ ಪಾಪ ಅನ್ನಬೇಕು.

ತಿಂಮನಿಗೆ ಶ್ರೀಮಂತಿಕೆ ಬಂತು ನಿಜ. ಆದರೆ ಜೊತೆಯಲ್ಲೇ ತಲೆನೋವು ತಂದಿತು. ಅದಕ್ಕಾಗಿ ತಿಂಮ ಹಿಗ್ಗಲಿಲ್ಲ. ಇದಕ್ಕಾಗಿ ಕುಗ್ಗಲಿಲ್ಲ. ತನಗೆ ಸರಿ ಎನಿಸಿದ ರೀತಿಯಲ್ಲಿ ಮನುಷ್ಯ ಬಾಳಿದರೆ ಸಾಕೇನು ? ಎಲ್ಲರೂ ಮೆಚ್ಚುವ ರೀತಿಯಲ್ಲಿ ಬಾಳಬೇಕು. ಹೌದು ಬಾಳಬೇಕು, ಆದರೆ ಹೇಗೆ ? ಇದಕ್ಕೆ ತಿಂಮನಲ್ಲಿ ಒಂದೇ ಒಂದು ಉಪಾಯವಿದೆ–ಹುಟ್ಟಿದೊಡನೆ ಸಾಯಬೇಕು. ಅವನೊಬ್ಬನೇ ಎಲ್ಲರಿಗೂ ಸರಿ ! ಆದರೆ ತಿಂಮ ಆ ಕೆಲಸವನ್ನು ಮಾಡಲಿಲ್ಲವಲ್ಲಾ ?

ಪೋಸ್ಟ್‌ಗಾಗಿ ಕಾಯುವುದು ಅನೇಕ ಜಾಣರು ಮಾಡುವ ಬಹು ದಡ್ಡ ಕೆಲಸ. ನಿರೀಕ್ಷಿಸಿದ ಪತ್ರ ಬರುವುದಿಲ್ಲ. ಬೇಡಾದುದು ತಪ್ಪದೆ ಬರುತ್ತದೆ. ಇದಕ್ಕಾಗಿ ಕಾಯುವವನು ಅದೆಷ್ಟು ಜಾಣ ? ತಿಂಮನೂ ಅಂದಿನ ಟಪಾಲಿಗಾಗಿ ಕಾದು ಕುಳಿತ. ಕಿಟಕಿಯಿಂದ ಧೊಪ್ಪೆಂದು ಬಿತ್ತು. ರೊಟ್ಟಿ ಬಿದ್ದ ಸಪ್ಪಳಕ್ಕೆ ಹಸಿದಿದ್ದ ನಾಯಿ ಓಡುವಂತೆ ಓಡಿದ ತಿಂಮ. ಟಪಾಲನ್ನು ಕೈಗೆ ತೆಗೆದುಕೊಂಡ. ತೆರೆದ ಅಂಚೆ !

ಸತ್ತರೆ ಕಾರ್ಡು, ಮದುವೆಯಾದರೆ ತೆರೆದ ಅಂಚೆ, ಮಾಮೂಲಿ ಕಾಗದವಾದರೆ ಇನ್‌ಲ್ಯಾಂಡ್ ಕವರ್, ಹಣಸಹಾಯದ ಬೇಡಿಕೆ ಆದರೆ ಮುಚ್ಚಿದ ಲಕೋಟೆಯಲ್ಲಿ ಆರು ಪುಟಗಳ ದೀರ್ಘಪತ್ರ. ಇದು ಲೋಕಾನುಭವಿಯಾದ ತಿಂಮನಿಗೆ ಗೊತ್ತಿಲ್ಲವೆ ?

ಪರಿಚಿತರ ಮನೆಯಲ್ಲಿ ಮದುವೆ. ಬರೀ ಪರಿಚಿತರು ಮಾತ್ರವಲ್ಲ, ಅವರ ಮನೆಯಲ್ಲಿ ಆಗೊಮ್ಮೆ ಈಗೊಮ್ಮೆ ತಿಂಮ ಉಂಡುದುದು ಉಂಟು. ಉಪ್ಪಿಕ್ಕಿದವನನ್ನು ಮುಪ್ಪಿನತನಕ ನೆನೆ. ಮುಪ್ಪು ಬಂದನಂತರ ? ಈ ಪ್ರಶ್ನೆ ತಿಂಮನನ್ನು ಬಾಧಿಸಲಿಲ್ಲ.

ಇದ್ದೂರಲ್ಲಿಯೇ ಮದುವೆ. ಲಗ್ನಪತ್ರಿಕೆಯನ್ನು ಖುದ್ದಾಗಿ ತಂದುಕೊಡುವುದು ಬೇಡವೆ? ಅದನ್ನಪೇಕ್ಷಿಸುವಷ್ಟು ದೊಡ್ಡವನು ಎಂಬ ಭಾವನೆ ತಿಂಮನಲ್ಲಿ ಸುತರಾಂ ಇಲ್ಲ. ನನ್ನನ್ನೂ ಕರೆದಿದ್ದಾರೆ ಎಂದು ಸಂತಸಗೊಂಡ.

"ರಾಯರ ಹೆಂಡತಿ ಅನ್ನವಿಟ್ಟಿದ್ದಾರೆ—ಒಪ್ಪತ್ತೇ ಆಗಲಿ, ಸಾಯುವವರೆಗೂ ಆಗಲಿ, ಉಂಡುದಂತೂ ನಿಜ. ಅದೂ ಯಾವಾಗ? ನನ್ನನ್ನು ಬಾ ಅನ್ನುವವರೇ ಇಲ್ಲದಾಗ. ಆ ತಾಯಿಯ ಐದೂ ಬೆರಳೂ ನನ್ನ ಹೊಟ್ಟೆಯಲ್ಲಿ ಮೂಡಿವೆ. ಉಪಕಾರ ಮಾಡಿದವರನ್ನು ಮರೆಯುವ ಕೃತಘ್ನನಾಗಲೇ? ಅಲ್ಲದೆ ರಾಯರು ಅಂದಿದ್ದಂತೆ ಇಂದಿಲ್ಲ. ಕಾಲಚಕ್ರ ತಿರುಗಿದೆ, ಚೆನ್ನಾಗಿ ಬಾಳಿದವರಿಂದು ಬಡವರಾಗಿದ್ದಾರೆ!"

ತಿಂಮನ ತಲೆಯಲ್ಲಿ ಏನೇನೋ ಆಲೋಚನೆಗಳು. ರಾತ್ರಿಯೆಲ್ಲವೂ ನಿದ್ರೆ ಇಲ್ಲ.

ನೀವು ಬಡವರು, ನಾನು ಶ್ರೀಮಂತ ಎಂದು ಕೊಟ್ಟರೆ ಎಷ್ಟು ಜನ ಬಡವರು ಸ್ವೀಕರಿಸಲು ಸಿದ್ಧರಿದ್ದಾರೆ? ನಮ್ಮ ಬಡತನ ನಮಗಿರಲಿ, ನಿನ್ನ ಸಹಾಯ ಬೇಡ ಎಂದು ಬೈದು ಕಳಿಸುವ ಸ್ವಾಭಿಮಾನಿ ಬಡವರಿಲ್ಲವೇ? ಬಡವರಲ್ಲಿ ಸ್ವಾಭಿಮಾನಿಗಳೇ ಹೆಚ್ಚು. ಅದೊಂದನ್ನು ಬಿಟ್ಟಿದ್ದರೆ ಅವರೆಂದೋ ಶ್ರೀಮಂತರಾಗಿಬಿಡುತ್ತಿದ್ದರು.

ರಾಯರ ಉಪಕಾರವನ್ನು ತಿಂಮ ತೀರಿಸಲಿಲ್ಲ. ತೀರಿಸಲು ಆಸ್ಪದವೂ ಇರಲಿಲ್ಲ. ಚೆನ್ನಾಗಿ ಬಾಳಿ ಬದುಕಿದವರು ತೊಂದರೆಗೀಡಾದಾಗ ನೋಡಿದವರ ಕಣ್ಣು ನೀರೊಡೆಯುತ್ತದೆ. ಅವರಿಗೆ ನೆರವಾಗಬೇಕೆನಿಸುತ್ತದೆ. ಆದರೆ ಅದಕ್ಕೂ ಒಂದು ಸಂದರ್ಭ? ಈಗ ದೊರೆಯಿತು ತಿಂಮನಿಗೆ.

ಮದುಮಗನಿಗೆ ಕೊಡಬೇಕು. ಮಗನಿಗೆ ಕೊಟ್ಟರೆ ತಂದೆಗೇನು ಪ್ರಯೋಜನ? ಇಲ್ಲಿ ಪ್ರಯೋಜನದ ಪ್ರಶ್ನೆಯೇ ಇಲ್ಲ. ಕೊಡುವುದು ಕೊಡುವವನ ಆತ್ಮತೃಪ್ತಿಗಾಗಿ. ಕೊಡುವುದು ಎಂದು ನಿಶ್ಚಯಿಸಿದ. ಆದರೆ ಏನನ್ನು? ಇದಕ್ಕೆ ಉತ್ತರ ಅಷ್ಟು ಸುಲಭವಾಗಿ ಸಿಕ್ಕಲು ಸಾಧ್ಯವೆ? ಮಕ್ಕಳಿಗೆ ಹೆಸರನ್ನಿಕ್ಕುವುದು ಮಕ್ಕಳನ್ನು ಹೆರೆಯುವಷ್ಟು ಸುಲಭದ ಕೆಲಸವೇ?

"ಹಣವನ್ನು ಕೊಟ್ಟುಬಿಡಲೇ?"

ಹಿಂದೆಯೇ ಬಂದಿತು ಆಕ್ಷೇಪಣೆ ತಿಂಮನ ಮಡದಿಯಿಂದ.

"ಏನಾದರೂ ಶಾಶ್ವತವಾಗಿರುವುದನ್ನು ಕೊಡಬೇಕು."

ಈ ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ ಎಂಬ ಮಾತನ್ನು ಹೇಳದವರೇ ಇಲ್ಲ. ಆದರೂ ಈ ಶಾಶ್ವತದ ಹುಚ್ಚು ಯಾರನ್ನೂ ಬಿಟ್ಟಿಲ್ಲ. ತಿಂಮ ಹೆಂಡತಿಗೆ ಹೇಳಿದ.

"ಏನು ಶಾಶ್ವತ ಅಂದರೆ ? ಯಾವುದೂ ಶಾಶ್ವತವಲ್ಲ."

"ಇದ್ದಷ್ಟು ಕಾಲ ಶಾಶ್ವತವಾಗಿರಲಿ."

ಇದ್ದಷ್ಟು ಕಾಲ ಶಾಶ್ವತ ? ಇದು ಹೆಂಣಿನ ಶಾಶ್ವತದ ಕಲ್ಪನೆ. ತಿಂಮನಿಗೆ ಗೊತ್ತು, ಹೆಂಡತಿಯೊಡನೆ ವಾದ ವ್ಯರ್ಥ ಎಂಬುದು. ಹೆಂಣು ಮತ್ತು ತರ್ಕ— ಇವು ಸವತಿಯರು. ಒಂದೇ ಕಡೆ ಇವೆರಡೂ ಇರಲು ಸಾಧ್ಯವಿಲ್ಲ.

ಏನಾದರೂ ಕೊಡುವುದು ಎಂದು ನಿರ್ಧರಿಸಿದರು, ಆದರೆ ಆ ಏನಾದರೂ ಏನು ?

"ಏನೋ ಒಂದು ತನ್ನಿ ಲಕ್ಷಣವಾಗಿ."

ಎಲ್ಲರ ಸಲಹೆಗಳೂ ಇದೇ ಜಾತಿಯವೇ. ಆ ಏನೋ ಒಂದು ಯಾವುದು ಎಂಬುದನ್ನು ಹೇಳುವವರಾರು ? ಅವರಿವರನ್ನು ಕೇಳುತ್ತ ಕುಳಿತರೆ ಕಡೆಗೆ ಆಗುವುದೊಂದೇ—ರಾಯರ ಮಗನ ಮದುವೆ ಆಗಿಹೋಗುತ್ತದೆ. ರೈಲು ಹೋದನಂತರ ಟಿಕೀಟು ಕೊಂಡರೇನು ಪ್ರಯೋಜನ ? ಅಂಗಡಿಯಲ್ಲೇ ಆರಿಸುತ್ತೇನೆಂದು ತಿಂಮ ಹೊರಡಲನುವಾದ.

ಹೆಂಡತಿ ಹೊರಬಾಗಿಲದವರೆಗೂ ಬಂದು ಹೇಳಿದಳು.

"ಏನಾದರೂ ಕೊಡಿ, ಅಪರೂಪದ ವಸ್ತುವನ್ನು ಕೊಡಿ"

"ಒಂದು ಬಾಟ್ಲ ಸೀಮೆ ಎಣ್ಣೆ, ಒಂದು ಕೆ.ಜಿ. ಸಕ್ಕರೆ ಕೊಡಲೇ ?"

"ಇದೇ ನಿಮ್ಮ ಬುದ್ಧಿ"

ಎಂದು ಪರಿಹಾಸ ಮಾಡಿ ನಕ್ಕುಬಿಟ್ಟಳು ಮಡದಿ.

"ನಮ್ಮ ನೆನಪು ಆಗುತ್ತಿರ-ವಂತಹದನ್ನು ಕೊಡಬೇಕು."

ಇದಕ್ಕಿಂತಲೂ ದೊಡ್ಡ ಸ್ವಾರ್ಥ ಇನ್ನೊಂದಿದೆಯೆ ? ನಮ್ಮ ನೆನಪು

ಇನ್ನೊಬ್ಬರಿಗೇಕೆ ಉಳಿಯಬೇಕು ? ಅನೇಕರಿಗೆ ತಮ್ಮ ತಾಯಿ ತಂದೆಗಳ ನೆನಪೂ ಇಲ್ಲ.

"ನಿತ್ಯವೂ ಉಪಯೋಗಿಸುವಂಥ ವಸ್ತುವನ್ನು ಹುಡುಕಿ"

ತಿಂಮನ ಚುರುಕುಮತಿಗೆ ಥಟ್ಟನೆ ಹೊಳೆಯಿತು—ಬಾತ್ ರೂಂನಲ್ಲಿಡಲು ಒಂದು ಬಕೇಟು ? ಎದ್ದೊಡನೆ ಅದರ ದರ್ಶನ, ಸ್ಪರ್ಶನ. ಉಪಯೋಗ ಮಾತ್ರವಲ್ಲ, ಅದು ಅನಿವಾರ್ಯವೂ ಹೌದು.

"ನಿಮಗೆ ಹುಚ್ಚು ಹಿಡಿದಿದೆ"

ಎಂದಂದಳು ತಿಂಮನ ಹೆಂಡತಿ. ಇಲ್ಲ ಎಂದನ್ನಲಿಲ್ಲ ತಿಂಮ. ಸತ್ಯ ವಾದುದನ್ನು ಅಲ್ಲಗಳೆಯುವುದು ಹೇಗೆ ? ತಿಂಮನಿಗೆ ಮದುವೆ ಆಗಿದೆ, ಅವನ ಹುಚ್ಚಿಗೆ ಅವನ ಹೆಂಡತಿಯೇ ಜೀವಂತ ಸಾಕ್ಷಿ !

"ಕಲಾತ್ಮಕವಾಗಿರಬೇಕು, ಉಪಯೋಗವಾಗಬೇಕು ಅಂತಹದನ್ನು ಕೊಡಬೇಕು."

ಇದು ಹಿರಣ್ಯಕಶಿಪುವಿನ ವರ—ಕಲೆ ಎಂದರೇನು ? ಕಲೆಯ ಸರಿಯಾದ ಕಲ್ಪನೆ ಇರುವವರಾರೂ ಆಡುವ ಮಾತು ಇದಲ್ಲ. ಉಪಯೋಗವಾಗದುದಷ್ಟೇ ಕಲೆ. ಉಪಯೋಗವಾದರೆ ಅದು ಕಲೆ ಅಲ್ಲ. ಐದು ರೂಪಾಯಿ ನೋಟು ಉಪಯೋಗವಾಗುತ್ತದೆ, ಅದು ಕಲೆ ಅಲ್ಲ. ಒಂದು ತೈಲಚಿತ್ರ ಕಲೆ, ಉಪಯೋಗ ಏನಿಲ್ಲ. ಕೆಲವರಿಗೆ ಹೆಂಡತಿಯೂ ಹೀಗೇ, ಬರೀ ಕಲೆ ಅಥವಾ ಕೇವಲ ಉಪಯೋಗದ ವಸ್ತು. ಎರಡೂ ಆದವರು ಬಹು ವಿರಳ.

"ಆಗಲಿ ನೋಡೋಣ"

ಎಂದಂದನಂತೆ ಕುರುಡ. ಹಾಗೇ ಅಂದುಕೊಳ್ಳುತ್ತ ತಿಂಮ ಹೊರಬಿದ್ದ.

"ನಾನೂ ಬರಲೇ ಅಂಗಡಿಗೆ ?"

ತಿಂಮನ ಮಡದಿ ಕೇಳಿದಳು.

ಹೆಂಡತಿಯನ್ನು ಅಂಗಡಿಗೆ, ಮಕ್ಕಳನ್ನು ಜಾತ್ರೆಗೆ, ಗಂಡನನ್ನು ತವರಿಗೆ ಒಯ್ಯುವ ಮೂವರಲ್ಲಿ ಮೂರ್ಖರಾರು, ಅಲ್ಲ ಯಾರು ? ಹೆಂಡತಿಯ ಮಾತನ್ನು ಕೇಳಿಸಿಕೊಳ್ಳಬೇಕು, ಕೇಳಬಾರದು. ತಿಂಮ ದೂರ ಹೋಗಿ ಪಾರಾದ. ಅರ್ಧ ಘಂಟೆಯಲ್ಲಿಯೇ ಅಂಗಡಿಯ ಮುಂದೆ ನಿಂತಿದ್ದ.

"ವರನಿಗೆ ಪ್ರೆಸೆಂಟೇಷನ್ ಕೊಡಲು ಏನಾದರೂ ಕೊಡಪ್ಪ"

ಎಂದು ಅಂಗಡಿಯವನಿಗೇ ಹೇಳಿದ—ಇದಕ್ಕಿಂತಲೂ ಒಳ್ಳೆಯ ಉಪಾಯ ಇನ್ನೊಂದಿದೆಯೆ? ಕಟುಕನನ್ನು ನಂಬುವುದು ಜಾಣ ಕುರಿಯ ಲಕ್ಷಣ!

"ಇದನ್ನು ತಕ್ಕೊಳ್ಳಿ ಸ್ವಾಮೀ!"

ಎಂದನ್ನುತ್ತ ಒಂದು ಟೇಬಲ್ ಲ್ಯಾಂಪನ್ನು ತಂದು ಮುಂದಿಟ್ಟ ಅಂಗಡಿಯ ಮಾಲೀಕ.

"ಬೆಲೆ ?"

"ಅಲ್ಲಿಯೇ ಇದೆ ನೋಡಿ"

ಲ್ಯಾಂಪಿಗೆ ನೇತಾಡುತ್ತಿದ್ದ ಚೀಟಿಯನ್ನು ನೋಡಿದ ತಿಂಮ— ರೂ. ೧೧೭-೫೦.

"ಅದು ಸಿಲ್ವರ್ ಸಾರ್, ಸಿಲಾವರ ಅಲ್ಲ. ಬೇಕಾದರೆ ಅಕ್ಕಸಾಲಿಗನ ಬಳಿ ಒರೆ ಹಚ್ಚಿಸಿ."

ತಿಂಮನಿಗೆ ಖಾತ್ರಿ ಆಯಿತು. ಒಂದರೆಕ್ಷಣ ತಲೆಯೋಡಿಸಿದ. ರಾಯರು ಮಾಡಿದ್ದ ಸಹಾಯವನ್ನು ಹಣದಿಂದ ಅಳೆಯಲು ಸಾಧ್ಯವೇ? ಊಟದ ಬೆಲೆ ಒಂದು ರೂಪಾಯಿ ಇರಬಹುದು, ಆದರೆ ಊಟ ಹಾಕಬೇಕೆಂಬ ಮನೋಭಾವಕ್ಕೆ ಎಷ್ಟು ಕೊಟ್ಟರೆ ಹೆಚ್ಚು? ಮಾನವ ಹೃದಯವನ್ನು ಹಣದಿಂದ ಬೆಲೆಕಟ್ಟು ವವನು ಮೂರ್ಖ.

"ಪ್ಯಾಕ್ ಮಾಡಿ"

ಹಣವನ್ನೆಣಿಸಿದ, ಪಾರ್ಸೆಲ್ ಕೈಲಿ ಹಿಡಿದು ನೇರವಾಗಿ ಮದುವೆ ಮನೆಗೆ ಬಂದ. ಒಳಕ್ಕೆ ಕಾಲಿಡುವಾಗ ತಟ್ಟನೆ ಯೋಚನೆಯೊಂದು ಹೊಳೆಯಿತು—ಆ ಹಾಳು ಬೆಲೆಯ ಚೀಟಿ ಅದಕ್ಕೇ ಉಳಿಯಿತು! ನಾನು ನೂರಾಹದಿನೇಳೂವರೆ ಕೊಟ್ಟೆ ಎಂಬುದವರಿಗೆ ತಿಳಿಯಬೇಕೆ? ಜಂಬವಲ್ಲದೆ ಮತ್ತೇನು? ದಾನದಲ್ಲಿ ಗುಪ್ತದಾನ ಶ್ರೇಷ್ಠ—ಬೆಲೆಯ ಲೇಬಲ್ ಸಹಿತ ಕೊಡುವುದೇ? ದುರಹಂಕಾರಿ ಅಂದಾರು, ಅವಸರವಸರವಾಗಿ ಪಾರ್ಸೆಲ್ ಬಿಚ್ಚಿದ, ಆ ಚೀಟಿಯನ್ನು ಕಿತ್ತು ಜೇಬಿಗೆ ಸೇರಿಸಿದ. ಮತ್ತೆ ಅದೇ ಬಣ್ಣದ ಕಾಗದವನ್ನು ಸುತ್ತುವುದರಲ್ಲಿದ್ದ,



ನಿಮ್ಮ ಸಾಡೇಸಾತದ ಲ್ಯಾಂಪು ನಿಮಗೇ ಇರಲಿ

ಥಟ್ಟನೆ ಕಣ್ಣಿಗೆ ಬಿದ್ದಿತು. ಲ್ಯಾಂಪಿನ ಮೇಲೂ ಇದೆ, ರೂ. ೧೧೭-೫೦.

ಒಂದರೆಕ್ಷಣ ಯೋಚಿಸಿದ. ಜೇಬಿನಿಂದ ಚಾಕು ಹೊರಬಂತು. ಸಂಖ್ಯೆಯನ್ನು ಒಂದೊಂದಾಗಿ ಉಜ್ಜಲಾರಂಭಿಸಿದ. ಮೊದಲಿನ ಒಂದು ಹೋಯಿತು ಬಹು ಪ್ರಯಾಸದಿಂದ. ಹಸೆಯ ಮೇಲೆ ಕುಳಿತಿರುವ ವಧೂವರರಿಗೆ ಅವಸರವಲ್ಲವೆ ? ರಾತ್ರಿಯೆಲ್ಲವೂ ಹೀಗೆ ಕುಳಿತಿರಲು ಅವರೇನು ವೃದ್ಧ ದಂಪತಿಗಳೇ ?

ಬರೀ ಹದಿನೇಳೂವರೆ ಇದ್ದರಿರಲಿ ಎಂದು ಒಳಬಂದ. ಬಾಗಿಲಲ್ಲಿದ್ದ ರಾಯರಿಗೆ ಹಲ್ಲು ತೋರಿಸಿದ, ಅಮ್ಮನವರಿಗೆ ಕೈ ಮುಗಿದ. ನೇರವಾಗಿ ವರನ ಬಳಿ ಬಂದು ಉಡುಗೊರೆ ಕೊಟ್ಟು ಕೈ ಕುಲುಕಿ ನಡೆದ.

ಮಹಿಳಾ ಮಂಡಳಿಯ ಸಭೆಯಲ್ಲಿ ಚರ್ಚೆಯಾಗದ ವಿಷಯ ಯಾವುದು ? ವರನಿಗೆ, ಕನ್ನೆಗೆ ಬಂದಿದ್ದ ಸಾಮಾನುಗಳು ಸಾಲಾಗಿ ಎಕ್ಸಿಬಿಷನ್‌ನಲ್ಲಿ ಕುಳಿತವು. ಯಾರಾರು ಯಾವುದನ್ನು ಕೊಟ್ಟರು ಎಂಬುದನ್ನು ಗುರುತಿಸಲಾಯಿತು. ತಿಂಮನ ಟೇಬಲ್ ಲ್ಯಾಂಪ್ ಬಂದಾಗ ರಾಯರ ಹೆಂಡತಿ ಕಣ್ಣು ಕೆಂಪು ಮಾಡಿದರು. ಕಡೆಗೊಬ್ಬರು ಅಂದೇಬಿಟ್ಟರು.

"ಏಳೂವರೆ ರೂಪಾಯಿ ಇದರ ಹಣೆಬರಹ, ಹಿಂದೊಂದು ಹಾಕಿದ್ದಾನೆ"

"ತಿನ್ನಲು ಕೂಳಿಲ್ಲದ ಕಾಲ ಮರೆಯಿತು ಇವನಿಗೆ."

ಮಾತು ಎಷ್ಟು ಎತ್ತರಕ್ಕೆ ಹೋಗಬಹುದು ? ಮುಗಿಲೇ ಕೊನೆ.

ಮರುದಿನ ಬೆಳಿಗ್ಗೆ ರಾಯರ ಮಗಳು ಟೇಬಲ್ ಲ್ಯಾಂಪನ್ನು ತಿಂಮನ ಮೇಜಿನ ಮೇಲಿಟ್ಟು

"ನಿಮ್ಮ ಸಾಡೇಸಾತದ ಲ್ಯಾಂಪು ನಿಮಗೇ ಇರಲಿ"

ಎಂದಂದು ದುಡುದುಡು ನಡೆದಾಗ, ತಿಂಮನ ಮಡದಿ ಗಂಡನ ಮುಖ ನೋಡಿದಳು ತಿಂಮ ? ಮಾಳಿಗೆ ನೋಡಿದ.

# ಸ್ವಾಮಿ

ಬಸಯ್ಯ ಮತ್ತು ಕರಿಬಸಯ್ಯ ಒಡಹುಟ್ಟಿದ ಅಂಣತಮ್ಮಂದಿರು. ಒಬ್ಬ ತಾಯಿಯ ಮಕ್ಕಳು ನಿಜ, ಅಂದಮಾತ್ರಕ್ಕೆ ಆ ಇಬ್ಬರೂ ಒಂದೇ ರಬ್ಬರ್ ಸ್ಟ್ಯಾಂಪಿನ ಮುದ್ರೆಗಳೇ ?

ಹೌದು ಎಂಬುದು ಆ ದಡ್ಡ ತಾಯ್ತಂದೆಗಳ ನಂಬುಗೆ—ಪ್ರಾಯಶಃ ನಂಬುಗೆಯಕಿಂತಲೂ ಹೆಚ್ಚಾಗಿ ಅವರ ಬಯಕೆ. ಹೆತ್ತವರ ಅನೇಕ ಬಯಕೆಗಳಂತೆ ಇದೂ ವ್ಯರ್ಥವಾಯಿತು, ಪಾಪ !

“ನಿಮ್ಮ ಮಕ್ಕಳು ನಿಮ್ಮ ಮಕ್ಕಳಲ್ಲ ಅವು ನಿಮ್ಮಿಂದ ಬರಲಿಲ್ಲ, ನಿಮ್ಮ ಮಾರ್ಗವಾಗಷ್ಟೇ ಬಂದುವು” ಎಂದಂದ ಆ ಆಂಗ್ಲ ಕವಿಯ ಮಾತು ಅನೇಕಾನೇಕ ವಿದ್ಯಾವಂತ ತಂದೆತಾಯಿಗಳಿಗೇ ತಿಳಿದಿಲ್ಲ. ಇನ್ನು ಈ ನಿರಕ್ಷರ ಹಳ್ಳಿಗರಿಗೆ ಅರ್ಥವಾಗುವುದಾದರೂ ಹೇಗೆ ? ಕಿರಿಯನಾದ ಕರಿಬಸಣ್ಣ ಸ್ವಾಮಿ ಹೆತ್ತ ತಾಯ್ತಂದೆಗಳಿಗೆ ತಲೆನೋವಾದ.

ಬಸಯ್ಯ ಮಾದರಿಯ ಮಗ, ಬೇಗ ಎದ್ದು ಜಳಕ ಮಾಡುತ್ತಿದ್ದ. ಶ್ರದ್ಧೆಯಿಂದ ಶಿವಪೂಜೆಯನ್ನು ಮಾಡಿಕೊಂಡು ಅವ್ವನ ಅಡುಗೆಯಾಗುವವರೆಗೂ ತನ್ನ ಶಾಲೆಯ ಪಾಠಗಳನ್ನು ಓದುತ್ತ ಕೂಡುತ್ತಿದ್ದ ಆನಂತರ ಅವಸರದಲ್ಲಿ ಬಿಸಿರೊಟ್ಟಿ ತಿಂದು ನೇರವಾಗಿ ಅಯ್ಯನವರ ಶಾಲೆಗೆ ಹೋಗುವುದು ಅವನ ವಾಡಿಕೆ. ಶಾಲೆ ಬಿಟ್ಟೊಡನೆ ಮನೆ, ಮತ್ತೆ ಕೈಲಿ ಪುಸ್ತಕ. ರಜೆ ದಿನಗಳಲ್ಲಿ

ತಂದೆಯೊಂದಿಗೆ ಹೊಲಕ್ಕೆ ಹೋಗಿ ಬರುವುದು, ರಾತ್ರಿ ನಿಂಗವ್ವ ತಾಯಿಯೊಂದಿಗೆ ವೀರಭದ್ರದೇವರ ಗುಡಿಗೆ ಹೋಗಿ ಅಲ್ಲಿ ಜರುಗುತ್ತಿದ್ದ ಶಿವಕಥೆ ಕೇಳುವುದು ಅವನ ಸಂಪ್ರದಾಯ. ಈ ಬಸಯ್ಯ ತಂದೆತಾಯಿಗಳಿಗೆ ಬಹುಬೇಗ ಮೆಚ್ಚುಗೆಯ ಮಗನಾಗುವುದರಲ್ಲಿ ಏನಾಶ್ಚರ್ಯ ?

ಆದರೆ ಕರಿಬಸಯ್ಯ ? ಪ್ರತಿಯೊಂದರಲ್ಲಿಯೂ ಅವನು ತನ್ನಣ್ಣನಿಗೆ ತದ್ವಿರುದ್ಧ. ನಿಂಗವ್ವ ರೊಟ್ಟಿ ಬಡಿಯುವ ಸಪ್ಪಳ ಕೇಳುವವರೆಗೂ ಮಲಗಿಯೇ ಇರುತ್ತಿದ್ದ. ಗಂಟೆ ಎಂಟಾಗಲಿ, ಹತ್ತಾಗಲಿ ; ಅವನು ಗಡಿಯಾರದ ದಾಸ ನಲ್ಲವಲ್ಲಾ ?

"ಗಂಗಾಳದಾಗೆ ರೊಟ್ಟಿ, ಹೆಗಲ ಮ್ಯಾಗೆ ನೀರು. ಎಂಥಾ ಮೂಳ ಹುಟ್ಟಿ ದಲ್ಲಲೋ ?"

ಎಂದು ನಿಂಗವ್ವ ಅವನನ್ನು ಬೈದುದು ಅದೆಷ್ಟು ಸಲವೋ ?

ತಂದೆ ವಿರೂಪಾಕ್ಷಯ್ಯ ಮಹಾಮುಂಗೋಪಿ. ಒಳ್ಳೆಯ ಪೋಲೀಸ್ ದಫೇದಾರನಾಗಬಹುದಾಗಿದ್ದ ಆ ಮನುಷ್ಯ ಅದಾರ ಪರಪಾಟಿನಿಂದಲೋ ರೈತ ನಾಗಿದ್ದ. ವಿರೂಪಾಕ್ಷಯ್ಯ ಹೊಡೆಯಲು ಬಾರುಕೋಲು ಹಿಡಿದು ನಿಂತ ರಾಯಿತು. ಇದಿರಿನಲ್ಲಿ ಎತ್ತು ಇದೆಯೋ ಮಗನಿದ್ದಾನೆಯೋ ಎಂಬರಿವೂ ಅವನಿಲ್ಲ. ಒಂದು ಸಲ ಚರ್ಮ ಸುಲಿಯುವಂತಹ ಪೆಟ್ಟುಗಳನ್ನು ತಿಂದು ಕರಿಬಸವಯ್ಯ ಮೂರು ದಿನಗಳು ಹಾಸಿಗೆಯಲ್ಲಿ ಬಿದ್ದು ಶುಶ್ರೂಷೆ ಪಡೆದಿದ್ದ. ಧಾರಾಕಾರವಾಗಿ ಕಂಬನಿ ಸುರಿಸುತ್ತ ಗಾಯಗಳಿಗೆ ಎಣ್ಣೆ ಸವರಿದ್ದಳಾ ತಾಯಿ.

ಈ ಕಹಿಘಟನೆ ನಿಂಗವ್ವನಿಗೊಂದು ಹೊಸ ಪಾಟವನ್ನು ಕಲಿಸಿತು. ತನ್ನ ಚಿಕ್ಕ ಮಗನ ಮೇಲೆ ದೂರು ಹೇಳುವುದನ್ನೇ ಬಿಟ್ಟುಬಿಟ್ಟಳು. ಕರಿಬಸಯ್ಯನಿಗೆ ಇದೂ ಒಂದು ರೀತಿಯಲ್ಲಿ ಉಪಯೋಗವೇ ಆಯಿತು. ಇದರ ಪೂರ್ಣ ಉಪ ಯೋಗವನ್ನು ಪಡೆದ ಭೂಪ ಕರಿಬಸಯ್ಯ. ತನ್ನಣ್ಣನಕಿಂತಲೂ ಮುಂಚಿತ ವಾಗಿಯೇ ಬಂದು ಗಂಗಾಳದ ಮುಂದು ಕೂಡುತ್ತಿದ್ದ. ರೊಟ್ಟಿ, ಮುಳ್ಳುಗಾಯಿ ಬಾಯಿಗಿಡುವಾಗ ಒಂದೊಂದು ಸಲ ವಿರೂಪಾಕ್ಷಯ್ಯ ಕೇಳುತ್ತಿದ್ದ.

"ಶಿವಪೂಜೆ ಮಾಡ್ದೇನಲೆ ಕರಿಬಸ್ಯಾ ?"

ಕರಿಬಸಯ್ಯ ಸುಳ್ಳನ್ನು ಲೀಲಾಜಾಲವಾಗಿ ಆಡಿಬಿಡುತ್ತಿದ್ದ.

"ಓಹೋ ! ಆಗಲೆ ಮಾಡಿದ್ನೆಲ್ಲ"

ಎಂದು ತಲೆಯಾಡಿಸಿ ಕೈಲಿದ್ದ ಕೆಲಸವನ್ನು ಸಮರ್ಥವಾಗಿ ಮಾಡಿ ಮುಗಿಸಿಬಿಡುತ್ತಿದ್ದ. ಮಗನಾಡಿದುದು ಹಸೀ ಸುಳ್ಳು ಎಂಬುದು ನಿಂಗವ್ವನಿಗೆ ಗೊತ್ತಿಲ್ಲವೆ ? ಶೀಘ್ರಕೋಪಿಯಾದ ಗಂಡನ ಕೈಗೆ ಮಗನನ್ನು ಹಿಡಿದುಕೊಡಲು ಅಂಜಿ ತಾನೂ ಮಗನೊಡನೆ ಷಾಮೀಲು ಆಗುತ್ತಿದ್ದಳು. ಅಂತಹ ಸಂದರ್ಭ ಗಳಲ್ಲಿ ತಾಯಿಯಾದವಳಿಗೆ ಇದೆಲ್ಲವೂ ಅನಿವಾರ್ಯ.

ಬಸಯ್ಯ ಅವಸರದಲ್ಲಿ ಊಟವನ್ನು ಮುಗಿಸಿ ಶಾಲೆಗೆ ಓಡುತ್ತಿದ್ದ. ಕರಿಬಸಯ್ಯನಿಗಾವ ಅವಸರ ? ಸಾವಕಾಶವಾಗಿ ಹೊಟ್ಟೆ ತುಂಬ ಉಂಡು ಸಲಗನಂತೆ ಒಬ್ಬನೇ ಹೊರಬೀಳುತ್ತಿದ್ದ. ಅವನೂ ಹೋಗುತ್ತಿದ್ದ, ಆದರೆ ಎಲ್ಲಿಗೆ ? ಎಲ್ಲಿಗೆ ಎಂದು ಹೇಗೆ ಹೇಳುವುದು ? ಒಂದೊಂದು ದಿನ ಒಂದೊಂದು ದಿಕ್ಕಿಗೆ ಸವಾರಿ. ದನಕಾಯುವ ಹುಡುಗರೊಟ್ಟಿಗೆ ಕಾಡಿಗೆ ಹೋಗಿ ಬೋರೆ ಹಣ್ಣು ತಿಂದು ಬರುತ್ತಿದ್ದ. ಯಾರದಾದರೂ ಹೊಲವನ್ನು ನುಗ್ಗಿ ಸೇಂಗಾ ಕಿತ್ತಿ ಸುಟ್ಟು ತಿಂದುಬರುತ್ತಿದ್ದ. ಅಂತೂ ಶಾಲೆಯೊಂದನ್ನು ಬಿಟ್ಟು ಬೇರೆ ಎಲ್ಲ ಕಡೆಗೂ ಹೋಗಿ ಬರುತ್ತಿದ್ದ.

ಕರಿಬಸಯ್ಯ ಮೂರು ದಿನಗಳಿಂದ ಶಾಲೆಗೇ ಹೋಗಿಲ್ಲವೆಂದು ಆದಾರೋ ವಿರೂಪಾಕ್ಷಯ್ಯನಿಗೆ ದೂರು ಕೊಟ್ಟರು. ವಿರೂಪಾಕ್ಷಯ್ಯ ಸಾಕ್ಷಾತ್ ರಾಕ್ಷಸನೇ ಆದ—ಕೈಲಿ ಬಾರಕೋಲು ಹಿಡಿದು ಮಗನಿಗಾಗಿ ಕಾದು ಒಳಬಾಗಿಲಲ್ಲಿ ನಿಂತ. ನಿಂಗವ್ವನ ಗತಿ ? ತಾಯಿಯ ಕರುಳಲ್ಲವೇ, ಪಾಪ ! ಅದಾರಿಂದಲೋ ಮಗನಿಗೆ ಹೇಳಿ ಕಳುಹಿಸಿದಳು, ಮನೆಗೇ ಬರಬೇಡ ಎಂದು. ಕರಿಬಸಯ್ಯ ಇದ್ದಕ್ಕಿದ್ದಂತೆ ನಾಪತ್ತೆ.

ವಿರೂಪಾಕ್ಷಯ್ಯನೇ ಅಂಜಿದ, ಮಗನಿಗೆ ಏನಾಯಿತೋ ಎಂದು. ಅವನಿ ಗಾಗಿ ಊರೆಲ್ಲ ಹುಡುಕಾಡಲು ಆರಂಭಿಸಿದ. ಐದನೆಯ ದಿನ ಕರಿಬಸಯ್ಯ ಮನೆಗೆ ಬಂದ, ತನ್ನ ಒಂದು ಸ್ವಂತ ಕಟ್ಟುಕತೆಯೊಂದಿಗೆ. ತಾನು ಶಾಲೆಗೆ ಹೋಗು ತ್ತಿದ್ದಾಗ ದಾರಿಯಲ್ಲಿ ಯಾವನೋ ಬಾವಾಜಿ ತನ್ನ ಮುಖಕ್ಕೆ ಬೂದಿಯನ್ನು ಊದಿದನೆಂದೂ, ತತ್ಫಲವಾಗಿ ತಾನು ಮಂಕಾಗಿ ಅವನನ್ನು ಹಿಂಬಾಲಿಸಿದೆನೆಂದೂ, ಆದಾವುದೋ ಗವಿಯಲ್ಲಿ ತನ್ನನ್ನು ಬಲಿಕೊಡಲು ಬಾವಾಜಿಗಳು ಅಣಿಯಾಗು

ತ್ತಿದ್ದಾಗ ಅದಾರೋ ದನಕಾಯುವ ಹುಡುಗರು ತನ್ನನ್ನು ಬಿಡಿಸಿ ತಂದರೆಂದೂ ಏನೇನೋ ಕತೆ ಹೇಳಿದ. ವಿರೂಪಾಕ್ಷಯ್ಯ ಸಹಜವಾಗಿಯೇ ನಂಬಿದ. ಸುಳ್ಳನ್ನು ನಂಬುವಷ್ಟು ಸುಲಭವಾಗಿ ಜಗತ್ತು ಸತ್ಯವನ್ನು ನಂಬಲು ಸಾಧ್ಯವೇ ?

ಅಂಣ, ತಮ್ಮ ತಮ್ಮದೇ ಆದ ರೀತಿಯಲ್ಲಿ ಬೆಳೆದು ದೊಡ್ಡವರಾದರು. ಎಳೆಗರು ಎತ್ತಾಗದೆ ? ಕತ್ತೆ ಮರಿ ಕತ್ತೆಯಾಗದೆ ? ಸಾಯದೆ ಉಳಿದವ ರೆಲ್ಲರೂ ಬೆಳೆಯುತ್ತಾರೆ, ಬೆಳೆದವರು ದೊಡ್ಡವರಾಗುತ್ತಾರೆ. ದಡ್ಡನಾದರೇನು ಧಬಕನಾದರೇನು, ಗಡ್ಡ ಬೆಳೆದವನೇ ದೊಡ್ಡವನು.

ಮಕ್ಕಳು ದೊಡ್ಡವರಾಗಿ ಕೈಗೆ ಬಂದರು ಎಂದು ನಿಂಗವ್ವ ಸಂತೋಷಪಡು ತ್ತಿರುವಾಗಲೇ ಗಂಡ ವಿರೂಪಾಕ್ಷಯ್ಯ ಕಣ್ಮುಚ್ಚಿ ಕೈಬಿಟ್ಟ. ಮುದುಕಿ ಗೋಳೋ ಎಂದು ಗೋಳಾಡಿದಳು. ಮಕ್ಕಳು ?

ಇಬ್ಬರಿಗೂ ತಂದೆ ಸತ್ತ ನಿಜ, ಆದರೆ ಆ ತಂದೆಯ ಸಾವು ಒಬ್ಬೊಬ್ಬರ ಮೇಲೆ ಒಂದೊಂದು ಬಗೆಯ ಪರಿಣಾಮವನ್ನು ಬೀರಿತು. ವಿರೂಪಾಕ್ಷಯ್ಯ ಸತ್ತುದರಿಂದ ಸಂಸಾರದ ಹೊಣೆಯೆಲ್ಲವೂ ಹಿರಿಮಗನಾದ ಬಸಯ್ಯನ ಮೇಲೆ ಬಿದ್ದಿತು. ಹೊಲ–ಮನೆ, ಎತ್ತು–ಕಮತ, ಕಾಳು–ಕಡಿ ಎಂದು ಏನೆಲ್ಲ ಜಂಜಾಟ ವನ್ನು ಹಚ್ಚಿಕೊಂಡು ದುಡಿಯತೊಡಗಿದ ಬಸಯ್ಯ. ಆದರೆ ಕರಿಬಸಯ್ಯ ? ತಂದೆ ಸತ್ತುದು ಇನ್ನೂ ಒಳಿತೇ ಆಯಿತು—ಪೊರೆ ಬಿಟ್ಟ ಹಾವಿನಂತಾದ.

ಕರಿಬಸಯ್ಯ ದುರ್ಜನರ ಸಹವಾಸಕ್ಕೆ ಬಿದ್ದ ಎಂಬುದು ಅಷ್ಟು ಸರಿಯಲ್ಲ.

"ಕರಿಬಸ್ಯಾನ ಸಾವಾಸ ಮಾಡಿ ಹಾಳಾಗಿ ಹೋಗಬ್ಯಾಡಲೋ"

ಎಂದನೇಕ ತಾಯ್ತಂದೆಗಳು ತಮ್ಮ ಮಕ್ಕಳಿಗೆ ಹೇಳುವಂತಾದ. ರಿಪೇರಿ ಯಾಗಲು ಬಾರದಷ್ಟು ಕೆಟ್ಟಿದ್ದ ಕರಿಬಸವಯ್ಯ. ಈ ದಿಶೆಯಲ್ಲಿ ಅವನದು ವಯಸ್ಸಿಗೆ ಮೀರಿದ ಸಾಧನೆ ! ಶತ್ರುಗಳೂ ಮೆಚ್ಚಬೇಕು. ಮೊದಲೆಲ್ಲ ಮನೆ ಯಲ್ಲೇ ಕಳವು, ಮೂರೆಲೆ ಆಡಲು ಬಂಡವಾಳ ಬೇಡವೆ ? ಗೆದ್ದರೆ ಮೂರು ಮೂರು ದಿನಗಳು ಮನೆಯ ಮುಖವೇ ಇಲ್ಲ, ಸೋತರೆ ಮಾತ್ರ ಅರ್ಧ ಗಂಟೆ ಯಲ್ಲಿಯೇ ಮತ್ತೆ ಮನೆಯಲ್ಲಿ ಹಾಜರು. ಆ ದಾರಿಯೇ ಅಂತಹದು, ಬಹು

ಇಳಕಲು. ಜಾರಲು ಸುರುವಾದರಾಯಿತು. ಪಾತಾಳದಲ್ಲಿಯೇ ಬಂದು ನಿಲ್ಲಬೇಕು. ಬಾವಿಯಲ್ಲಿ ಹಾರುವವನು ಅರ್ಧ ಮಾತ್ರ ಹಾರುತ್ತೇನೆಂದರೆ ಆದೀತೆ? ಬಹು ಬೇಗ ಕರಿಬಸಯ್ಯ ಸಕಲಗುಣಸಂಪನ್ನನಾದ.

ಕಡೆಗೊಂದು ದಿನ ಅವನಿಗೂ ಮೋಕ್ಷಕಾಲ ಬಂದೊದಗಿತು. ಒಬ್ಬ ದಲ್ಲಾಳಿ ಹೆಂಡತಿಯಿಂದ ಊರ ಗೌಡನ ಸೊಸೆಯನ್ನೇ ಕೇಳಿಸಿದ. ಇಲ್ಲಿಗೆ ತುಂಬಿತು ಕರಿಬಸಯ್ಯನ ಪಾಪದ ಕೊಡ. ಅಯ್ಯನನ್ನು ಕಡಿದೇ ಹಾಕುವುದಾಗಿ ಗೌಡ ನಿರ್ಧರಿಸಿದ. ಊರ ಗೌಡನ ಮಾತಿಗೆ ಇದಿರಾಡುವವರಾರು ? ದೈತ್ಯರಂತಹ ಮೂವರು ಕೈಲಿ ಕುಡುಗೋಲು ಹಿಡಿದು ಮನೆಗೆ ನುಗ್ಗಿದರು. ನಿಂಗವ್ವ ಬುದ್ಧಿವಂತಿಕೆಯ ಕೆಲಸವನ್ನು ಮಾಡಿದಳು—ಮಗನನ್ನು ದೇವರ ಜಗುಲಿಯ ಅಡಿಯಲ್ಲಿ ಬಚ್ಚಿಟ್ಟು ಬಂದವರನ್ನು ಸ್ವಾಗತಿಸಿದಳು.

"ಅಂತಾ ಚಂಡಾಳ ಮಗ ಇರೋಕಿಂತ ಸಾವೋದೇ ಮೇಲು. ಎಲ್ಲೇ ಇದ್ರೂ ಕೊಂಡು ಬಂದು 'ನಿನ್ನ ಮಗನ್ನ ಕೊಂದ್ವಿ ನಿಂಗವ್ವಾ' ಅಂತ ಸುದ್ದಿ ಯೋಳ್ರಿ. ಆಲು ಸಕ್ರಿ ಕುಡೀತೀನಿ. ನನ್ನೊಟ್ಟ್ಯಾಗೆ ಉಂಡು ಉಟ್ಟದಂಗೆ ಉಟ್ಟಾವೆ ಆ ಸಣಿ. ಮನೀಗೆ ಬಂದ್ರೆ ನಾನೇ ಯೋಳಿಕಳಿಸ್ತೀನಿ ನಿಮಗೆ. ಗೌಡ್ರು ಅಂದ್ರೆ ಯೋನು ತಿಳಿದ ಇವನು...."

ಅವರಕಿಂತಲೂ ತಾನೇ ಹೆಚ್ಚು ಕೂಗಾಡಿ ರಂಪಾಟ ಮಾಡಿದಳು. ಅವರಿಗೂ ಮುದುಕಿಯ ನಟನೆ ನಂಬಿಕೆಯಾಯಿತು. ಮತ್ತೆ ಬರುವುದಾಗಿ ಹೇಳಿ ಹೊರಟುಹೋದರು.

ನಡುರಾತ್ರಿಯ ನಂತರ ನಿಂಗವ್ವ ಮಗನನ್ನು ಕೂಡಿಸಿಕೊಂಡು ಬುದ್ಧಿ ಹೇಳಿದಳು.

"ಇಲ್ಲಿ ಕೇಳು ಕರಿಬಸ್ಯಾ ? ಊರ ಗೌಡ ಒಳ್ಳೇನಲ್ಲ, ನಿನ್ನ ಕೊಲ್ಲಿಸೇ ಬಿಡ್ತಾನೆ. ನೀನು ಈಗಿಂದೀಗ್ಲೆ ಊರು ಬಿಡು. ಇದೆಲ್ಲ ತಣ್ಣಗಾದ ವ್ಯಾಗೆ ಬರುವಂತಿ"

ಉಪಾಯವನ್ನು ಹೇಳಿ ತನ್ನಲ್ಲಿದ್ದ ಇಪ್ಪತ್ತು ಬೆಳ್ಳಿ ರೂಪಾಯಿಗಳನ್ನು ಮಗನ ಸೊಂಟದಲ್ಲಿ ಕಟ್ಟಿ ಮೆತ್ತಗೆ ಮನೆಯಿಂದ ಹೊರಕಳಿಸಿ ಜೀವ ಉಳಿಸಿದಳು. ಕರಿಬಸಯ್ಯ ಕತ್ತಲಲ್ಲಿಯೇ ಹತ್ತು ಮೈಲಿ ದಾರಿ ನಡೆದು ರಸ್ತೆಗೆ ಬಂದ.

ಓಡುತ್ತಿದ್ದ ಲಾರಿಯೊಂದನ್ನು ನಿಲ್ಲಿಸಿ ಏರಿ ತನ್ನೂರಿನಿಂದ ಸಾಕಷ್ಟು ದೂರ ಸಾಗಿದ. ಎಲ್ಲಿಗೆ ಹೋದ? ಯಾರಿಗೆ ಗೊತ್ತು?

ಬಸಯ್ಯನ ಮದುವೆಯೊಂದನ್ನು ಮಾಡಿ ಸಿಂಗವ್ವ ಕೆಲಕಾಲವಿದ್ದಳು. ಕ್ರಮೇಣ ಚಿಕ್ಕ ಮಗನ ಹಂಬಲ ಹೆಚ್ಚಾಯಿತು—ಕರಿಬಸಯ್ಯನಿಂದ ಪತ್ರವಿಲ್ಲ, ಅವನ ಬಗ್ಗೆ ಯಾವ ವಾರ್ತೆಯೂ ಇಲ್ಲ. ಕನಸಿನಲ್ಲಿಯೂ 'ಕರಿಬಸ್ಯ ಕರಿಬಸ್ಯ' ಎಂದು ಪೇಚಾಡಿ ಕಡೆಗೊಂದು ದಿನ ಅದೇ ಶೋಕದಲ್ಲಿಯೇ, ರಾಮ ರಾಮ ಎಂದು ಕೂಗುತ್ತ ದಶರಥ ಪ್ರಾಣವನ್ನು ಬಿಟ್ಟಂತೆ ಸಿಂಗವ್ವನೂ ಸತ್ತಳು. ಕರಿ ಬಸಯ್ಯನೂ ಗೌಡನ ಭಯಕ್ಕೆ ಎಲ್ಲಿಯೋ ಹೋಗಿ ಜೀವವನ್ನು ಕಳೆದುಕೊಂಡಿರ ಬೇಕೆಂದು ಊರಲ್ಲೆಲ್ಲರೂ ನಂಬಿದರು, ಅವನನ್ನು ಮರೆತೂ ಬಿಟ್ಟರು.

ಬೆಂಗಳೂರು ನಗರ ಎಂತೆಂತಹರಿಗೋ ಆಶ್ರಯವಿತ್ತಿದೆ—ಅಂತಹ ದೊಡ್ಡ ಊರಿಗೆ ಒಬ್ಬ ಕರಿಬಸ್ಯ ಹೊರೆಯಾದಾನೇ? ಉಟ್ಟ ಬಟ್ಟೆಯ ಮೇಲೆ ಬಂದಿದ್ದ, ತಾಯಿ ಕೊಟ್ಟಿದ್ದ ಹಣದಲ್ಲಿ ಇನ್ನೂ ಕೊಂಚ ಸೊಂಟದಲ್ಲಿತ್ತು. ಹೋಟೆಲಲ್ಲಿ ನುಗ್ಗಿದ, ಮಸಾಲೆದೋಸೆ ತಿಂದ. ಕಾಸು ಕೊಟ್ಟು ಸಿನೆಮಾ ನೋಡಿದ-ಇದೆಲ್ಲ ನಾಲ್ಕು ದಿನ, ಕೈ ಬರಿದಾಗುವವರೆಗೂ. ಅನಂತರ?

ಬರಿ ಜೇಬು, ಬರಿ ಹೊಟ್ಟೆ. ಕಬ್ಬನ್ ಪಾರ್ಕು ಅವನ ಕಾಯಂ ಮನೆ ಆಯಿತು. ಆ ಉದ್ದಕ್ಕೂ ಕಾಲು ಚಾಚಿ ಹಾಯಾಗಿ ಕಲ್ಲ ಬೆಂಚಿಯ ಮೇಲೆ ಮಲಗಿದ. ಭೂಮಿಯೇ ಹಾಸಿಗೆ, ಆಕಾಶವೇ ಹೊದಿಕೆ, ಗಾಳಿಯೇ ಆಹಾರ. ಹೊಟ್ಟೆ ತುಂಬಿದ್ದರೆ ಕಂಣಿಗೆ ನಿದ್ರೆ. ನಡುರಾತ್ರಿಯಲ್ಲಿ ಹೊಟ್ಟೆ ತಾಳ ಹಾಕ ಲಾರಂಭಿಸಿತು, ನಿದ್ರೆಯೂ ಹಾರಿತು, ಎದ್ದು ಈಚೆಗೆ ಬಂದ

ಹಸಿವು ಕಲಿಸುವಷ್ಟು ಪಾಟಗಳನ್ನು ಯಾವ ವಿಶ್ವ ವಿದ್ಯಾಲಯವೂ ಕಲಿಸ ಲಾರದು. ಕರಿಬಸಯ್ಯ ಬುದ್ಧಿಯನ್ನುಪಯೋಗಿಸಿದ—ಅದೊಂದೇ ಅಲ್ಲವೆ ಅವ ನಲ್ಲಿದ್ದುದು? ಬೆಂಗಳೂರಿಗೆ ಬಂದ ಮೊದಲ ದಿನವೇ ನೋಡಿದ್ದ. ಹೋಟೆಲಲ್ಲಿ ಚೆನ್ನಾಗಿ ತಿಂದು ಅನಂತರ ಕಾಸು ಇಲ್ಲ ಅಂದವನನ್ನು ಹೋಟೆಲವರು ಏನು ಮಾಡಿದ್ದರು? ಕೆನ್ನೆಗೆ ಎರಡೇಟು ಕೊಟ್ಟು ಹೊರದೂಡಿದ್ದರು. ತಾನೂ ಇದನ್ನೇ ಮಾಡಿದರಾಯಿತು ಎಂದುಕೊಳ್ಳುತ್ತ ಒಂದು ರಾತ್ರಿ ಹೋಟೆಲ ಬಾಗಿಲಿಗೆ ಬಂದ

ಅದು ಮಸಾಲೆದೋಸೆ ಹೋಟಲೇ ? ಅದು ತಿನ್ನುವ ಹೋಟೆಲಲ್ಲ—ಕುಡಿಯುವ, ಕುಣಿಯುವ ಹೋಟೆಲ್ ಅದು. ಹೊರಬಾಗಿಲಲ್ಲಿ ನಿಂತಿದ್ದ ಘೂರ್ಕಾ ಇವನನ್ನು ಅಡಿಯಿಂದ ಮುಡಿಯವರೆಗೂ ಒಮ್ಮೆ ನೋಡಿದ. ಧರಿಸಿದ್ದ ಹೊಲಸು ಬಟ್ಟೆಗಳನ್ನು ಗಮನಿಸಿದ. ಕತ್ತಿಗೆ ಕೈಕೊಟ್ಟು, ಅಷ್ಟು ದೂರ ದೂಡಿ ಬಾಯಲ್ಲಿಯೆ "ಬದ್ಮಾಷ್ ಕಾ ಬಚ್ಚೆ" ಎಂದು ಇವನ ತಾಯ್ತಂದೆಗಳನ್ನು ಬೈದ.

ಹೊತ್ತು ಏರಿದಂತೆಲ್ಲ ಚಳಿ ಆರಂಭವಾಯಿತು. ಹಸಿವು, ಮೇಲೆ ಚಳಿ— ಈ ಇಬ್ಬರು ಹೆಂಡಿರ ಕಾಟವನ್ನು ಸಹಿಸುವುದೆಂತು ಕರಿಬಸಯ್ಯ ? ಏನು ಮಾಡಬೇಕೆಂಬುದು ತೋಚಲಿಲ್ಲ. ಉದ್ದಕ್ಕೂ ಹೆದ್ದಾರಿಯಲ್ಲಿ ಸಾಗಿದ. ರಾತ್ರಿ ಗಸ್ತಿ ತಿರುಗುತ್ತಿದ್ದ ದೊಡ್ಡಂಗಿಯ ಪೋಲೀಸರು ಅಷ್ಟು ದೂರದಲ್ಲಿ ಕಂಡರು.

ಪೋಲೀಸರ ದರ್ಶನವಾದ ಒಂದರೆಕ್ಷಣ ಭಯವಾಯಿತು ಕರಿಬಸಯ್ಯನಿಗೆ. ಹಿಂದೆಯೇ ತುಟಿಯಮೇಲೊಂದು ಹುಸಿನಗು ಸುಳಿದೋಡಿತು. ಕುಶಾಗ್ರಬುದ್ಧಿಯಲ್ಲವೆ ? ಬದುಕಿದೆ ಎಂದಂದುಕೊಂಡ ಹೊಟ್ಟೆ ತುಂಬ ಊಟ, ಮಲಗಲು ಬೆಚ್ಚನ ಕೋಣೆ, ಕಂಬಳಿ ಸಿಕ್ಕಬೇಕಾದರೆ ಪೋಲೀಸರ ಕೈಗೇ ಸಿಕ್ಕಿಬೀಳಬೇಕು. ಇದಲ್ಲದೆ ಬೇರೆ ಮಾರ್ಗವೇ ಇಲ್ಲ ಎಂದಂದುಕೊಂಡ. ಜಾಣತನದಿಂದ ಪೋಲೀಸರ ಕಂಣಿಗೆ ಕಾಣಿಸಿಕೊಂಡ, ಅವರು ಸನಿಯ ಬರುವುದನ್ನು ಕಂಡು ಅಷ್ಟೇ ಜಾಣತನದಿಂದ ಕೊಂಚ ಮರೆಯಾಗಿ ಗಿಡದಡಿಯ ಕತ್ತಲಲ್ಲಿ ನುಸುಳಿದ.

"ಯಾವನಲೇ ಔನು ?"

ಎಂದು ಕೂಗುತ್ತ ಒಬ್ಬ ಸಿಪಾಯಿ ಹಿಂಬಾಲಿಸಿದ, ಇನ್ನೊಬ್ಬ ಅಲ್ಲಿಯೇ ನೋಡುತ್ತ ನಿಂತ. ಪೋಲೀಸ ಕರಿಬಸಯ್ಯನ ರಟ್ಟೆ ಹಿಡಿದ, ಇತ್ತ ಎಳೆತಂದ.

"ಯಾವನೋ ಆ ಬೇಕೂಪ ?"

ಇನ್ನೊಬ್ಬ ದನಿಕೊಡುತ್ತ ಮುಂದು ಬಂದ. ಕರಿಬಸಯ್ಯನನ್ನು ರಸ್ತೆ ದೀಪದಡಿಯಲ್ಲಿ ತಂದರು. ಇನ್ನು ಪರವಾ ಇಲ್ಲ, ಬದುಕಿದೆ ಎಂದು ಒಳಗೊಳಗೇ ಸಂತಸಪಟ್ಟ ಕರಿಬಸ್ಯ.

ಇಬ್ಬರು ಪೋಲೀಸರೂ ಅವನ ಜೇಬು, ಸೊಂಟಗಳನ್ನೆಲ್ಲ ಝಾಡತಿ ಮಾಡಿದರು. ಏನಿದೆ ಅವನಲ್ಲಿ ?

"ಹೋಗೋ ಬೇವಾರ್ಸಿ"

ಎಂದೆಂದು ಒಬ್ಬ ಪೋಲೀಸ್ ಪೇದೆ ಕರಿಬಸಯ್ಯನ ಬೆನ್ನಿನಡಿಯಲ್ಲಿ ಕಾಲಿನಿಂದ ಒಂದೇಟು ಕರುಣಿಸಿ ಮುಂದು ನಡೆದ. ಕರಿಬಸಯ್ಯ ಬೆನ್ನಿನಡಿಯಲ್ಲಿ ಕೈಯಾಡಿಕೊಳ್ಳುತ್ತ ತನ್ನಲ್ಲಿಯೇ ಹೇಳಿಕೊಂಡ.

ಪಾಪಿ ಸಮುದ್ರಕ್ಕೆ ಹೋದರೂ ಮೊಳಕಾಲ್ಮಟಾನೆ ನೀರಂತೆ. ಪೋಲೀಸ್ ಕೈಗೆ ಸಿಕ್ರೂ....ಹಾಗೆಯೇ ಸುತ್ತುತ್ತ ರಾತ್ರಿಯನ್ನು ಕಳೆದ. ಬೆಳಗಾಯಿತು, ಕರಿಬಸಯ್ಯನ ಹೊಟ್ಟೆ ಕರಕರ ಎಂದಿತು, ತಿರಿಗಿ ತಿರಿಗಿ ಸುತ್ತಾಡಿ ಉಸ್ಸೆಂದು ಕಾಲು ಚಾಚಿ ಒಂದು ಮನೆಯ ಬಳಿ ಕುಳಿತ. ಇಷ್ಟು ದೊಡ್ಡ ಊರಲ್ಲಿ ಒಬ್ಬನ ಹೊಟ್ಟೆ ತುಂಬುವುದು ಕಷ್ಟವೇ? ಎಂಬ ಪ್ರಶ್ನೆ ಅವನ ಮನದಲ್ಲೆದ್ದಿತು. ಆದರೆ ಇದೇ ದೊಡ್ಡ ಊರಲ್ಲಿ ತನ್ನಂತಹ ಬರಿ ಹೊಟ್ಟೆಯವರು ಎಷ್ಟಿದ್ದಾರೆ ಎಂಬ ಯೋಚನೆ ಅವನ ಮನಕ್ಕೆ ಹೊಳೆದರಲ್ಲವೆ? ಅವರವರ ಹೊಟ್ಟೆಯ ಪ್ರಶ್ನೆ ಅವರವರಿಗೆ. ಇನ್ನೊಬ್ಬರ ಹಸಿವಿನ ಅರಿವು ಕರಿಬಸಯ್ಯನಿಗೇಕಾಗಬೇಕು?

ಕಿಟಕಿಯಿಂದ ಏನೋ ಬಿದ್ದಿತು, ಕರಿಬಸಯ್ಯ ತಿರಿಗಿ ನೋಡಿದ. ಬ್ರೆಡ್ ತುಂಡುಗಳೆರಡು! ತಕ್ಷಣ ಎದ್ದು ಕೈ ಚಾಚಿದ. ಎತ್ತಲಿಂದಲೋ ಎರಡು ನಾಯಿಗಳು ಓಡಿ ಬಂದುವು. ಕರಿಬಸಯ್ಯನ ಬರಿ ಹೊಟ್ಟೆ ಸುಮ್ಮನಿದ್ದೀತೆ? ಹೂಂ ಎಂದಿತು ಹೊಟ್ಟೆ. ಕಾಲಿನಿಂದ ಬಲವಾದ ಪೆಟ್ಟು ಕೊಟ್ಟ. ಕುಯ್ ಕುಯ್ ಅನ್ನುತ್ತ ನಾಯಿ ಹಿಂದು ಸರಿದವು. ಬ್ರೆಡ್ ಕರಿಬಸ್ಯನ ಹೊಟ್ಟೆ ಸೇರಿತು. ಒಬ್ಬ ತಾಯಿ ಕಿಟಕಿಯಿಂದ ಇಣಿಕಿ ನೋಡಿದಳು, ನಾಯಿಗಳೆರಡು ನಿಂತಿದ್ದವು. ಮಗುವನ್ನು ಬಾಯಲ್ಲಿಯೇ ಬೈದುಕೊಳ್ಳುತ್ತ ಒಳನಡೆದಳು.

ಕೊಂಚ ತಿನ್ನುವದಕ್ಕಿಂತ ಪೂರ್ತಿ ಉಪವಾಸವೇ ಮೇಲಲ್ಲವೆ? ಹೊಟ್ಟೆಗೆ ಸೇರಿದ್ದ ಆ ಎರಡು ತುಂಡು ರೊಟ್ಟಿ ಕರಿಬಸಯ್ಯನ ಹಸಿವನ್ನು ಹೆಚ್ಚು ಪ್ರಕೋಪಗೊಳಿಸಿದುವು. 'ಇಂದು ಹೊಟ್ಟೆ ತುಂಬ ಉಣ್ಣಲೇ ಬೇಕು—ಜೇಲಿನಲ್ಲಿಯಾಗಲಿ, ಹೊರಗಡೆಯಾಗಲಿ' ಎಂದು ಮನದಲ್ಲಿಯೆ ನಿರ್ಧರಿಸಿ ಕಾಲ್ತೆಗೆದ.

ಅತ್ತಿತ್ತ ಸುತ್ತಾಡುತ್ತ ಮೆಜೆಸ್ಟಿಕ್ ಸರ್ಕಲ್ ಬಳಿ ಬಂದ. ಎತ್ತಲಿಂದಲೋ ದೇವಾಲಯದ ಗಂಟೆ ಕೇಳಿತು—ಆಗಲೆ ಕರಿಬಸಯ್ಯನಿಗೆ ದೇವರ ನೆನಪು! ಗುಡಿಗೆ ಹೋದರೆ ಏನಾದರೂ ಸಿಕ್ಕೇ ಸಿಕ್ಕುತ್ತದೆ ಎಂದನಿಸಿತು ಆ ಭಕ್ತನಿಗೆ. ನೇರವಾಗಿ ಇತ್ತ ಬಂದು ಗುಡಿಯ ಒಳಕ್ಕೆ ಬಂದ. ಹೊರಬಾಗಿಲಲ್ಲಿ

ಕೈಯೊಡ್ಡಿ ಕುಳಿತವರನ್ನೊಮ್ಮೆ ನೋಡಿದ. ಹೆಣದ ಮುಖಗಳು! ಹೊರಗೆ ಕುಳಿತವನು ಹಸಿವಿನಿಂದ ಸಾಯುತ್ತಾನೆ, ಒಳಬಂದವನು ಉಂಡು ತೇಗುತ್ತಾನೆ —ಹೊಟ್ಟೆ ತುಂಬುವ ಗುಟ್ಟು ಅರ್ಥವಾಗಿ ಹೋಯಿತು ಅವನಿಗೆ. ನೇರವಾಗಿ ಬಂದು ಗಂಟೆ ಬಡೆದ. ಎಲ್ಲ ಭಕ್ತಾದಿಗಳಂತೆ ಕೈ ಮುಗಿದು ನಿಂತ. ಯಾವ ದೇವರದು? ಯಾವುದೋ ಒಂದು ಸುಡುಗಾಡು ದೇವರು. ಅದನ್ನು ತೆಗೆದು ಕೊಂಡು ತಾನು ಮಾಡುವುದೇನು? ಪ್ರಸಾದವೇನು ಎಂಬುದಷ್ಟೆ ಕರಿಬಸ ಯ್ಯನಿಗೆ ಮುಖ್ಯ. ಪ್ರಸಾದಕ್ಕಾಗಿ ದೇವರು, ದೇವರಿಗಾಗಿ ಪ್ರಸಾದವಲ್ಲ ವಲ್ಲಾ ?

ಕೆಲ ಸಮಯದನಂತರ ಅಯ್ಯಂಗಾರ್ಯರು ಊಟದ ಎಲೆ ತುಂಡು ಗಳನ್ನು ಹಿಡಿದು ಬಂದರು. ಎಲ್ಲರೊಂದಿಗೆ ತಾನೂ ಸಾಲಿನಲ್ಲಿ ಕುಳಿತ. ಅವನ ಮುಂದೂ ಒಂದು ಎಲೆ ತುಂಡು ಬಿತ್ತು. ಸಿಹಿ ಪೊಂಗಲ್, ಪುಳಿಯೋಗರೆ, ಕಡೆ ಯಲ್ಲಿ ಮೊಸರು ಅನ್ನ ಬಂದು ಎಲೆಯಲ್ಲಿ ಬಿದ್ದುವು, ಮಾಯವಾದವು. ನಲ್ಲಿಯ ಅಡಿಯಲ್ಲಿ ಎಲ್ಲರೊಂದಿಗೆ ಕೈ ತೊಳೆದು ಇತ್ತ ಬಂದ. ಹೊರಬಾಗಿಲಲ್ಲಿ ಬಂದು ನಿಂತ ಕರಿಬಸಯ್ಯ. ಪೋಲೀಸ್ ದಫೇದಾರ ಮೆತ್ತಗೆ ಡ್ಯೂಟಿಗೆ ಹೊರಟಿದ್ದ. ಹೊಟ್ಟೆ ಹೊಕ್ಕಿದ್ದ ದೇವರ ಪ್ರಸಾದ ಸುಮ್ಮನಿರುತ್ತೆಯೆ? ಅಂತ್ಯ ಪ್ರೇರಣೆ ಯಾಯಿತು. ಹೌದು, ಮಧ್ಯಾಹ್ನದ ಊಟಕ್ಕೆ ಇದೊಂದೇ ಮಾರ್ಗ ಎಂದಂದು ಕೊಂಡ, ಗೋಡೆಗೆ ಸಾಲಾಗಿಟ್ಟಿದ್ದ ಒಂದು ಕೊಡೆಗೆ ಕೈಹಾಕಿದ. ಒಬ್ಬ ಭಕ್ತ ಕೂಡಲೆ ಬಂದು ಆ ಛತ್ರಿಯ ತುದಿ ಹಿಡಿದು ಮುಖ ನೋಡಿದ. ಬದುಕಿದೆಯಾ ಬಡಜೀವ ಎಂದು ಕರಿಬಸ್ಯ ತನ್ನಲ್ಲಿಯೇ ಅಂದುಕೊಳ್ಳುತ್ತ ಇತ್ತ ತಿರುಗಿ ನೋಡಿದ. ಇಬ್ಬರೂ ಪರಸ್ಪರ ಮುಖ ನೋಡಿಕೊಂಡರು. ಒಳಬರುತ್ತಿದ ದಫೇದಾರನತ್ತೊಮ್ಮೆ ನೋಡುತ್ತ ಕರಿಬಸಯ್ಯ ಭಕ್ತನನ್ನು ಕೇಳಿದ.

"ಈ ಛತ್ರಿ ನಿಮ್ಮದಾ ?"

ದೇವರು ಇದ್ದಕಿದ್ದಂತೆ ಮಾಯವಾಗುವ ಕಾಲ ಹಿಂದೊಮ್ಮೆ ಇದ್ದಿತೋ ಇಲ್ಲವೋ, ಆ ಭಕ್ತನಂತೂ ಛತ್ರಿಯನ್ನು ಕೈಬಿಟ್ಟು ತಕ್ಷಣವೇ ಮಾಯವಾದ. ಇದನ್ನು ಗಮನಿಸಿದ ದಫೇದಾರ ಮುಸಿಮುಸಿ ನಗುತ್ತ ಕರಿಬಸಯ್ಯನಿಗೆ ಹೇಳಿದ,

"ಉಶಾರಾಗಿರಬೇಕ್ರೀ ! ಎಂತೆಂಥಾ ಖದೀಮ ನನಮಕ್ಳು ಐದವ್ರೆ ನೋಡ್ರಿ. ದೇವಾಲಯದಾಗೂ ಅವರ ಕಾಟ"

ಕರಿಬಸ್ಯನಿಗೆ ನಗಬೇಕೋ ಅಳಬೇಕೋ ತಿಳಿಯದಾಯಿತು. ಇದಲ್ಲದೆ ಮತ್ತಾವುದು ದೇವರ ಮಾಯೆ ?

ಬರೀ ಹೊಟ್ಟೆ, ಭುಜಕ್ಕೊಂದು ಕೊಡೆ. ಹಾಗೆಯೆ ಸುತ್ತಾಡುತ್ತ ಇತ್ತ ಬಂದು ವಿಧಾನಸೌಧದ ಪ್ರದಕ್ಷಿಣೆ ಮಾಡಿ ಪಶ್ಚಿಮಕ್ಕೆ ಬಂದ ಚಿಕ್ಕೊಂದು ಚಪ್ಪರ ನಿಂತಿತ್ತು. ಅದಕ್ಕೊಂದು ಬಟ್ಟೆಯ ಹಣೆಪಟ್ಟಿ, ಅವರಿವರು ನಿಂತು ನೋಡುತ್ತಿದ್ದರು. ಕೋತಿ ಆಡಿಸುತ್ತಿರಬಹುದೇ ? ಎಂದು ತನ್ನನ್ನು ತಾನೇ ಕೇಳಿಕೊಂಡ. ಕಾಲು ಇತ್ತ ಸಾಗಿದವು, ಬಂದ. ಏನು ವಿಷಯ ಎಂದು ಅಲ್ಲಿ ನಿಂತೊಬ್ಬರನ್ನು ವಿಚಾರಿಸಿದ.

"ಉಪವಾಸ ಸತ್ಯಾಗ್ರಹ"

ಎಂದು ಹೇಳಿದ ಅಲ್ಲಿ ನಿಂತಿದ್ದ ವ್ಯಕ್ತಿ. ಯಾಕೆ ಎಂದು ಕೇಳಲಿಲ್ಲ ಕರಿಬಸ್ಯ, ಹಾಗಂದರೇನೆಂದು ಕೇಳಿದ. ದೂರದಲ್ಲಿ ಅದಾರೋ ಸ್ಕೂಟರ್ ಏರಿ ಇತ್ತ ಬರುತ್ತಿದ್ದರು. ಸತ್ಯಾಗ್ರಹಿಗಳ ಮುಖಂಡನೊಬ್ಬ ಪೆಚ್ಚು ಮುಖಮಾಡಿ ನಿಂತಿದ್ದ. ಸನಿಯ ನಿಂತು ನೋಡುತಿದ್ದ ಕರಿಬಸಯ್ಯನನ್ನು ಇತ್ತ ಕರೆದು ಕೊಂಡು ಹೋಗಿ ಕಿವಿಯಲ್ಲೇನನ್ನೋ ಹೇಳಿದ. ಟ್ರಾನ್ಸ್‌ಫರ್ ಸೀನರಿ ಆಗಿ ಹೋಯಿತು ಉಪವಾಸ ಸತ್ಯಾಗ್ರಹಿಗಳೊಟ್ಟಿಗೆ ಅಂಗಿ ಬಿಚ್ಚಿ ಕುಳಿತ ಕರಿಬಸಯ್ಯ. ಪತ್ರಿಕಾಕರ್ತರು ಬಂದರು, ನಿರಶನ ವ್ರತದಲ್ಲಿ ಕುಳಿತಿದ್ದವರ ಫೋಟೋ ತೆಗೆದುಕೊಂಡ. ಸ್ಕೂಟರ್ ಮೇಲೆ ಬುರ್‍ರೆಂದು ತೆರಳಿದರು. ಹೊತ್ತು ಏರಿದಂತೆಲ್ಲ ಕರಿಬಸಯ್ಯ ಮತ್ತಗೆ ಧುರೀಣರನ್ನು ಕಾಡಲು ಸುರುಮಾಡಿದ, ಹೊಟ್ಟೆ ತೋರಿಸಿ.

"ಕತ್ತಲಾಗಲಿ ತಡೆಯೋ ಬೇಕೂಪ !"

ಎಂದು ಗದರಿಕೊಂಡ ನಿರಶನ ತಂಡದ ಮುಖಂಡ. ಕರಿಬಸಯ್ಯ ಕತ್ತಲಿಗಾಗಿ ತಪಸ್ಸು ಮಾಡಿದ, ಹಾದರಗಿತ್ತಿಯಂತೆ.

ಚಿಕ್ಕಪೇಟೆಯ ನಡುರಾತ್ರಿ ರಸ್ತೆ, ಹೋಟೆಲಿಂದ ಬಿಸಿಬಿಸಿ ಮಸಾಲೆದೋಸೆ, ಇಡ್ಡಲಿ ಚಟ್ನಿಣಿ, ಬಿಸಿಬೇಳೆ ಹುಳಿ ಅನ್ನದ ಪೊಟ್ಟಣಗಳು ಬೈಸಿಕಲ್ ಮೇಲೆ

ಬಂದುವು. ಆಮರಣಾಂತ ಉಪವಾಸದ ಉಗ್ರವ್ರತ ಕೈಕೊಂಡಿದ್ದ ಸತ್ಯಾಗ್ರಹಿಗಳು ದೀಪವಾರಿಸಿದರು. ಕರಿಬಸಯ್ಯ ಮೂರು ಚೆಂಬು ನೀರು ಕುಡಿದು ಹಾಯಾಗಿ ಕಾಲು ಚಾಚಿ ಮಲಗಿದ. ಬೆಳ್ಳಂಬೆಳಗೂ ಒಂದೇ ನಿದ್ರೆ.

ಮೂರು ದಿನಗಳ ನಂತರ ಸಂಜೆಗೆ ಮತ್ತೆ ಪತ್ರಿಕಾ ವರದಿಗಾರರು ಬಂದರು. ಮುಖಂಡರ ಬಾಯಿಂದ ಸತ್ಯಾಗ್ರಹಕ್ಕೆ ಕಾರಣಗಳನ್ನು ಕೇಳಿ ಬರೆದುಕೊಂಡರು. ಈ ಉಪವಾಸಕ್ಕೆ ಕಾರಣವೇನೆಂಬುದು ಆಗಲೇ ಕರಿಬಸವಯ್ಯನಿಗೆ ಮೊಟ್ಟ ಮೊದಲ ಬಾರಿ ತಿಳಿದುದು.

"ಸತ್ಯಾಗ್ರಹಿಗಳ ಹೆಸರುಗಳೇನು ?"

ಮುಖಂಡರು ಒಂದೊಂದಾಗಿ ಹೇಳಿದರು. ಐದು ಜನ ಸತ್ಯಾಗ್ರಹಿಗಳಿದ್ದರು. ಹೆಸರು ನಾಲ್ಕೇ ಆದುವು.

"ಇನ್ನೊಂದು ಹೆಸರು ?"

ಎಂದಂದ ಒಬ್ಬ ಪತ್ರಿಕಾ ವರದಿಗಾರ.

"ಕರಿಬಸಯ್ಯ ಸ್ವಾಮಿ"

ಸ್ಕೂಟರ್‌ಗಳು ಓಡಿದವು.

ಬೀರ್ ಗುಟುಕರಿಸುತ್ತ ವರದಿಯನ್ನು ತಯಾರುಮಾಡುತ್ತಿದ್ದ ಮುಖ್ಯ ವರದಿಗಾರ ಅತಿಶೀಲರಾಯನಿಗೆ ಕರಿಬಸಯ್ಯ ಸ್ವಾಮಿಯ ಪೂರ್ಣ ಹೆಸರು ಮರೆತೇ ಹೋಯಿತು. ಎರಡು ಸಿಗರೇಟುಗಳೂ ವ್ಯರ್ಥವಾದುವು. 'ಯಾವನೋ ಒಬ್ಬ ಭೋಸುಡಾ ಸಾಮಿ' ಎಂದು ಬಾಯಲ್ಲಿಯೆ ಅಂದುಕೊಂಡು ಐದನೆಯ ಹೆಸರನ್ನು ಬರೀ 'ಸ್ವಾಮಿ' ಎಂದು ಬರೆದು ಮುಗಿಸಿದ. ಮರುದಿನ ಪತ್ರಿಕೆಯಲ್ಲಿ ಹಾಗೆಯೇ ಬಂದಿತು. ಅಂದಿನಿಂದ ಕರಿಬಸ್ಯನ ಹೆಸರು 'ಸ್ವಾಮಿ' ಆಯಿತು.

ಹತ್ತು ದಿನಗಳು (ದಿನ ಅಂದರೆ ರಾತ್ರಿ ಅಲ್ಲ) ಈ ಕಟು ಉಪವಾಸ ಸತ್ಯಾಗ್ರಹ ಅನೂಚಾನವಾಗಿ ಸಾಗಿತು. ಅಸೆಂಬ್ಲಿಯಲ್ಲಿ ಕೋಲಾಹಲ. ಸ್ವಾಮಿಗಳೊಬ್ಬರು ಪ್ರಾಣಾರ್ಪಣೆ ಮಾಡುತ್ತಿದ್ದಾರೆ, ಸರಕಾರ ಕಣ್ಣು ಮುಚ್ಚಿ ಕುಳಿತಿದೆ ಎಂದು ವಿರೋಧಿ ಪಕ್ಷದ ನಾಯಕರು ಕೂಗಾಡಿ ಧರಣಿ ಮುಷ್ಕರ ಹೂಡಿದರು. ಇದೆಲ್ಲವೂ ವ್ಯರ್ಥವಾಗಲು ಸಾಧ್ಯವೇ ?

ಪೊಟ್ಟಿ ಶ್ರೀರಾಮುಲುವಿನ ಉಪವಾಸ ನೆಹ್ರೂನಂತಹ ಆನೆಯನ್ನೇ

ಬಾಗಿಸಿದಾಗ ಸ್ವಾಮಿಯ ಸತ್ಯಾಗ್ರಹಕ್ಕೆ ಮುಖ್ಯ ಮಂತ್ರಿಗಳು ಮಣಿಯದಿರುತ್ತಾರೆಯೆ ? ಸರಕಾರ ಮೊಳಕಾಲೂರಿ ರಾಜೀ ಸಂಧಾನಕ್ಕೆ ಬಂದಿತು. ನಿರಶನ ಸತ್ಯಾಗ್ರಹವನ್ನು ನಿಲ್ಲಿಸಬೇಕೆಂದು ನಿಶ್ಚಯವಾಯಿತು. ಮುಖ್ಯ ಮಂತ್ರಿಗಳೇ ಬಂದು ತಮ್ಮ ಸ್ವಹಸ್ತದಿಂದ ಸ್ವಾಮಿಗಳಿಗೆ ಮೋಸಂಬಿ ರಸವನ್ನು ಕುಡಿಸಿದರು. ದಿನಪತ್ರಿಕೆಗಳಲ್ಲಿ ಮೊಟ್ಟಮೊದಲ ಪುಟಗಳಲ್ಲಿಯೇ ಈ ಫೋಟೋ ರಾರಾಜಿಸಿತು. ಹತ್ತು ದಿನಗಳ ಕೂಲಿ ಇಪ್ಪತ್ತೈದು ರೂಪಾಯಿ ಸ್ವಾಮಿಯ ಕೈಗೆ ಬಿತ್ತು. ಉಪವಾಸ ಮುಷ್ಕರ ಮುಗಿಯಿತೆಂದು ಊರಿಗೆ ಊರೇ ಸಂತಸದಿಂದ ಹಿಗ್ಗಿತು. ಆದರೆ ಸ್ವಾಮಿ ಮಾತ್ರ ಮುಂದೇನು ಗತಿಯೆಂದು ಕಂಗೆಟ್ಟಿದ್ದ. ಕೆಲ ದಿನಗಳು ಸ್ವಾಮಿ ನೌಕರಿ ಇಲ್ಲದೆ ಓಡಾಡಿದ, ಕೈ ಕರ್ಚಿನಲ್ಲಿಯೇ ಹೊಟ್ಟೆ ತುಂಬಿಕೊಂಡ, ಪಾಪ !

ವಿಧಾನಸೌಧದ ಹಿಂದಿದ್ದ ಚಪ್ಪರವನ್ನಿನ್ನೂ ಕೀಳಿರಲಿಲ್ಲ. ಮತ್ತೊಂದು ತಂಡ ಉಪವಾಸ ಮುಷ್ಕರ ಆರಂಭಿಸಿತು. ಸ್ವಾಮಿ ಅಲ್ಲಿಗೆ ಬಂದು ಉಪವಾಸಕ್ಕೆ ಆಳು ಬೇಕೇ ? ಎಂದು ಕೇಳಿದ. ದಿನಕ್ಕೆ ಮೂರು ರೂಪಾಯಿ ಕೂಲಿ ಮೇರೆಗೆ ನೌಕರಿ ದೊರೆಯಿತು. ಹೀಗೆಯೇ ಆಗಿಷ್ಟು ಈಗಿಷ್ಟು ನೌಕರಿ ಗಿಟ್ಟಿಸಿ ಸ್ವಾಮಿ ವೃತ್ತಿ ನಿರಶನ ಸತ್ಯಾಗ್ರಹಿಯಾದ.

ಸೂಳೆಗೊಬ್ಬ ಕುಂಟಲಗಿತ್ತಿ, ಸ್ವಾಮಿಗೊಬ್ಬ ಶಿಷ್ಯ ಬೇಕೇ ಬೇಕು. ಇಲ್ಲದಿದ್ದಲ್ಲಿ ಸೂಳೆಯೂ ಸ್ವಾಮಿಯಷ್ಟೇ ಅಗ್ಗವಾಗುತ್ತಾಳೆ, ಪಾಪ ! ಸ್ವಾಮಿಯ ಪುಣ್ಯ ಚೆನ್ನಾಗಿಯೇ ಇದ್ದಿತು. ಒಬ್ಬ ಖದೀಮ ಶಿಷ್ಯ ಸಿಕ್ಕಿದ.

"ಸ್ವಾಮೀ !"

"ಏನ್ರೀ ?"

ಎಂದಂದ ಸ್ವಾಮಿ, ಶಿಷ್ಯ ಮುಖ ಕಿವುಚಿದ.

"ನೀವು ಹಾಗೆಲ್ಲ 'ರಿ' ಹಚ್ಚಿ ಮಾತಾಡಕೂಡದು. ಏನೋ ಭಕ್ತಾ ? ಎಂದೇ ಕೇಳಬೇಕು. ಮುಖ್ಯಮಂತ್ರಿ ಬರಲಿ, ಅವರಪ್ಪ ಬರಲಿ, ಸ್ವಾಮಿ ಅಂದರೆ ದೇವರ ಸಮಾನ—ಅಲ್ಲ, ದೇವರು ಅಂದರೆ ಸ್ವಾಮಿಯ ಸಮಾನ."

"ಆಗಲೋ ಭಕ್ತಾ"

ಎಂದಂದ ಸ್ವಾಮಿ.

"ಬಾ ನನ್ನ ಜೊತೆ"

ಎಂದು ಹೇಳಿ ಶಿಷ್ಯ ಸ್ವಾಮಿಯನ್ನು ಆಟೋರಿಕ್ಷಾದಲ್ಲಿ ಕೂಡಿಸಿಕೊಂಡು ಕರೆದೊಯ್ದ. ಸ್ಮಶಾನದ ಬಳಿಯಿದ್ದ ಮುರುಕು ಮಂಟಪ ಸ್ವಾಮಿಗಳ ಮಠ ವಾಯಿತು. ಸ್ವಾಮಿಗಳು ಗಡ್ಡ ಬೋಳಿಸಕೂಡದು ಎಂದು ಶಿಷ್ಯನ ಅಪ್ಪಣೆ ಯಾಯಿತು. ಅಸ್ತು ಎಂದರು ಸ್ವಾಮಿಗಳು. ಹೆಣಗಳನ್ನು ಸುಟ್ಟ ಬೂದಿ ಸ್ವಾಮಿಗಳು. ಹೆಣಗಳನ್ನು ಸುಟ್ಟ ಬೂದಿ ಸ್ವಾಮಿಗಳ ವಿಭೂತಿ, ಕಾವಿ ವಸ್ತ್ರ ಮೈ ಮುಚ್ಚಿತು. ಉಪವಾಸ ಸ್ವಾಮಿಗಳ ನಾಟಕ ಆರಂಭವಾಯಿತು.

ಬೆಂಗಳೂರಿನಂತಹ ವಿದ್ಯಾವಂತರ ಊರಿನಲ್ಲಿ ದಡ್ಡರಿಗೆ ಕೊರತೆಯೇ ? ಮೇಯರರು ಬಂದು ಹೋದರು. ಸ್ವಾಮಿಗಳ ಮಠಕ್ಕೆ ಕಾರ್ಪೊರೇಷನ್ ದೊಡ್ಡ ನಿವೇಶನವನ್ನು ಕೊಟ್ಟಿತು. ಒಂದೇ ಪೈಸಾಕ್ಕೆ ಒಂದೇ ದಿನಕ್ಕೆ ಒಂದೇ ಪೈಸೆ ತೆಗೆದುಕೊಳ್ಳುವ ಬಡ್ಡೀ ಮಕ್ಕಳಾದ ಶ್ರೀಮಂತರು ಬಂದರು. ದೇಣಿಗೆ ಇತ್ತರು. ಉಪವಾಸ ಸ್ವಾಮಿಗಳ ಮಠ ಮೂರೇ ಮೂರು ತಿಂಗಳಲ್ಲಿ ಎದ್ದಿತು. ಉದ್ಘಾಟನೆಗೆ ಗವರ್ನರರು ಬಂದರು. ಪತ್ರಿಕೆಯ ತುಂಬ ಸ್ವಾಮಿಗಳೇ ಸ್ವಾಮಿಗಳು.

ಸಾಹಿತಿಗಳ ಮನೆಗೆ ಕಾರುಗಳು ಬಂದುವು. ಸಿದ್ಧವಾಗಿದ್ದ ಕವನಗಳಲ್ಲಿ ಒಂದೆರಡು ಮಾರ್ಪಾಟು ಮಾಡಿಕೊಂಡು ಹಳೆಯ ಕವಿಗಳು ಓಡುತ್ತ ಬಂದು ಕಾರಿನಲ್ಲಿ ಕುಳಿತರು. ಸ್ವಾಮಿಗಳನ್ನು ಹೊಗಳಿ ಹಾಡಿದರು. ವಿಶೇಷ ಸಂಚಿಕೆ ಗಳಲ್ಲಿ ಲೇಖನಗಳನ್ನು ಬರೆದು ತಾವೂ ಬದುಕಲು ಮಾರ್ಗ ಮಾಡಿಕೊಂಡರು, ಸ್ವಾಮಿಗಳಿಗೂ ಮಾರ್ಗವನ್ನು ಮಾಡಿಕೊಟ್ಟರು.

ಸ್ವಾಮಿಗಳು ವಾರದಲ್ಲಿ ಆರು ದಿನ ಉಪವಾಸ—ಸೋಮವಾರ ರಾತ್ರಿಗೆ ಊಟ. ಪ್ರತಿ ಸೋಮವಾರಕ್ಕೆ ಒಬ್ಬೊಬ್ಬ ಭಕ್ತನನ್ನು ಏರ್ಪಡಿಸುವುದು ಶಿಷ್ಯನ ಹೊಣೆ. ಊರಿನ ಸಾಹುಕಾರರೊಬ್ಬರು ಭಾನುವಾರ ಬಂದು ಕೈಮುಗಿದು ನಿಂತು ಕೇಳಿಕೊಂಡರು.

"ನಾಳೆ ನಮ್ಮ ಮನೆಗೆ ಊಟಕ್ಕೆ ದಯಮಾಡಿಸುವ ಕೃಪೆ ಮಾಡ ಬೇಕು."

"ಏನು ಅಡುಗೆ ಮಾಡಿಸ್ತಿ ?"

ಎಂದು ಕೇಳಿದರು ಸ್ವಾಮಿಗಳು. ಸ್ವಾಮಿಗಳ ಒಳಗಿದ್ದ ಕರಿಬಸ್ಯ 'ಬೀದಿಗೆ ಬಿದ್ದ ಬ್ರೆಡ್ಡು ತಿನ್ನೋ ನೀನು ಹಿಂಗಾಸ್ಯಾ?' ಎಂದು ಮೂದಲಿಸಿ ನಕ್ಕ. ಸ್ವಾಮಿಗಳ ಚರಿತ್ರೆ ಅಗಾಧವಾಯಿತು. ಮನೆ ಮನೆಗಳಲ್ಲಿ ಅವರ ಫೋಟೋ. ಆ ಫೋಟೋದಿಂದ ಭಸ್ಮ ಬೀಳುತ್ತದಂತೆ. ಸ್ವಾಮಿಗಳು ಮಕ್ಕಳು ಕೊಡ್ತಾರಂತೆ. ಸ್ವಾಮಿಗಳು ಮಳೆ ನಿಲ್ಲಿಸುತ್ತಾರಂತೆ ಮುಂತಾಗಿ ವಾರ್ತೆಗಳು ಬಾಯಿಂದ ಕಿವಿಗೆ, ಕಿವಿಯಿಂದ ಬಾಯಿಗೆ ಹಬ್ಬಿದವು.

ಭೂಮಿಗಿಳಿದು ಬಂದ ಭಗವಂತ ಇವರೇ ಎಂದು ಮಾಜಿ, ಹಾಲಿ ಮತ್ತು ಭಾವಿ ಕುಲಪತಿಗಳು, ಆಶೆಬುರುಕ ಸಾಹಿತಿಗಳು ಹಾಡಿ ಹಾಡಿ ಮೂರ್ಖರಾದರು, ಜನತೆಯನ್ನೂ ಅದೇ ಭಾವಿಗೆ ತಳ್ಳಿದರು.

ಸ್ವಾಮಿಗಳಿಗೆ ಊರೂರುಗಳಿಂದ ಔತಣ ಬಂದಿತು. ಭಕ್ತರ ಬಯಕೆಯನ್ನು ಈಡೇರಿಸದಿರಲು ಪರಮಾತ್ಮನಿಗೆ ಸಾಧ್ಯವೆ? ಭಕ್ತ ಪರಾಧೀನನೆಂಬ ಬಿರುದನ್ನು ಉಳಿಸಿಕೊಳ್ಳಬೇಡವೆ? ಸ್ವಾಮಿಗಳು 'ಶಿಷ್ಯರ ಮೇಲೆ' ಹೋದರು.

ಅಲ್ಲಲ್ಲಿ ಸಂಚರಿಸುತ್ತ ಸ್ವಾಮಿ ಒಂದು ದಿನ ತನ್ನೂರಿಗೇ ಬರಬೇಕಾಯಿತು. ಊರಿನ ಹಿರಿಯರೆಲ್ಲರೂ ಗೌಡನ ಮುಖಂಡತ್ವದಲ್ಲಿ ಸ್ವಾಮಿಯನ್ನು ಸ್ವಾಗತಿಸಲು ಹೆದ್ದಾರಿಗೆ ಬಂದು ಕಾದು ನಿಂತರು. ಸ್ವಾಮಿಗಳ ಕಾರು ಬಂದೊಡನೆ "ಉಪವಾಸ ಸ್ವಾಮೀಕಿ ಜೈ" ಎಂಬ ಘೋಷಣೆಗಳು ಗಗನವನ್ನು ಭೇದಿಸಿದುವು ಸ್ವಾಮಿಗಳಿಗೆ ಇಳಿದುಕೊಳ್ಳಲು ವೀರಭದ್ರ ದೇವರ ಗುಡಿಯು ಸಿದ್ಧವಾಗಿತ್ತು.

"ನೀನು ಮೂರೆಲೆ ಆಡಿದ ಜಾಗ ಇದು"

ಎಂದಂದ ಒಳಕುಳಿತ ಕರಿಬಸ್ಯ, ಸ್ವಾಮಿಗಳ ಕಿವಿಯಲ್ಲಿ. ಸ್ವಾಮಿ ಮುಸಿ ಮುಸಿ ನಕ್ಕ ಒಳಗೊಳಗೆ. ಭಕ್ತರು ದರ್ಶನಕ್ಕಾಗಿ ಹಾತೊರೆದರು. ಶಿಷ್ಯ ಒಬ್ಬೊಬ್ಬರನ್ನೇ ಒಳಬಿಟ್ಟು ಹೊರಬಾಗಿಲಲ್ಲಿ ಹುಲಿಯಂತೆ ನಿಂತ

ಭಕ್ತನೊಬ್ಬ ಒಳಬಂದೊಡನೆ ಸ್ವಾಮಿ ಅವನನ್ನು ಹೆಸರಿನಿಂದಲೇ ಕರೆದು ಮಾತನಾಡಿಸಿದ. ಇದಕ್ಕೂ ಹೆಚ್ಚು ಇನ್ನೇನು ಬೇಕು? ಸ್ವಾಮಿಯ ದೈವತ್ವ ಭದ್ರವಾಗಿ ಹೋಯಿತು. ಬಸಯ್ಯನೂ ಬಂದು ಕೈ ಮುಗಿದು ನಿಂತ

"ಏನೋ ಬಸ್ಯಾ, ಓಡಿಹೋದ ನಿಂತಮ್ಮ ಕರಿಬಸ್ಯ ಎಲ್ಲಿ?"

ಅವಕ್ಕಾದ ಬಸವಯ್ಯ, ಚೇತರಿಸಿಕೊಂಡು ದೈನ್ಯದಿಂದ ಉತ್ತರಿಸಿದ.

"ಗೊತ್ತಿಲ್ಲ ಬುದ್ದೀ ! ಇದ್ದಾನೋ ಸತ್ತನೋ ಅದೂ ಗೊತ್ತಿಲ್ಲ"

"ಐಧಾನೆ ಐಧಾನೆ, ಸುಕವಾಗೇ ಐಧಾನೆ ಓಗು. ಯೋಷ್ನಿ ಮಾಡ ಬ್ಯಾಡ"

"ನಿನ್ನಂದೆ ದೊಡ್ಡಗೌಡ ಸತ್ತೆನೇನೋ ?"

ಊರಗೌಡ ಒಳಬಂದು ದೂರದಿಂದಲೆ ಶರಣುಮಾಡಿ ನಿಂತ.

"ಸತ್ತು ಮೂರು ವರುಷ ಆತು ಬುದ್ದೀ. ನಂಗೆ ಲಗ್ಣ ಆಗಿ ಏಳು ವರ್ಷ ಆತು, ಮಕ್ಕಳೇ ಆಗಿಲ್ಲ"

"ಔದು ನಂಗೊತ್ತು. ಸೋಮವಾರ ರಾತ್ರಿ ನಿನ್ನೆಂಡ್ತಿಯಿಂದ ಸ್ವಾಮಿ ಪೂಜೆ ಮಾಡ್ಸು."

ಗೌಡ, ಗೌಡನ ಹೆಂಡತಿ ಸೋಮವಾರಕ್ಕಾಗಿ ಕಾದು ಕುಳಿತರು. ಸೋಮ ವಾರ ರಾತ್ರಿ ಸ್ವಾಮಿಗಳ ಪೂಜೆ ಅದ್ದೂರಿಯಿಂದ ಜರುಗಿತು. ಗೌಡ ಗೌಡಗಿತ್ತಿ ಹೋಳಿಗೆ ಮಾಡಿಕೊಂಡು ಬಂದು ಸ್ವಾಮಿಗೆ ಎಡೆ ಮಾಡಿದರು.

ಶಿಷ್ಯ ಬಾಗಿಲಲ್ಲಿಂದಲೆ ಕೂಗಿದ.

"ಗೌಡ ಹೊರಗೆ ಬರಬೇಕು"

ಹೊರ ಬಂದ ಗೌಡ, ಬಾಗಿಲು ಮುಚ್ಚಿತು ಗೌಡಗಿತ್ತಿ ಪ್ರಸಾದವನ್ನು ಸ್ವೀಕರಿಸಿ ಸ್ವಾಮಿಯ ಏಕಾಂತ ಸೇವೆಯಲ್ಲಿ ನಿರತಳಾದಳು. ಸ್ವಾಮಿ ಸಂತಾನ ವನ್ನು ಅನುಗ್ರಹಿಸಿದ, ಎರಡೆರಡು ಬಾರಿ. ಹೋಗುವಾಗ ಗೌಡಗಿತ್ತಿಯ ಕಿವಿ ಯಲ್ಲಿ ಹೇಳಿದ.

"ಮಗ ಉಟ್ಟುತಾನೆ, ವಿರುಪಾಕ್ಸ ಅಂತ ಯೆಸರಿಡು."

"ನಾನಾರು ಗೊತ್ತಾತಾ ? ನಿನ್ನ ಕೇಳಿಸಿದ್ನೆಲ್ಲ....ಪೋಕರಿ ಕರಿಬಸ್ಯ."

# ಧರ್ಮರಾಯನ ಅಧರ್ಮದ ಹಾಬಿ

ಒಬ್ಬೊಬ್ಬರಿಗೆ ಒಂದೊಂದು ಹಾಬಿ. ಇದರಲ್ಲೇನು ತಪ್ಪು? ಲೋಕೋ ಭಿನ್ನ ರುಚಿಃ ಎಂಬ ಆರ್ಯೋಕ್ತಿಗೆ ಇದೂ ಒಂದು ಸಾಕ್ಷಿ. ಎಲ್ಲರಿಗೂ ಒಂದೇ ಹಾಬಿ ಇರಲು ಮಾನವರೆಲ್ಲರೂ ಒಂದೇ ರಬ್ಬರ್ ಸ್ಟಾಂಪಿನ ಮುದ್ರೆಗಳೇ ? ವೈವಿಧ್ಯತೆಯೇ ಬಾಳಿನ ಮಸಾಲೆ ಎಂಬುದು ಪ್ರಕೃತಿಗೆ ಗೊತ್ತಿದೆ ಎಂದನ್ನುತ್ತಾನೆ ತಿಂಮ.

ಕೆಲರಿಗೆ ಬೆಳಗ್ಗೆ ಎದ್ದೊಡನೆ ಅವಸರವಸರದಲ್ಲಿ ಹೋಟೆಲಿಗೆ ಹೋಗಿ ಮಸಾಲೆ ದೋಸೆ ತಿನ್ನುವುದೇ ಒಂದು ಹಾಬಿ. ಆದರೆ ಇನ್ನು ಕೆಲವರಿಗೆ ಟ್ಯಾಕ್ಸಿಯಲ್ಲಿ ಕುಳಿತು ಮನೆ ಮನೆ ಸುತ್ತುವುದು ಇನ್ನೊಂದು ಹಾಬಿ. ಬೆಳಗ್ಗೆ ಕ್ಲಬ್ಬು, ಸಂಜೆಗೆ ಕ್ಲಬ್ಬು—ಇದು ಮತ್ತೆ ಕೆಲರ ಹವ್ಯಾಸ. ಅಷ್ಟೇಕೆ, ನಮ್ಮ ಮಿತ್ರನೊಬ್ಬನಿಗೆ ಫೋಟೋ ತೆಗೆಯುವ ಹುಚ್ಚು. ಹುಚ್ಚು ? ಅಲ್ಲ, ಹಾಬಿ ಅನ್ನಿ. ಶಬ್ದ ಬೇರೆ, ಅರ್ಥ ಒಂದೇ. ಹಾಳು ಗೋಡೆಗೆ ಮುಖಮಾಡಿ ನಿಂತ ಎರಡು ಕತ್ತೆಗಳನ್ನು ಕಂಡರಾಯಿತು. ನಮ್ಮ ಮಿತ್ರನ ಕೈ ಕ್ಯಾಮರಾ ಕ್ಲಿಕ್ಕಿಸಲೇಬೇಕು. ಏನು ಹಾಳು ಹಾಬಿಗಳೋ, ಹಣ ಹಾಳು ಎಂದು ಮೂಗು ಮುರಿಯುವವರೂ ಇದ್ದಾರೆ. ಹಾಗಾದರೆ ಇವರ ಹಾಬಿ ಏನು ? ಹಣವನ್ನು ಉಳಿಸುವುದೊಂದೇ ಅವರ ಹಾಬಿ ಎಂದನ್ನುತ್ತಾನೆ ತಿಂಮ.

ಈ ಬಗೆಯ ಜನದಲ್ಲಿ ವಿಚಿತ್ರವಾದ ಉಪಹಾಬಿಗಳೂ ಇರುತ್ತವೆ. ಆದರೆ

ಒಂದು ಕಾಸೂ ಖರ್ಚು ಇಲ್ಲ—ನಮ್ಮ ರಾಯರಿಗೆ ದಿನಕ್ಕೊಮ್ಮೆ, ಭಾನುವಾರ ಮತ್ತಿತರ ರಜೆ ದಿನಗಳಲ್ಲಿ ಎರಡು ಬಾರಿ ಹೆಂಡತಿಯನ್ನು ಹೊಡೆಯುವುದು ಹಾಬಿ. ಸ್ತ್ರೀಯರಿಗೆ ಹಾಬಿಗಳಿಲ್ಲವೆ ? ಯಾಕಿಲ್ಲ, ಅವರಿಗೇ ಹೆಚ್ಚು. ಸೀತಮ್ಮನ ಗಂಡ ಹಾಗಂತೆ, ಪಾತಮ್ಮನ ಗಂಡ ಹೀಗಂತೆ ಎಂದು ಅದಾರ ಮನೆಗೋ ಹೋಗಿ ಆಡಿಕೊಂಡು ಬರದಿದ್ದರೆ ಸಾತಮ್ಮನಿಗೆ ಅನ್ನವೇ ರುಚಿಸುವುದಿಲ್ಲ. ಹಾಬಿಗೆ ಗಂಡು, ಹೆಣ್ಣು, ಎಂಬ ಭೇದ ಬುದ್ಧಿ ಸುತರಾಂ ಇಲ್ಲ—ಅದು ಲಿಂಗಾತೀತ. ಪರಿಚಿತರು ಕಂಡರಾಯಿತು, ಅವರನ್ನು ಸಾಲ ಕೇಳುವುದು ಒಬ್ಬರ ಹಾಬಿ. ಯಾರ ಮನೆಗಾದರೂ ಹೋಗಿ ಹೋಳಿಗೆ ತಿಂದುಬರುವುದು ಮತ್ತೊಬ್ಬರ ಹಾಬಿ. ಈ ಕೆಲವು ಲಾಭದಾಯಕ ಹಾಬಿಗಳು. ಗಂಡ ಸತ್ತವಳಿಗೆ ಪುರಾಣವೇ ಹಾಬಿ—ಹೆಂಡತಿ ಸತ್ತವನಿಗೆ ? ಸಾಯಿಬಾಬಾ !

ಹೀಗೇಕೆ ಎಂದು ಕೇಳಲು ನೀವಾರು ಅನ್ನುತ್ತಾನೆ ತಿಂಮ. ಹಾಬಿ ಅಂದ ಮೇಲಾಯಿತು, ಏಕೆ ಎಂಬ ಪ್ರಶ್ನೆಗೆ ಆಸ್ಪದವೇ ಇಲ್ಲ. ಇದೊಂದು ಮಾನವ ಸಹಜವಾದ ಗುಣ, ಅಷ್ಟೇ. ಹೌದು ಮರೆತಿದ್ದೆ, ನಮ್ಮೂರಲ್ಲಿ ಒಬ್ಬನಿಗೆ ಒಂದು ವಿಚಿತ್ರವಾದ ಹಾಬಿ ಇತ್ತು. ಪ್ರತಿವರ್ಷವೂ ಅವನಿಗೆ ಒಂದೊಂದು ಮದುವೆ ! ವಿಚಿತ್ರವೋ ಸಚಿತ್ರವೋ ಅಂತೂ ಒಂದು ಹಾಬಿ ಇರಲೇಬೇಕು. ಇದು ಶುದ್ಧ ಸುಳ್ಳು. ನನ್ನ ಮಿತ್ರನೊಬ್ಬನಿದ್ದಾನೆ, ಅವನಿಗೆ ಯಾವ ಹಾಬಿಯೂ ಇಲ್ಲ ಎಂದೊಬ್ಬರ ಹೇಳಿಕೆ. ಇದು ನಿಮಗೆ ಹೇಗೆ ಗೊತ್ತಾಯಿತ್ತು ? ಆ ಮಿತ್ರನೇ ಹೇಳಿದ ಎಂದವರ ಉತ್ತರ. ಹಾಂ ! ಹಾಗಾದರೆ ಅದೇ ಅವನ ಹಾಬಿ. ನನಗಾವ ಹಾಬಿಯೂ ಇಲ್ಲ ಎಂದು ಎಲ್ಲರ ಮುಂದು ಹೇಳಿಕೊಂಡು ಬರುವುದೇ ಕೆಲವರ ಹಾಬಿ. ಹಾಗಾದರೆ ಹಾಬಿ ಎಂಬುದು ಒಂದು ರೋಗವೇ ? ರೋಗ ಹೌದು, ಆದರೆ ಅದನ್ನು ಗುಣ ಮಾಡುವ ಔಷಧಿ ಮಾತ್ರ ಯಾವ ಧನ್ವಂತರಿಯ ಬಳಿಯೂ ಇಲ್ಲ. ಹಾಗಾದರೆ ತಿಂಮನ ಹಾಬಿ ಯಾವುದು ಎಂಬುದು ಸಹಜವಾಗಿ ಏಳುವ ಪ್ರಶ್ನೆ. ವಾರವಾರವೂ ವಾಚಕರ ಮುಂದು ಹುಚ್ಚು ಹುಚ್ಚಾಗಿ ಹರಟುವುದೇ ತಿಂಮನ ಹಾಬಿ ಏನು ? ಅಲ್ಲಾ ಸ್ವಾಮೀ ! ಮಧ್ಯೆ ಮಧ್ಯೆ ಒಂದೊಂದು ವಾರ ಸುಮ್ಮನೆ ಇರುವುದು ನನ್ನ ಹಾಬಿ ಎಂದನ್ನುತ್ತಾನೆ ತಿಂಮ.



ಸ್ತ್ರೀಯರಿಗೆ ಮಾತ್ರ ಹಾಬಿಗಳಿಲ್ಲವೆ ? ಯಾಕಿಲ್ಲ....
ಸೀತಮ್ಮನ ಗಂಡ ಹಾಗಂತೆ....ಪಾತಮ್ಮ ಗಂಡ ಹೀಗಂತೆ....

ಈ ಹಾಬಿಗೆ ಏನಾದರೂ ಚರಿತ್ರೆ ಇದೆಯೇ? ಎಂಬುದೊಬ್ಬರ ಪ್ರಶ್ನೆ. ಚರಿತ್ರೆ? ಬರೀ ಚರಿತ್ರೆ ಏಕೆ, ಪುರಾಣವೂ ಇದೆ ಎಂದು ತಿಂಮನ ಮರುತ್ತರ. ಮನುಷ್ಯ ಹುಟ್ಟುವ ಮುನ್ನವೇ ಈ ಹಾಬಿ ಹುಟ್ಟಿದೆ ಎಂದವನ ವಾದ. ಹೌದೇ, ಇದು ಹೇಗೆ ಎಂದು ಯಾರೂ ಹುಬ್ಬೇರಿಸಬಹುದು. ಹುಬ್ಬು ಇರುವುದಾದರೂ ಮತ್ತೇತಕ್ಕೆ? ತಲೆ, ಗಡ್ಡ, ಮೀಸೆಗಳನ್ನು ಬೋಳಿಸಿದವರುಂಟು, ಹುಬ್ಬನ್ನು ಯಾರಾದರೂ ಬೋಳಿಸುತ್ತಾರೆಯೆ? ಎಂದು ಕೇಳುತ್ತಾನೆ ಅಧಿಕಪ್ರಸಂಗಿಯಾದ ತಿಂಮ.

ಈ ಹಾಬಿ ಇಂದಿನದೆ, ನಿನ್ನಿನದೆ? ಪ್ರಕೃತಿ ಹುಟ್ಟಿದಂದೇ ಹಾಬಿ ಹುಟ್ಟಿತು. ಅದರ ಪರಿಣಾಮ ನಾವೆಲ್ಲ. ಎಲ್ಲ ಜೀವಿಗಳು ಹುಟ್ಟಿದುದೇ ಪ್ರಕೃತಿಯ ಹಾಬಿಯಿಂದ. ಈಗ ನೀವೇ ಹೇಳಿ. ಹಾಬಿ ಎಷ್ಟು ಹಳೆಯದು ಎಂಬುದನ್ನು. ಹರಿಶ್ಚಂದ್ರನಿಗೆ ಒಂದು ಹಾಬಿ—ಸತ್ಯವನ್ನೇ ನುಡಿಯುವುದು. ಅದರಿಂದ ಆತನಿಗಾದ ಕಷ್ಟ ಅಷ್ಟಿಷ್ಟೆ? ಆದರೂ ಹರಿಶ್ಚಂದ್ರ ತನ್ನ ಹಾಬಿಯನ್ನು ಬಿಟ್ಟನೇ? ಇಲ್ಲಾ ಇಲ್ಲಾ! ಆಗಲೇ ಹೇಳಲಿಲ್ಲವೇ, ಗುಣವಾಗದ ರೋಗ ಅದು ಎಂದು. ನಮ್ಮ ದೇವರುಗಳೆಲ್ಲರಿಗೂ ಒಂದಲ್ಲ ಒಂದು ಹಾಬಿ ಇದ್ದೇ ಇತ್ತು ಎಂದನ್ನುತ್ತಾನೆ ಶ್ರೀ ತಿಂಮ. ಹಾಗಾದರೆ ರಾಮನಿಗೆ ಏಕಪತ್ನೀವ್ರತ ಸಾಮಾನ್ಯ ಹಾಬಿಯೆ? ಎಷ್ಟು ಜನಿಕ್ಕಿದು ಸಾಧಿಸಿದೆ? ಒಂದೇ ಹಟ ಹಿಡಿದು ಶ್ರೀರಾಮ ಇದನ್ನು ಕಡೆಯವರೆಗೂ ಸಾಧಿಸಿದ, ಪಾಪ! ಒಟ್ಟಾರೆ ಸೀತಮ್ಮನ ಪುಣ್ಯ! ಈ ಪುಣ್ಯ ಎಷ್ಟು ತಾಯಂದಿರಿಗಿದೆ ಎಂದು ಕೇಳುತ್ತಾನೆ ತಿಂಮ. ಹಾಗಾದರೆ ತಿಂಮ್ಮ ಏಕಪತ್ನೀವ್ರತಸ್ಥನಲ್ಲವೆ? ಅಲ್ಲ ಅಲ್ಲ, ಅಂದರೆ? ಅವನಿಗೆ ಏಕಪತ್ನಿಯೂ ಇಲ್ಲ, ಅನೇಕ ಪತ್ನಿಯರೂ ಇಲ್ಲ. ಧನ್ಯ ತಿಂಮ ಹಾಗಾದರೆ. ಹೌದು, ಅವನ ಕೈ ಹಿಡಿಯಲಿದ್ದ ಹೆಣ್ಣೂ ಧನ್ಯಳೇ!

ಉಳಿದ ದೇವರುಗಳನ್ನು ಹಾಗೆಯೇ ನೋಡುತ್ತ ಬನ್ನಿ. ಶ್ರೀ ಕೃಷ್ಣ? ಆತನ ಹಾಬಿ ರಾಮನ ಹಾಬಿಗೆ "ಅಪೋಜಿಟ್ಟು?" ಹುಡುಗನಾಗಿದ್ದಾಗ ಹಾವು ಹಿಡಿದ, ಹಿರಿಯನಾದ ಮೇಲೆ ಹೆಣ್ಣು ಹಿಡಿದ. ಅಂತೂ ಅಪಾಯಕರವಾದ ಜಂತುಗಳೊಡನೆ ಆಡುವುದೇ ಆತನ ಹಾಬಿ. ಸಾಲದುದಕ್ಕೆ ಆಗಾಗ ಸಾಯಿ

ಬಾಬಾ ಆಗುತ್ತಿದ್ದ. ಪವಾಡಗಳನ್ನು ಮಾಡುತ್ತಿದ್ದ. ಇದವನ ಹಾಬಿಯಲ್ಲದೆ ಮತ್ತೇನು ?

ಕ್ಷತ್ರಿಯ ಕುಲವನ್ನೇ ನಿರ್ಮೂಲ ಮಾಡುವುದು ಪರಶುರಾಮನ ಹಾಬಿಯಾಗಿತ್ತು. ನಿರ್ಮೂಲ ಮಾಡಿದನೇ ? ಮಾಡಿದ, ನಮ್ಮ ನಂದಾ ಸಾಹೇಬರು ಕೇಂದ್ರದಲ್ಲಿ ಗೃಹ ಮಂತ್ರಿಯಾಗಿದ್ದಾಗ ಲಂಚ ನಿರ್ಮೂಲ ಮಾಡಿದಂತೆ. ಇಂದು ಕ್ಷತ್ರಿಯರೂ ಇದ್ದಾರೆ, ಲಂಚವೂ ಇದೆ.

ಅಂತೂ ಪುರಾಣ ಪುರುಷರೆಲ್ಲರಿಗೂ ಒಂದಲ್ಲ ಒಂದು ಹಾಬಿ ಇದ್ದೇ ಇದೆ. ಪಾಂಡವರಲ್ಲಿ ಅಗ್ರಜನಾದ ಧರ್ಮರಾಯನಿಗೆ ? ಆ ಪುಣ್ಯಾತ್ಮನಿಗೆ ಜೂಜಾಡುವ ಹಾಬಿ ಇರಲಿಲ್ಲವೇ ? ಆ ಹಾಬಿಯಿಂದ ಆದ ಅನಾಹುತ ಎಂತಹದು ? ರಾಜ್ಯವನ್ನು ಸೋತ. ಹಿರಿಯನಾದವನದು ರಾಜ್ಯ, ಸೋತರೆ ಸೋಲಲಿ ಎಂದು ಕ್ಷಮಿಸಬಹುದು. ಹೆಂಡತಿಯನ್ನೂ ಪಣಕ್ಕಿಟ್ಟು ಸೋಲುವುದೇ ? ದ್ರೌಪದಿ ಯಾರ ಹೆಂಡತಿ ? ಪಂಚ ಪಾಂಡವರ ಜಂಟಿ ಹೆಂಡತಿ. ಕೇವಲ ಒಂದೈದಾಂಶ ಮಾತ್ರ ಧರ್ಮರಾಯನದು. ಇಡೀ ಹೆಂಡತಿಯನ್ನು ಜೂಜಿನಲ್ಲಿ ಸೋತ ಧರ್ಮರಾಯ. ಇದು ನಿಜಕ್ಕೂ ಧರ್ಮರಾಯನ ಅಧರ್ಮದ ಹಾಬಿ ಎಂದನ್ನುತ್ತಾನೆ ತಿಂಮ. ಭೀಮಾರ್ಜುನ ನಕುಲ ಸಹದೇವರು ರಿಟ್ ಹಾಕಿದ್ದರೆ ಮಹಾಭಾರತದ ಕಥೆಯೇ ಬೇರೆಯಾಗುತ್ತಿತ್ತು. ಆ ಮಾತು ಬೇರೆ ಅನ್ನುತ್ತಾನೆ ತಿಂಮ.

ಹೌದೂ, ಈ ವಿಷಯ ಈಗೇಕೆ ಎಂದೊಬ್ಬ ವಾಚಕ ಮಹಾಶಯರ ಪ್ರಶ್ನೆ. ಅವರ ಪ್ರಸ್ತುತ ಪ್ರಶ್ನೆಗೆ ಇಲ್ಲಿದೆ ತಿಂಮನ ಉತ್ತರ. ಬೆಂಗಳೂರಿಗೆ ಬಂತು ಅಶ್ವಮೇಧ–ಕುದುರೆ ಜೂಜು. ಕುದುರೆಯ ಬಾಲಕ್ಕೆ ಹಣ ಕಟ್ಟಿ ಎಲ್ಲವನ್ನೂ–ಹೆಂಡತಿ ಇದ್ದವರು ಆಕೆಯ ತಾಳಿಯನ್ನೂ–ಕಟ್ಟಿ ಕಳೆದುಕೊಂಡು ಕತ್ತೆಯಾಗುತ್ತಾರೆ. ಈಗ ಸರಕಾರ ನಡೆಸುತ್ತಿರುವ ಲಾಟರಿಯೇ ಸಾಕು. ಜನ ದನವಾಗಿದೆ. ಈ ಕುದುರೆ ಜೂಜನ್ನೂ ಏಕೆ ತಂದಿರಿ ಎಂದು ಕೆಲವರ ತಕರಾರು.

ಈ ತಕರಾರಿನಲ್ಲಿ ಅರ್ಥವಿದೆ. ಬರೀ ಅರ್ಥ ಮಾತ್ರವಲ್ಲ ಸ್ವಾಮೀ, ಸದುದ್ದೇಶವೂ ಇದೆ ಎಂದು ಒಪ್ಪಿ ತಲೆ ಹಾಕುತ್ತಾನೆ ತಿಂಮ. ಆದರೆ....ಆದರೆ ಏನಂತೆ ? ತಿಂಮನದೂ ಒಂದು ತಕರಾರು, ಜೂಜು ಆಡುವುದು ಒಳ್ಳೆಯದಲ್ಲ ಎಂಬ ವಿಷಯದಲ್ಲಿ ಎರಡು ಅಭಿಪ್ರಾಯಗಳೇ ಇಲ್ಲ. ಕೆಟ್ಟದ್ದನ್ನು ಕೆಟ್ಟದು

ಎಂದು ಎಲ್ಲಿಯಾದರೂ ಹೇಳಬೇಕು, ಯಾವಾಗಲಾದರೂ ಹೇಳಬೇಕು ಆದರೆ ಯಾರು ಹೇಳಬೇಕು ಎಂಬುವೇ ತಿಂಮನ ಸವಾಲು.

ಕುದುರೆ ಜೂಜು ಬೇಡ ಎಂದು ಹೇಳುತ್ತಿರುವವರಾರು? ಯಾಕೆ? ನಾವು ಚುನಾಯಿಸಿ ಕಳಿಸಿದ ನಮ್ಮ ಶಾಸಕ ಮುಖಂಡರೇ ಹೇಳುತ್ತಿದ್ದಾರೆ. ತಪ್ಪೇನು? ಇದರ ಮೇಲೆ ತಿಂಮನ ಟೀಕೆ ಏನು? ಶಾಸಕರಾಗುವ ಮುನ್ನ ಇವರೆಲ್ಲ ಚುನಾವಣೆಗೆ ನಿಲ್ಲಲಿಲ್ಲವೇ? ಚುನಾವಣೆಯೇನು ಸಾಮಾನ್ಯ ಜೂಜೇ? ಕುದುರೆ ಜೂಜು ಕೆಟ್ಟದು ಎಂಬ ಮಾತನ್ನು ಚುನಾವಣೆ ಜೂಜು ಆಡುವವರು ಹೇಳುವುದೇ, ನಗೆಗೇಡು ಎಂದೆಂದು ಬಿದ್ದು ಬಿದ್ದು ನಗುತ್ತಾನೆ ತಿಂಮ.

ತಿಂಮನ ಮಾತೇನು ಬಿಡಿ. ಅಸೆಂಬ್ಲಿಯಲ್ಲಿ ಮಾತ್ರ ಚುನಾಯಿತರಿದ್ದಾರೆ, ಆದರೆ ಕೌನ್ಸಿಲ್‌ನಲ್ಲಿ? ದತ್ತು ಮಕ್ಕಳಂತಿರುವ ಒಬ್ಬಿಬ್ಬ ನಾಮಕರಣವಾದ ಸಾಕಿದ ಸದಸ್ಯರುಗಳಿಲ್ಲವೆ? ಅವರಂತೂ ಯಾವ ಚುನಾವಣೆಯ ಮುಖವನ್ನೂ ಕಂಡವರಲ್ಲವಲ್ಲಾ? ಅವರು ಹೇಳಬಹುದಲ್ಲಾ ಜೂಜು ಕೆಟ್ಟದೆಂದು? ಈಗ ತಿಂಮನ ಬಾಯಿ ಬಂದ್?

ಹಾಗೇನಿಲ್ಲ ಸ್ವಾಮೀ! ಎಂದು ತಿಂಮ ಮತ್ತೆ ಧ್ವನಿ ಎತ್ತುತ್ತಾನೆ. ಅಂತಹರು ಮದುವೆ ಆಗಿಲ್ಲವೆ? ಮಾನವ ಜೀವನದಲ್ಲಿ ಮದುವೆಕಿಂತಲೂ ದೊಡ್ಡ ಜೂಜು ಮತ್ತಾವುದಿದೆ?

ಜೂಜನಾಡುವುದು ಅತಿ ಕೆಟ್ಟದೆಂಬರು।
ಸೋಜಿಗವು ಇದು, ಅನ್ನುವವರಾರು ಗೊತ್ತೇನು?॥
ಈಜುತಲಿಹರು ಸಂಸಾರ ಸಾಗರದಿ।
ಮೋಜಿದು, ಮದುವೆಯೂ ಜೂಜಲ್ಲವೇನೋ ತಿಂಮ?॥

# ಕೋತಿಗೆ ಬೆಲೆ

ನಮ್ಮದು ರಾಮರಾಜ್ಯ—ಈ ಮಾತು ಸುಳ್ಳು ಅನ್ನುವ ಎದೆಗಾರಿಕೆ ಯಾರಿಗಿದೆ? ಎಂದು ಕೇಳುತ್ತಾನೆ ತಿಂಮ. ಹಾಗಾದರೆ ಇದು ರಾಮರಾಜ್ಯ ಅನ್ನುವುದಕ್ಕೆ ನಿಮ್ಮಲ್ಲಿ ಯಾವ ಸಾಕ್ಷ್ಯಾಧಾರಗಳು ಇವೆ? ಎಂದೊಬ್ಬರ ಪ್ರಶ್ನೆ. ಉತ್ತರಕ್ಕಾಗಿ ತಲೆ ಕೆರೆದುಕೊಳ್ಳುವ ಅವಶ್ಯಕತೆಯೇ ಇಲ್ಲ. ಲೋಕಸಭೆಯಲ್ಲಿ ಪ್ರಶ್ನೆಯೊಂದಕ್ಕೆ ಉತ್ತರಿಸುತ್ತ ಕೇಂದ್ರ ವಾಣಿಜ್ಯ ಖಾತೆ ಉಪಸಚಿವರು ಏನು ಹೇಳಿದ್ದಾರೆ?

ಈ ವರ್ಷ ಮೂವತ್ತು ಸಾವಿರ ಕೋತಿಗಳನ್ನು ರಫ್ತು ಮಾಡಲಿರುವುದರಿಂದ ಇಪ್ಪತ್ತು ಲಕ್ಷ ರೂಪಾಯಿ ವಿದೇಶಿ ವಿನಿಮಯ ಸಿಗುವ ನಿರೀಕ್ಷೆ ಎಂಬುದು ಉಪಸಚಿವರ ಹೇಳಿಕೆ. ಅಧಿಕಾರದಲ್ಲಿರುವವರ ಮಾತಿಗೂ ಬೆಲೆ ಇಲ್ಲದ ಈ ಕಾಲದಲ್ಲಿ ಕೋತಿಗೆ ಬೆಲೆ ಇದೆ ಅಂದಂತಾಯಿತು. ಇದಕ್ಕಾಗಿ ಸಂತೋಷ. ಈ ಬೆಲೆ ಹೇಗೆ ಬಂತು? ಇದಕ್ಕೆ ಪುರಾಣದಲ್ಲಿ ಆಧಾರವಿದೆ ಅನ್ನುತ್ತಾನೆ ಮೂರ್ಖ ತಿಂಮ.

ಶ್ರೀರಾಮನು, ತನ್ನ ಮಲತಾಯಿ ಕೈಕಾದೇವಿಗೆ ಮನಸೋತು ವೃದ ಮಹಾರಾಜನು ಕೊಟ್ಟ ಮೂರು ವರಗಳನ್ನು ಈಡೇರಿಸಿ ಕೊಡಲು ಅರಣ್ಯವಾಸಕ್ಕೆ (ವಿತ್ ಫ್ಯಾಮಿಲಿ) ಹೋಗಲಿಲ್ಲವೆ? ನನ್ನ ಗಂಡನೆಲ್ಲೋ ನಾನೂ ಅಲ್ಲಿಯೇ ಎಂದು ಸೀತಾಮಾತೆ ಪತಿದೇವನ ನೆರಳಾಗಿ ಹಿಂಬಾಲಿಸಿದಳು. ಇಂದಿಗೂ ಹಾಗೆ

ಗಂಡನನ್ನು ಹಿಂಬಾಲಿಸುವ ಹೆಂಡಂದಿರಿದ್ದಾರೆ ನಮ್ಮಲ್ಲಿ. ಕ್ಲಬ್ಬುಗಳಿಗೆ ಬರುತ್ತಿದ್ದಾರೆ, ಸಂತೋಷ! ಸಂತೋಷ! ಭ್ರಾತೃಭಕ್ತಿಗೆ ಹೆಸರಾದ ಲಕ್ಷ್ಮಣ ಮಾತ್ರ ರಾಜಭವನದಲ್ಲಿ ಹಾಯಾಗಿ ಉಂಡು ಮಲಗಿದನೆ? ಏನೂ ಅರಿಯದೆ ಹಸುಗೂಸಿನಂತೆ ಮಲಗಿ ನಿದ್ರಿಸುತ್ತಿದ್ದ ಹೆಂಡತಿ ಊರ್ಮಿಳೆಗೆ ಚಕ್ಕರ್ ಕೊಟ್ಟು (ಹೆಂಡತಿಗೆ ಚಕ್ಕರ್ ಕೊಡುವ ಚಟ ಗಂಡಿಗೆ ಆಗಲೇ ಇತ್ತೆ?) ಮೆತ್ತಗೆ ಹೊರ ಜಾರಿ ಬಂದು ಲಕ್ಷ್ಮಣನೂ ತನ್ನಣ್ಣ, ಅತ್ತಿಗೆಯೊಂದಿಗೆ ಘೋರಾರಣ್ಯಕ್ಕೆ ಹೊರಟುಹೋದ ಎಂಬುದು ಸರ್ವವಿದಿತ. ಮುಂದೇನಾಯಿತು? ಶ್ರೀರಾಮ ಪಿಕ್‌ನಿಕ್ ಬಂದಿದ್ದನೇ? ಮಹಾರಾಜನ ಪ್ರಥಮ ಪುತ್ರನಾದ ರಾಮ ತನಗಾಗಿ ಕಾದಿದ್ದ ಸಿಂಹಾಸನವನ್ನು ತ್ಯಾಗ ಮಾಡಿ ಬಂದ–ಅದೇ ರಾಮರಾಜ್ಯದಲ್ಲಿ ಮಂತ್ರಿಗಳು ಕುರ್ಚಿಗಳನ್ನು ತ್ಯಾಗ ಮಾಡುವ ಮಾತು ಹಾಗಿರಲಿ, ಹಿಂದೊಮ್ಮೆ ಅಧಿಕಾರದಲ್ಲಿದ್ದಾಗ ಸರಕಾರದಿಂದ ಉಪಯೋಗಕ್ಕಾಗಿ ಪಡೆದಿದ್ದ ಕುರ್ಚಿ ಮೇಜುಗಳನ್ನೇ ಅಧಿಕಾರ ಹೋದನಂತರ ಮರಳಿ ಕೊಡಲಿಲ್ಲ ಎಂದು ಶೀಲತ್ಯಾಗರ ಮೇಲೆ ಗುಲ್ಲೂ ಎದ್ದಿತ್ತಲ್ಲವೆ? ಆ ಮಾತು ಇಲ್ಲಿ ಅಪ್ರಸ್ತುತ–ಶ್ರೀರಾಮ ತಮ್ಮ ಮತ್ತು ಹೆಂಡತಿಯೊಡನೆ ಗೊಂಡಾರಣ್ಯವನ್ನು ಸೇರಿದ. ಅಲ್ಲಿ (ದುಷ್ಟ?) ರಾವಣನ ಕಾಟ, ಸೀತೆಯನ್ನು ಅಪಹರಿಸಿಕೊಂಡು ಹೋದ. ಆಗ ಕಳ್ಳ ಮಾಲನ್ನು ಪತ್ತೆ ಮಾಡಲು ಪೋಲೀಸ್ ನಾಯಿಗಳು ಇರಲಿಲ್ಲ. ಆಗೇನಾದರೂ ನಾಯಿಗಳಿದ್ದು ಸೀತಾಮಾತೆ ಇರುವ ಸ್ಥಳದವರೆಗೂ ಮೂಸುತ್ತ ಹೋಗಿ ಪತ್ತೆ ಹಚ್ಚಿದ್ದರೆ ಇಂದು ನಾಯಿಗಳಿಗೂ ಬೆಲೆ ಬರುತ್ತಿರಲಿಲ್ಲವೆ? ನಾಯಿಗೇ ಪುಣ್ಯವಿಲ್ಲ. ಲಂಕಾಧಿಪತಿಯಾದ ರಾವಣಾಸುರನು ಸೀತಾಮಾತೆಯನ್ನು ಕದ್ದೊಯ್ದು ತನ್ನ ರಾಜ್ಯವಾದ ಲಂಕೆಯಲ್ಲಿ (ಅದು ಇಂದಿನ ಸಿಲೋನು ಹೌದೇ? ಶ್ರೀಮತಿ ಬಂಡಾರನಾಯಿಕೆ ಅವರ ಅಭಿಪ್ರಾಯ ಬೇಕು) ಅಶೋಕವನದಲ್ಲಿಟ್ಟಿದ್ದಾನೆ ಎಂಬುದು ಶ್ರೀರಾಮನಿಗೆ ತಿಳಿಯಿತು. ಹೇಗೆ ತಿಳಿಯಿತು? ಅದು ಅಧಿಕ ಪ್ರಸಂಗಿಯ ಪ್ರಶ್ನೆ. ಶ್ರೀರಾಮ ದೇವರಲ್ಲವೇನ್ರೀ? ಲಂಕೆಗೆ ಹೋಗುವುದು ಹೇಗೆ? ಆ ಕಾಲದಲ್ಲಿ ಲಂಕೆಗೆ ಹೋಗುವುದು ಈ ಕಾಲದಲ್ಲಿ ಚಂದ್ರಲೋಕಕ್ಕೆ ಹೋಗುವಷ್ಟು ಸುಲಭವಿತ್ತೆ? ಏರ್ ಪೋರ್ಟ್‌ಗಳಿಲ್ಲ. ಆದಕಾರಣ ಏರೋಪ್ಲೇನ್‌ಗಳಿಲ್ಲ. ಸಮುದ್ರವನ್ನು ದಾಟಿ ಹೋಗಬೇಕು—ಅದೊಂದೇ ಮಾರ್ಗ. ಕಪಿಶ್ರೇಷ್ಠನಾದ ಹನು

ನುಂತ ಅಡ್ವಾನ್ಸಾಗಿ ಲಂಕೆಗೆ ಹಾರಿ ಹೋಗಿ ವೈದೇಹಿ ಮಾತೆಯನ್ನು ಕಂಡು ಬಂದು ತನ್ನ ಸಿ. ಐ. ಡಿ. ವರದಿಯನ್ನು ತಂದೊಪ್ಪಿಸಿದ. ಆಗ ಶ್ರೀರಾಮ ನಿರ್ಧರಿಸಿದ—ಲಂಕೆಗೆ ಸೇನೆಯೊಂದಿಗೆ ಹೋಗಿ ರಾವಣನನ್ನು ಸಂಹರಿಸಿ ಸೀತಾ ಮಾತೆಯನ್ನು ಕರೆದುಕೊಂಡು ಬರತಕ್ಕದ್ದು ಎಂದು. ನಾಲ್ಕೂ ದಿಕ್ಕಿನಲ್ಲೂ ನೀರಿನಿಂದ ಆವರಿಸಲ್ಪಟ್ಟ ದ್ವೀಪವಾಗಿರುವ ಲಂಕೆಗೆ ಸೇನೆ ಹೋಗಿ ತಲುಪುವುದು ಹೇಗೆ ? ಸಮುದ್ರಕ್ಕೆ ಸೇತುವೆ ಕಟ್ಟಲೇಬೇಕು.

ಶ್ರೀರಾಮನ ಪುಣ್ಯ, ಆಗ ಪಿ. ಡಬ್ಲ್ಯು. ಡಿ. (ಪಬ್ಲಿಕ್ ವೇಸ್ಟ್ ಡಿಪಾರ್ಟ್‌ಮೆಂಟ್) ಇರಲಿಲ್ಲ. ಇದ್ದಿದ್ದರೇನು ಗತಿ ? ಪಿ. ಡಬ್ಲ್ಯು. ಡಿ. ಮಂತ್ರಿಗಳೊಬ್ಬರು ಇರುತ್ತಿದ್ದರು. ಚೀಫ್ ಎಂಜಿನೀರ್, ಎಕ್ಸಿಕ್ಯುಟಿವ್ ಎಂಜಿನೀರ್, ಅಸಿಸ್ಟೆಂಟ್ ಎಂಜಿನೀರ್, ಸಬ್ ಎಂಜಿನೀರ್ ಇರುತ್ತಿದ್ದರು. ಆಗ ಇವರೆಲ್ಲರ ಸಲುವಾಗಿ ಯಾದರೂ ಕಂಟ್ರಾಕ್ಟರ್‌ಗಳು ಇದ್ದೇ ಇರುತ್ತಿದ್ದರು. ಯಥಾಪ್ರಕಾರ ಸಿಮೆಂಟಿನ ಚೀಲಗಳು ರಾತ್ರೋರಾತ್ರಿ ಸರಕಾರೀ ಲಾರಿಗಳಲ್ಲಿ ಮಾಯ ! ಮತ್ತೊಂದು ಶರಾವತಿ ಪ್ರಕರಣ ? ವಿರೋಧಿ ಪಕ್ಷದವರಿಂದ ಆರ್ಭಟ. ಸಮಿತಿ ಯಿಂದ ವಿಚಾರಣೆ. ಇವೆಲ್ಲ ಮುಗಿಯುವವರೆಗೂ ಸೀತೆ ಕಾದಿರಬೇಕೇ ? ದೇವರು ದೊಡ್ಡವನಿದ್ದ, ಈ ಯಾವ ಹಿಂಸೆಯೂ ಇರಲಿಲ್ಲ. ಆಗ ಸ್ವಯಂ ಬುದ್ಧಿಯಿಂದ ಸಹಾಯಕ್ಕೆ ಬಂತು ವಾನರಸೇನೆ. ಕೋತಿಗಳು ತೋಳೇರಿಸಿ ನಿಂತುವು—ಕೆಲವೇ ಕಾಲದಲ್ಲಿ ತೇಲುವ ಸೇತುವೆ ನಿರ್ಮಾಣವಾಗಿ ಹೋಯಿತು. ಶ್ರೀರಾಮನ ಮಿಲಿಟರಿ ಹಾಯಾಗಿ ಬೆಳಂಗಳಲ್ಲಿ ಸಿಮೆಂಟ್ ರಸ್ತೆಯಲ್ಲಿ ನಡೆದು ಕೊಂಡು ಹೋಗುವಂತೆ ಆ ತೇಲುವ ಸೇತುವೆಯ ಮೇಲೆ ನಡೆದು ಬಂದು ಲಂಕಾ ಪುರಿಯನ್ನು ತಲುಪಿದುವು. ಅಲ್ಲಿ ರಾವಣನೊಡನೆ ಶ್ರೀರಾಮನ ಯುದ್ಧ. ಆ ಯುದ್ಧದಲ್ಲಿಯೂ ಕೋತಿಗಳ ಸಹಾಯ ರಾಮನಿಗೇ. ಸತ್ಯಕ್ಕೆ ಜಯ ಎಂಬ ಕಾಲ ಅದು. ಈಗ ? ಈಗಿನ ಪ್ರಶ್ನೆ ಈಗ ಬೇಡ. ಇಂದಿನ ವಿಷಯವನ್ನು ಮುಂದೊಂದು ದಿನ ಮಾತನಾಡುವುದು ನಮಗೇ ಕ್ಷೇಮ ಎಂದನ್ನುತ್ತಾನೆ ಲವ್‌ಕಿಕವನ್ನು ಅರಿತ ತಿಂಮ. ಒಂದು ದೃಷ್ಟಿಯಿಂದ ಇದು ಸರಿಯೇ. ನಿಜ ಲಿಂಗಪ್ಪನವರನ್ನೋ, ವೀರೇಂದ್ರ ಪಾಟೀಲರನ್ನೋ ಇಂದು ಬೈದರೆ ದಕ್ಕುತ್ತದೆ. ಅದಕ್ಕೆ ಬದಲಾಗಿ........ಛಿ ! ಉಂಟೆ ಎಲ್ಲಾದರೂ ? ಆ ಮಾತೇ ಬೇಡ. ಏಕೆ ?

ಯಾವಾಗಾವುದು ಘಟ್ಟೋ ।
ಆವಾಗಾ ಮಾತನಾಡಿ ಅನ್ಯರ ಮ ॥
ನ ವನ್ ನೋಯಿಸದೆ ತಾನೊಯ್ಯದೆ ಎಸ್ಕೇಪ್ ಆ ।
ಗುವವ ಧನ್ಯನೊ ತಿಂಮಾ ॥

ಮಧ್ಯೆ ಈ ಅಡ್ಡ ಕಥೆ ಬಂದು ಮುಖ್ಯ ವಿಷಯವೇ ಮರೆತು ಹೋಯಿತು. ಹಾಂ! ರಾಮ ರಾವಣರ ಯುದ್ಧದಲ್ಲಿ ಅಸಹಾಯ ಶೂರನಾದ ರಾಮನಿಗೆ ಕೋತಿಗಳು ಸಹಾಯವನ್ನು ಮಾಡಿದವು. ಇದರಿಂದಾಗಿ ವಿಜಯಶಾಲಿಯಾದ ಶ್ರೀರಾಮ ಪತ್ನೀ ಸಮೇತನಾಗಿ ಮರಳಿ ಬಂದ. ಬೀಳ್ಕೊಡುವಾಗ ಕೋತಿಗಳು ಸಾಲಾಗಿ ಕೈ ಮುಗಿದು ನಿಂತು ಕೇಳಿಕೊಂಡುವು. ಏನನ್ನು? ನಮ್ಮ ಗತಿ ಏನು ಶ್ರೀರಾಮಾ ಎಂದು ಆರ್ತಧ್ವನಿಯಲ್ಲಿ ಕೇಳಿದಾಗ ಕರುಣಾಮೂರ್ತಿಯಾದ ಶ್ರೀರಾಮ ಈ ಅನುಗ್ರಹ ಭಾಷಣವನ್ನು ಮಾಡಿದ.

"ಎಲೈ ಕೋತಿಶೂರರೇ! ನೀವೂ ಮಾನವರಂತೆ ಶೀಘ್ರ ಫಲಕ್ಕಾಗಿ ಆವಸರಪಡಬೇಡಿ. ಈ ದುರ್ಗುಣವು ಕೇವಲ ನರಮನುಷ್ಯರಿಗಷ್ಟೆ ಇರಲಿ. ನೀವು ಕೆಲಕಾಲ ನಿಶ್ಚಿಂತರಾಗಿ ಇರಿ. ಮುಂದು ಕಲಿಯುಗವು ಬರಲಿದೆ, ಆಗ ಭಾರತದಲ್ಲಿ (ಮದ್ರಾಸು ಮತ್ತೆ ಕೆಲವು ರಾಜ್ಯಗಳನ್ನುಳಿದು) ಎಲ್ಲೆಲ್ಲಿಯೂ ನನ್ನದೇ ರಾಜ. ಅದು ರಾಮರಾಜ್ಯವೆಂದು ಪತ್ರಿಕೆಗಳಲ್ಲಿ ಮಾತ್ರ ಪ್ರಸಿದ್ಧಿ ಯಾಗುತ್ತದೆ. ಆಗ ನಿಮಗೆ ನಿಜವಾಗಿಯೂ ಬೆಲೆ ಬರುತ್ತದೆ. ಮಂತ್ರಿ ಮಾನ್ಯರುಗಳಂತೆ ನೀವೂ ಸಹ ಸರಕಾರೀ ಕರ್ಚಿನಲ್ಲಿ ಪರದೇಶಗಳಿಗೆ ಹೋಗು ತ್ತೀರಿ."

ಕೋತಿಗಳು ಅತಿ ಸಂತೋಷದಿಂದ ಚಪ್ಪಾಳೆ ತಟ್ಟಿ, ಮುಂದೆಂದೋ ಬರ ಲಿರುವ ಆ ರಾಮ ರಾಜ್ಯಕ್ಕಾಗಿ ಕಾಯ್ದು ಕುಳಿತವು. ಅದು ವ್ಯರ್ಥವಾಯಿತೇ? ಛಿ! ದೇವವಾಣಿ ಸುಳ್ಳಾಗುವುದುಂಟೆ? ಕಲಿಯುಗವೂ ಬಂತು, ಭರತ ದೇಶದಲ್ಲಿ ರಾಮರಾಜ್ಯ ಸ್ಥಾಪನೆಯಾಯಿತು. ಶ್ರೀರಾಮನು ಅಂದೇ ಹೇಳಿದಂತೆ ಕೋತಿ ಗಳಿಗೆ ಬೆಲೆ ಬಂತು. ಎಷ್ಟು ಒಂದು ಕೋತಿಯ ಬೆಲೆ? ಮೂರು ಕೋತಿಗಳ ಬೆಲೆ ಇಪ್ಪತ್ತು ರೂಪಾಯಿ, ಒಂದು ಕೋತಿಯ ಬೆಲೆ ಆರು ರೂಪಾಯಿ ಮತ್ತು

ಅರವತ್ತಾರು ಪೈಸೆ. ಇಷ್ಟೇ ಅಲ್ಲದೆ ಸರಕಾರೀ ಕರ್ಚಿನಲ್ಲಿ ವಿದೇಶಗಳಿಗೆ ಇವುಗಳ ಪ್ರಯಾಣ. ಆದುದರಿಂದಲೇ ಇದು ರಾಮರಾಜ್ಯ ಎಂಬುದು ತಿಂಮನ ಕೋತಿವಾದ.

ಈ ವಾದವನ್ನು ಪುಷ್ಟೀಕರಿಸಲು ಇನ್ನೊಂದು ಅಂಶವೂ ಇದೆ—ಪ್ರತಿಯೊಬ್ಬ ಗಂಡಸು ರಾಮನಂತಿರಬೇಕು, ಪ್ರತಿಯೊಬ್ಬ ಹೆಂಗಸು ಸೀತೆಯಂತಿರಬೇಕು. ಅಂದರೆ ಜಗತ್ತಿನಲ್ಲಿ ರಾಮರಾಜ್ಯ ಸ್ಥಾಪನೆಯಾಗುವುದು ಎಂಬುದು ಹಿರಿಯರ ಹೇಳಿಕೆ. ಈಗ ನಮ್ಮ ದೇಶದಲ್ಲಿ ಗಂಡಸರೆಲ್ಲರೂ ಮುಸ್ಲಿಮರ ಹೊರತು ಶ್ರೀರಾಮರೇ! ಏಕೆ? ಏಕಪತ್ನೀತ್ವ ಕಾಯಿದೆಯೇ ಆಗಿದೆ. ಒಂದಕ್ಕಿಂತ ಹೆಚ್ಚು ಹೆಂಡಂದಿರನ್ನು ಮದುವೆ ಆದರೆ ಅವನು ಜೇಲು ಸೇರುತ್ತಾನೆ—ಸೇರದೆ ಮನೆಯಲ್ಲಿದ್ದರಂತೂ ಅವನಿಗೆ ಮನೆಯೇ ಸಾಕ್ಷಾತ್ ನರಕವಾಗುತ್ತದೆ. ಹೀಗಿರುವಾಗ ನಮ್ಮಲ್ಲಿ ಪ್ರತಿಯೊಬ್ಬ ಗಂಡಸೂ ಶ್ರೀರಾಮನೇ! ಗಂಡ ಶ್ರೀರಾಮನಾದಾಗ ಹೆಂಡತಿ ಸೀತೆಯಾಗುವುದರಲ್ಲಿ ತಪ್ಪೇನಿದೆ? ಆಕೆಯ ತಕರಾರಿಗೆ ಇದ್ದ ಮುಖ್ಯ ಕಾರಣವೇ ಹೋಯಿತಲ್ಲಾ? ಇದರಿಂದಾಗಿ ಸ್ತ್ರೀಯರೆಲ್ಲರೂ ಸೀತೆಯರೇ. ಆದುದರಿಂದ ಎಂದೋ ರಾಮರಾಜ್ಯ ಸ್ಥಾಪನೆಯಾಗಿ ಹೋಗಿದೆ.

ಇವೆಲ್ಲವು ಏನೇ ಇರಲಿ, ಕೋತಿಗಂತೂ ಬೆಲೆ ಬಂತು. ಸಂತೋಷ!

ಕೊಂಚ ದೂರದೃಷ್ಟಿ ಉಳ್ಳವರಿಗೆ ಒಂದು ದೊಡ್ಡ ಯೋಚನೆ. ಯಾವುದು ಯೋಚನೆ? ನಾವು ಮನುಷ್ಯರಲ್ಲಿ ಜಾರಿಗೆ ತಂದಿರುವ 'ಒಂದು ಬೇಕು, ಎರಡು ಸಾಕು, ಮೂರಾದರೆ ಗಂಡನನ್ನು ಹೊರಹಾಕು' ಎಂಬ ಸರಕಾರೀ ತತ್ವವನ್ನು ಕೋತಿಗಳಿಗೆ ಬೋಧಿಸಿಲ್ಲ, ನಿಜ. ನಮ್ಮ ದೇಶದಲ್ಲಿ ಕೋತಿಗಳಿಗೆ ಎಂದೂ ಕೊರತೆ ಇಲ್ಲ ಎಂಬುದು ನಮಗೆ ಖಾತ್ರಿಯಾಗಿದೆ. ಆದರೆ....ಆದರೇನು? ನಾವು ಹೀಗೆಯೇ ಹಣದಾಶೆಗಾಗಿ ನಿಮ್ಮಲ್ಲಿರುವ ಕೋತಿಗಳನ್ನು ಹಿಡಿದು ಹಿಡಿದು ಸಹಸ್ರಗಟ್ಟಲೆ ಕೋತಿಗಳನ್ನು ಪರದೇಶಗಳಿಗೆ ರಫ್ತು ಮಾಡುತ್ತ ಹೋದರೆ ನಮ್ಮ ಕಪಿಸಂಪತ್ತು ಕ್ರಮೇಣ ಕಡಮೆಯಾಗಿ ನಮ್ಮ ದೇಶದಲ್ಲಿ ಕೋತಿಗಳೇ ಇಲ್ಲವಾದರೆ ಗತಿ?

ಇದು ಶುದ್ಧ ದಡ್ಡ ಯೋಚನೆ ಎನ್ನುತ್ತಾನೆ ತಿಂಮ. ನಮ್ಮ ಕಪಿಸಂಪತ್ತು

ದಿನೇದಿನೇ ವೃದ್ಧಿಯಾಗುತ್ತಲೇ ಇದೆ, ಇದು ಖಾಲಿಯಾಗುವುದು ಸಾಧ್ಯವೇ ಇಲ್ಲ ಎಂಡವನ ನಂಬಿಕೆ. ಈ ನಂಬಿಕೆಗೆ ಆಧಾರ ?

ಡಾರ್ವಿನನ ವಾದ ಒಂದಿತ್ತು—ಕಪಿಯಿಂದ ಮಾನವನಾದ ಎಂಬುದದು. ಈಗ ಆ ವಾದ ತಿರುವುಮುರುವು ಆಗಿದೆ. ಶಾಲೆ, ಕಾಲೇಜುಗಳಿಗೆ ಹೋಗುವ ನಿಮ್ಮ ಹೆಂಣು, ಗಂಡು ಮಕ್ಕಳನ್ನು ನೋಡಿ. ಡಾರ್ವಿನನ ವಾದ ತಿರುವು ಮುರುವು ಆಗಿದೆ ಎಂಬ ಮಾತಿನ ಸತ್ಯದ ಅರಿವು ನಿಮಗೇ ಆಗುತ್ತದೆ. ಮಾನವರಾದ ನೀವು ಹೇಗಿದ್ದೀರಿ ಎಂಬುದನ್ನು ಕನ್ನಡಿಯಲ್ಲಿ ಮೊದಲು ನೋಡಿಕೊಳ್ಳಿ. ಅನಂತರ ನಿಮ್ಮ ಮಕ್ಕಳನ್ನು ನೋಡಿ ದಯವಿಟ್ಟು. ಅವರ ವೇಷಭೂಷಣಗಳು, ಕೂದಲು, ಅವುಗಳ ಹಾಡು ಕುಣಿತ, ನಡೆನುಡಿ ನಿಮಗೆ ಏನು ಹೇಳುತ್ತವೆ ? ಈಗಾದರೂ ನಿಮಗೆ ಖಾತ್ರಿಯಾಯಿತೇ ? ಹೌದು ಹೌದು. ಡಾರ್ವಿನನ ವಾದ ತಿರುವುಮುರುವಾಗಿದೆ. ಮಾನವನಿಂದ ಕಪಿಗಳು ಬರುತ್ತವೆ. ಇನ್ನೇಕೆ ನಿಮಗಾ ದಡ್ಡ ಭಯ ? ನಮ್ಮ ಭಾರತಕ್ಕೆ ಕಪಿ ಸಂಪತ್ತಿಗೆ ಎಂದೂ ಬಡತನವೇ ಇಲ್ಲ. ಶತಮಾನಗಳು ನಾವು ನಮ್ಮಲ್ಲಿಯ ಹೊಸ ಹೊಸ ನಮೂನೆಯ ಕೋತಿಗಳನ್ನು ಹಿಡಿದು ಪರದೇಶಕ್ಕೆ ಕಳಿಸಬಲ್ಲೆವು, ಮನುಷ್ಯರಿಗಿಲ್ಲದ ಬೆಲೆ ಕಪಿಗಳಿಗಿದೆ. ಇದುವೇ ರಾಮರಾಜ್ಯ !

ಅಂದೊಂದು ಕಾಲದಲಿ ಕುಪಿತನಾದಾಗೆಲ್ಲ ।
ತಂದೆ ಮಗನನು ಕೋತಿ ಎಂದನುತಿದ್ದ ॥
ಇಂದು ಏನಾಗಿದೆ ? ಕೋತಿ ಮರಿಯಾ ।
ತಂದೆ ಮನುಜಾ ಎನ್ನುವ ನೋಡು ತಿಂಮ ॥

# ನಮ್ಮ ಪ್ರಕಟಣೆಗಳು

| | | |
|---|---|---|
| ರಾಗಸುಧಾ | ಎ. ಪಂಕಜ | 4–00 |
| ಇಂದ್ರಿ–ಸುಂದ್ರಿ | ದಾಶರಥಿ ದೀಕ್ಷಿತ್ | 3–00 |
| ಮಧುರಜಾಲ | ಉಷಾದೇವಿ | 4–00 |
| ಜೀವರಥ | ವಸಂತಾದೇವಿ ಅನಕೃ | 3–00 |
| ಅನುರಾಗ ಬಂಧನ | ಎ. ಪಂಕಜ | 4–00 |
| ಎಲ್ಲಾ ಅವನ ಹೆಸರಿನಲ್ಲೆ (೧) | ತ. ರಾ. ಸು. | 4–00 |
| ಎಲ್ಲಾ ಅವನ ಹೆಸರಿನಲ್ಲೆ (೨) | ತ. ರಾ. ಸು. | 3–00 |
| ಬಯಲುದಾರಿ | ಭಾರತೀಸುತ | 8–00 |
| ಹೆಣ್ಣಿನ ಹಂಬಲ | ನಾಡಿಗೇರ ಕೃಷ್ಣರಾಯ | 4–00 |
| ಮನತುಂಬಿದ ಮಡದಿ | ಎಂ. ಕೆ. ಇಂದಿರಾ | 4–00 |
| ಎಡಕಲ್ಲು ಗುಡ್ಡದ ಮೇಲೆ | ಭಾರತೀಸುತ | 5–00 |
| ವಸುಮತಿ | ವಿಶಾಲಾಕ್ಷಿ ದಕ್ಷಿಣಾಮೂರ್ತಿ | 6–00 |
| ಚಿನ್ನದ ಹೂವು | ಪ್ರೇಮಲತಾ ಸುಂದರೇಶನ್ | 5–00 |
| ಪ್ರೇಮದ ಕಣ್ಣು | ಮ. ನ. ಮೂರ್ತಿ | 5–00 |
| ಅನುರಾಗ-ಸುಧಾ | ದಾಶರಥಿ ದೀಕ್ಷಿತ್ | 4–00 |
| ಕಾರ್ತೀಕ ಸೋಮವಾರ | ರಾ. ಶಿ. | 5–00 |
| ಸಾಕಿದ ಅಳಿಯ | ಅ.ನ.ಕೃ. ಕೊನೆ ಕಾದಂಬರಿ | 5–00 |
| ಶೋಭನ | ಗೀತಾ ಕುಲಕರ್ಣಿ | 6–00 |
| ಕೈಲಾಸಂರವರ ಸ್ಮರಣೆ | ಕೆ. ವಿ. ಅಯ್ಯರ್ | 4–00 |
| ಹೊಸ ಹಾದಿಯಲ್ಲಿ | ಎ. ಪಂಕಜ | 5–00 |
| ಗ್ರಾಂಪಾಯಣ | ದಾಶರಥಿ ದೀಕ್ಷಿತ್ | 4–00 |
| ಬ್ರಹ್ಮಚಾರಿ | ಎಂ. ಕೆ. ಇಂದಿರಾ | 5–00 |
| ಹೊಂಬಿಸಿಲು | ಉಷಾ ನವರತ್ನರಾಮ್ | 6–00 |

ಮಂಜು ಕರೆ
ಸಂಶಯ
ಕ್ಷಣ



# ನಮ್ಮಲ್ಲಿ ದೊರೆಯುವ ಕನ್ನಡ ಪ್ರ

ಕಾದಂಬರಿಗಳು —— {ಸಾಮಾಜಿಕ, ಐತಿಹಾಸಿಕ
ಸಣ್ಣ ಕಥೆಗಳು
ಕವನ ಸಂಗ್ರಹಗಳು
ನಾಟಕಗಳು
ಆಧ್ಯಾತ್ಮಿಕ ಮತ್ತು ಪೌರಾಣಿಕ ಗ್ರಂಥಗ
ವಿಶ್ವವಿದ್ಯಾಲಯದ ಪ್ರಕಟಣೆಗಳು
ಸಂಗೀತ ಪುಸ್ತಕಗಳು
ಶಿಶು ಸಾಹಿತ್ಯ
ಪ್ರಬಂಧ ಹಾಗೂ ಪ್ರೌಢಗ್ರಂಥಗಳು
ಜ್ಯೋತಿಷ್ಯ ಶಾಸ್ತ್ರಗ್ರಂಥಗಳು
ವೈಜ್ಞಾನಿಕ ಪುಸ್ತಕಗಳು
ಹಾಗೂ ಇತರ ಪುಸ್ತಕಗಳಿಗಾಗಿ ಒಮ್ಮೆ ಭೇ



ಅಥವಾ
ಉಚಿತ ಪುಸ್ತಕಗಳ ಪಟ್ಟಿಗಾಗಿ ಇಂದೇ ಬರೆ

ಗೀತಾ ಏಜನ್ಸೀಸ್
ಬಳೇಪೇಟೆ ಚಾಕ * ಬೆಂಗಳೂ

Cover Printed by: Bhaskar Printers, Mamulpet, B